ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಸೆಪ್ಟೆಂಬರ್ ೧೯೯೬

ವಿಭಾ:
ಜಗತ್ತಿನ
ಮೊಟ್ಟಮೊದಲ
ಮಾವುಟಿಗಳು !

ವ್ಯಾವಹಾರಿಕ ಯಶಸ್ಸು:

೧೦ ತಪ್ಪು ಕಲ್ಪನೆಗಳು ...

ಲೆ: ರೂ. ೬-೦೦



# ಕಸ್ತೂರಿ

**ಕನ್ನಡ ಡೈಜೆಸ್ಟ್**


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್. ಎ. ಜೋಶಿ

ಸಹ ಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ. ಆರ್. ಪಾಟೀಲ
ಎಂ. ಎಸ್. ಶಶೀಧರ

ಮುಖಪುಟ:

ಮಂದಹಾಸ

ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦೦೨೦.


ಎರಡು ಸಂತಸದ ಸಂಗತಿಗಳು 'ಕಸ್ತೂರಿ'ಯ ಸಂಭ್ರಮವನ್ನು ಇನ್ನಷ್ಟು ಹೆಚ್ಚಿಸಿವೆ.

ಒಂದಂತೂ ಈ ನಿಮ್ಮ ಮೆಚ್ಚಿನ ಪತ್ರಿಕೆಗೇ ಸಂಬಂಧಿಸಿದ್ದು. ನೀವೆಲ್ಲ ನಾಲ್ಕು ದಶಕಗಳಿಂದಲೂ ಮೆಚ್ಚಿಕೊಂಡು ಬಂದಿರುವ 'ಕಸ್ತೂರಿ' ಈಗ ೪೧ನೆಯ ವರ್ಷದಲ್ಲಿ ಕಾಲಿಕ್ಕುತ್ತಿದೆ. ಹುಟ್ಟಿದಾರಭ್ಯವೂ ಯಾವುದೇ ಥಳಕು-ಗಿಲುಕಿನ ಗೀಳು ಹಚ್ಚಿಕೊಳ್ಳದೆ, ಕೇವಲ ಜನಪ್ರಿಯತೆಯನ್ನೂ ಆಧರಿಸದೆ, ಈ ವಿಶ್ವದ ಎಲ್ಲ ವಿದ್ಯಮಾನಗಳ ಕುರಿತು ತನ್ನ ಓದುಗರಿಗೆ ಮಾಹಿತಿಯನ್ನು ನೀಡುತ್ತಲೇ ಬಂದಿರುವ ಪತ್ರಿಕೆಯಿದು. "ನನ್ನ ಎಲ್‌ಐಸಿ ಪಾಲಿಸಿಗಳಷ್ಟೇ ಭದ್ರವಾಗಿ 'ಕಸ್ತೂರಿ'ಯ ಎಲ್ಲಾ ಸಂಚಿಕೆಗಳನ್ನು ಕಾಪಾಡಿಟ್ಟುಕೊಂಡಿದ್ದೇನೆ" ಎಂದು ಹೆಮ್ಮೆಯಿಂದ ಹೇಳುವ ಜನಕ್ಕೂ ಕಮ್ಮಿಯೇನಿಲ್ಲ. "ಅಪ್ಪ ಮಗನಿಗೆ, ಆತ ತನ್ನ ಮಗನಿಗೆ 'ಕಸ್ತೂರಿ'ಯ ಸಂಚಿಕೆಗಳನ್ನು ಕೊಟ್ಟು 'ಓದು, ಬಾಳಿಗೆ ಬೆಳಕು ಸಿಗುತ್ತೆ' ಎಂದು ಹೇಳಿರುವುದನ್ನೂ ನಾನು ಕೇಳಿದ್ದೇನೆ. ಇದು ಬರಿ ಕೇಳಿಕೆಯ ಮಾತಲ್ಲ, ಸ್ವತಃ ಅನುಭವಕ್ಕೆ ಬಂದಂಥದು" ಎಂದು ಮೊನ್ನೆ ಒಬ್ಬ ಹಿರಿಯರು ನಮ್ಮ ಕಾರ್ಯಾಲಯಕ್ಕೆ ಬಂದಾಗ ಹೇಳುತ್ತಲಿದ್ದರು.

ಈ ಸಂದರ್ಭದಲ್ಲಿ ತನ್ನ ಓದುಗರಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ಹೊಸ ಹುರುಪಿನೊಂದಿಗೆ ಸಿದ್ಧ ಎಂದು ಹೇಳುತ್ತ 'ಕಸ್ತೂರಿ' ಕನ್ನಡಿಗರ ಅಭಿಮಾನಕ್ಕೆ ತಲೆಬಾಗುತ್ತದೆ.

*

ಕನ್ನಡದ ವರನಟ ಸಾರ್ವಭೌಮ ಡಾ. ರಾಜಕುಮಾರರಿಗೆ ಈ ವರ್ಷದ 'ಫಾಲ್ಕೆ' ಪ್ರಶಸ್ತಿ ಸಂದಿರುವುದು ಎರಡನೆಯ ಸಂತಸದ ಸಂಗತಿ. ಹೆಸರು ಕೇಳಿದರೇ ಕಣ್ಣೆದುರು ಆ ಮುಖ ತೇಲಿಬರುವಷ್ಟು ಕನ್ನಡಿಗರ ಹೃದಯ ಸಿಂಹಾಸನದಲ್ಲಿ ಕೂತುಬಿಟ್ಟಿರುವ ರಾಜಕುಮಾರ ತಮ್ಮನ್ನು ತಾವೇ ಹಲವು ಬಾರಿ ನಿಕಷಕ್ಕೆ ಒಡ್ಡಿಕೊಂಡು ಅಪ್ಪಟ ಚಿನ್ನವಾದವರು. ಈ ಅಪ್ರತಿಮ ಪ್ರತಿಭೆಯನ್ನು ಅಭಿನಂದಿಸುತ್ತ ಇನ್ನೂ ನೂರ್ಕಾಲ ನಮ್ಮೊಂದಿಗಿರಲಿ, ಕನ್ನಡತನವನ್ನು ಅನುಗಾಲವೂ ಮೆರೆಯಲಿ ಎಂದು ಹಾರೈಸುತ್ತೇವೆ.

- ವ್ಯವಸ್ಥಾಪಕ ಸಂಪಾದಕ



# ಸಹಚಿಂತನ

## ಬಿಸಿ ಬಿಸಿ ಚಹ

ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದ ಜಿ. ಅನಂತನಾರಾಯಣಸ್ವಾಮಿಗಳ 'ಬಿಸಿ ಬಿಸಿ ಚಹದ ಹಸಿ ಹಸಿ ಕಥೆ' ಅರ್ಥಪೂರ್ಣವಾಗಿತ್ತು. ಅದರ 'ಹಸಿ ಕಥೆ' ತಿಳಿಯದೆ ಪ್ರತಿದಿನ ಬಿಸಿ ಬಿಸಿ ಚಹ ಸವಿಯುತ್ತಿದ್ದ ನಮಗೆ ಆ ಲೇಖನ ವಿಸ್ತೃತ ಮಾಹಿತಿಯನ್ನು ಒದಗಿಸಿತು.

ಇಟ್ಟಗಿ ಜೆ.ಬಿ. ಹರ್ಷವರ್ಧನ

## ಕೆ.ಟಿ.ಯ ಮೂಲ

ಚಹದ ಬಗೆಗಿನ ಲೇಖನದಲ್ಲಿ ಉತ್ತೇಜಕ ಪದಾರ್ಥ ಥೀನ್ ಎಂದಿದೆ. ಆದರೆ, ಅದು 'ಟ್ಯಾನಿನ್' ಎಂಬುದಾಗಿ ಪಠ್ಯಪುಸ್ತಕಗಳಲ್ಲಿ ಓದಿದ ನೆನಪು. ಅಲ್ಲದೆ ಲೇಖನದಲ್ಲಿ ಕೆ.ಟಿ. ಎಂದರೆ 'ಕೇರಳಾ ಟೀ' ಎಂದಿದೆ. ಆ ಶಬ್ದದ ವ್ಯುತ್ಪತ್ತಿಯು ಬಗೆಗೆ ಸಾಕಷ್ಟು ವಿವಾದಗಳಿವೆಯಾದರೂ ನಾನು ಹಲವಾರು ಜನರನ್ನು ಕೇಳಿತಿಳಿದಂತೆ 'ಕ್ವಾಲಿಟಿ ಟಿ' ಎಂದರ್ಥ. ಯಾರಾದರೂ ತಜ್ಞರು ಈ ಶಬ್ದ ಹೇಗೆ ಬಂತೆನ್ನುವುದರ ಕುರಿತು ಬೆಳಕು ಚೆಲ್ಲಿದರೆ ಒಳಿತು.

ಮೈಸೂರು ಭಾಸ್ಕರ ಭಟ್ಟ

## ಪೂರ್ವಾಗ್ರಹ ಪೀಡಿತ

ಶ್ರೀ ಪ್ರ.ಭ. ಶಿರ್ವಾರವರು ಆಗಸ್ಟ್ ಸಂಚಿಕೆಯ ಸಹಚಿಂತನದಲ್ಲಿ ಪುರೋಹಿತವರ್ಗದ ಬಗೆಗೆ ಪೂರ್ವಾಗ್ರಹ ಪೀಡಿತರಾಗಿ ಬರೆದಿರುವಂತೆ ಕಾಣುತ್ತದೆ. ಏಕೆಂದರೆ ೧) ಆಶ್ಲೇಷಾ ಬಲಿಯನ್ನು ಗಂಟೆಯೊಳಗೆ ನಡೆಸುವುದು ಅಸಾಧ್ಯ. ೨) ನಾಗಮಂಡಲ ಮಾಡುವುದೆಂದರೆ ಮಕ್ಕಳಾಟವಲ್ಲ. ಅದಕ್ಕೂ ತುಂಬಾ ಖರ್ಚುವೆಚ್ಚಗಳಿವೆ. ಆಯಾ ಕೆಲಸಕ್ಕೆ ವೃತ್ತಿಗೌರವವಿರುವುದರಿಂದ ಗೌರವಕ್ಕೆ ತಕ್ಕಂತೆ ಸಂಭಾವನೆ ಪಡೆಯುವಲ್ಲಿ ತಪ್ಪಿಲ್ಲವಲ್ಲ? ಇಷ್ಟಕ್ಕೂ ನಾಗಮಂಡಲವನ್ನು ಹೆಚ್ಚಾಗಿ ಶ್ರೀಮಂತರೇ ಮಾಡಿಸುವುದರಿಂದ ಸಮುದ್ರದಿಂದ ಒಂದು ಕೊಡ ನೀರು ತೆಗೆದಂತೆ ಅಲ್ಲವೆ? ಅಲ್ಲದೆ ಪುರೋಹಿತರಿಗೆ ಪೆನ್‌ಶನ್, ಗೌರವಧನ ಇತ್ಯಾದಿಗಳ ಸೌಕರ್ಯವಿಲ್ಲ. ಪೌರೋಹಿತ್ಯದಲ್ಲೇ ಜೀವನ ಸಾಗಬೇಕು. ಅಂಥದರಲ್ಲಿ ಬರಿ ಗಂಟೆಯತ್ತ ಕಣ್ಣು ಹಾಯಿಸುವುದು ಸರಿಯಲ್ಲ.

ಬೊಂದಲಬೈಲ್ ಪಿ. ರಾಜೇಶ್ ಐತಾಳ್

(ಈ ವಾದವಿವಾದವನ್ನು ಇಲ್ಲಿಗೇ ಮುಕ್ತಾಯಗೊಳಿಸಲಾಗಿದೆ. -ಸಂ.)

## ಮನ್ನೂ ಭಂಡಾರಿಯವರದು

ಆಗಸ್ಟ್ ಸಂಚಿಕೆಯಲ್ಲಿ ನಾನು ಅನುವಾದಿಸಿದ ಕತೆ "ಇಬ್ಬರು ಕಲಾವಿದರು' ಪ್ರಕಟವಾಗಿದೆ. ಇದಕ್ಕಾಗಿ ನನ್ನ ಕೃತಜ್ಞತೆಗಳು.

ಇದು ಹಿಂದಿಯ ಕತೆಗಾರ್ತಿ ಶ್ರೀಮತಿ ಮನ್ನೂಭಂಡಾರಿಯವರ ಕತೆಯ ಸಂಗ್ರಹಾನುವಾದ. ಬಹಳ ದಿನಗಳ ಹಿಂದೆಯೆ ನಾನು ಈ ಕತೆಯನ್ನು ಕಳಿಸಿದ್ದೆ. ಅದರಲ್ಲಿ ನಾನು ಸಂಗ್ರಹಾನುವಾದ ಎಂದು ಬರೆದಿದ್ದೆನೋ ಇಲ್ಲವೋ ನೆನಪಿಲ್ಲ. ನಾನು ಬರೆಯದೇ ಇದ್ದಲ್ಲಿ ಅದು ಕೈತಪ್ಪಿ ಹೋಗಿರಬೇಕೇ ಹೊರತು ಮೂಲ ಲೇಖಕಿಯ ಹೆಸರು ಬಿಟ್ಟಿದ್ದು ಉದ್ದೇಶಪೂರ್ವಕವಾಗಿ ಖಂಡಿತ ಅಲ್ಲ.

ಮೈಸೂರು ಕೆ. ಶಾಂತಾಮಣಿ

## ಭಗವತೀ ಚರಣರ ಬಲಿದಾನ

ಭಗವತೀ ಚರಣರ ಅಪೂರ್ವ ಬಲಿದಾನ (ಆಗಸ್ಟ್ ೯೭)ದ ವೀರಗಾಥೆಯನ್ನು ಓದುತ್ತಿದ್ದಂತೆ ಹೃದಯ ಕಲಕಿದಂತಾಯಿತು. ನಾವಿಂದು ಅನುಭವಿಸುತ್ತಿರುವ ಸ್ವಾತಂತ್ರ್ಯಕ್ಕಾಗಿ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಹೋರಾಡಿದ ಅಂದಿನ ಸ್ವಾತಂತ್ರ್ಯ ಸೇನಾನಿಗಳ ಬಗ್ಗೆ ಹೃದಯ ತುಂಬಿಬಂತು. ಇಂದಿನ ಪೀಳಿಗೆಗೆ ಅಂದಿನವರ ತ್ಯಾಗದ ಪರಿಚಯ ಮಾಡಿಕೊಟ್ಟ ಕೆ.ಎಸ್. ಕುಲಕರ್ಣಿಯವರಿಗೂ 'ಕಸ್ತೂರಿ'ಗೂ ಧನ್ಯವಾದಗಳು.

ಗಂಗಾವತಿ ತಟ್ಟಿ ಕಾಶೀಮ ಅಲಿ

ಭಗವತೀ ಚರಣರ ಅಪೂರ್ವ ಬಲಿದಾನವನ್ನು

ಓದುತ್ತಿದ್ದಂತೆಯೇ ಲತಾ ಮಂಗೇಶ್ಕರ್ ಹಾಡಿದ 'ಯೇ ಮೇರೆ ವತನ ಕೇ ಲೋಗೋ। ಜರಾ ಆಂಖ ಮೇ ಭರಲೋ ಪಾನಿ। ಜೋ ಶಹೀದ್ ಹುಯೇ ಹೈ ಉನ್ ಕೀ। ಜರಾ ಯಾದ್ ಕರೋ ಕುರ್‌ಬಾನಿ" ನೆನಪಿಗೆ ಬಾರದೆ ಇರಲಿಲ್ಲ.

**ಹೊನ್ನಳ್ಳಿ ನ್ಯಾಮತಬಾಶಾ ಎಂ. ಹುಣಶಾಳ**

### ಹೇಗೆ 'ಕೈಯೂರುವುದು ?'

ಜುಲೈ ಸಂಚಿಕೆಯಲ್ಲಿ ಪ್ರಕಟವಾದ 'ಶಬ್ದ ಭಾಂಡಾರದಲ್ಲಿ' 'ಕೈಯೂರು' ಪದಕ್ಕೆ ಸೋತು ಹೋಗು, ಸೋಲೊಪ್ಪಿಕೊಳ್ಳು ಎಂಬ ಅರ್ಥ ಕೊಟ್ಟಿದ್ದೀರಿ. ಆದರೆ ಈ ಪದಕ್ಕೆ ಆಧರಿಸು ಎಂಬ ಅರ್ಥ ಬಳಕೆಯಲ್ಲಿದೆ. ಉದಾಹರಣೆಗೆ ವೇದಮಂತ್ರಗಳನ್ನು ಅರ್ಥವಿಸಲು ಪಾಶ್ಚಾತ್ಯರ ವಿವರಣೆಗಳ ಮೇಲೆಯೇ ಕೈಯೂರಬಾರದು, ವಿದ್ಯಾರ್ಥಿಗಳು ಬರಿ ಗೈಡುಗಳ ಮೇಲೆ ಕೈಯೂರದೆ ಪಠ್ಯಪುಸ್ತಕಗಳನ್ನು ಅಭ್ಯಸಿಸಬೇಕು ಇತ್ಯಾದಿ.

**ಸುಳ್ಯ ತುಡಿಯಡ್ಕ ವಿಷ್ಣಯ್ಯ**

(ಉತ್ತರ ಕರ್ನಾಟಕದಲ್ಲಿ ಆ ರೀತಿಯ ಬಳಕೆಯಿದೆ. -ಸಂ.)

### ಒಗ್ಗದಿರುವಿಕೆಯ ನೆಗಡಿ

ಆಗಸ್ಟ್ ಸಂಚಿಕೆಯಲ್ಲಿ ಮೂಡಿಬಂದ 'ಆಯುರ್ವೇದ ಚಿಕಿತ್ಸೆ: ಒಗ್ಗದಿರುವಿಕೆಯ ನೆಗಡಿ ಹಾಗೂ ದಮ್ಮು' ತುಂಬಾ ಉಪಯುಕ್ತವಾಗಿದೆ. ಇಂತಹ ಲೇಖನಗಳು ಮೇಲಿಂದಮೇಲೆ ಬರಲಿ.

**ಹಳುವಳ್ಳಿ ರೂಪ ಹೆಚ್.ಕೆ**

### ತಾಯ್‌ಮಹಲ್

ತಾಜ್‌ಮಹಲ್ ಬಗ್ಗೆ ಮಾತ್ರ ಓದಿ ತಿಳಿದಿದ್ದ ನಮಗೆ ತಾಯ್‌ಮಹಲ್ (ಜುಲೈ ೯೭)ಬಗ್ಗೆ ತಿಳಿದು ತುಂಬಾ ಆಶ್ಚರ್ಯವಾಯಿತು.

**ಮೈಸೂರು ಎಂ. ಗೀತಾ**

### ಪ್ಯಾರಿಸ್ ನೆನಪು

ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದ 'ಪ್ಯಾರಿಸ್ ನೆನಪು' ಸುಪ್ತ ಮನಸ್ಸಿನ ಭಾವನೆಗಳನ್ನು ಬಡಿದೆಬ್ಬಿಸುವ ಕಥೆ. ಕಿನಿಯ ಗಾಢವಾದ ಪ್ರೀತಿಯೇ ಅವಳಿಗೆ ಮುಳುವಾಯಿತೇನೋ. ಆ ಕಥೆಯನ್ನು ಓದಿದಾಗ ಅವಳ ಪ್ರೀತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ತಿರಸ್ಕರಿಸಿದ ಕಥಾನಾಯಕನ ಬಗ್ಗೆ ಸಿಟ್ಟು ಬಂತು.

**ನಿಲೋಗಲ್ ಶಿವರಾಜ ಕರಡ್ಡಿ**

### ಆರನೆಯ ಸ್ಥಾನವಲ್ಲ

ಜುಲೈ ಸಂಚಿಕೆಯ 'ಜ್ಞಾನನಿಧಿ'ಯಲ್ಲಿ ನೀವು ಜಗತ್ತಿನ ಹತ್ತಿಯ ಉತ್ಪಾದನೆಯಲ್ಲಿ ಚೀನದ್ದು ಮೊದಲನೆಯ ಸ್ಥಾನವೆಂದೂ ಭಾರತದ್ದು ಆರನೆಯ ಸ್ಥಾನವೆಂದೂ ಪ್ರಕಟಿಸಿದ್ದೀರಿ. ಚೀನದ್ದು ಮೊದಲನೆ ಸ್ಥಾನವೆನ್ನುವುದು ಸರಿ. ಅನಂತರ ಅನುಕ್ರಮವಾಗಿ ಅಮೇರಿಕ, ಭಾರತ, ರಶಿಯ ಎಂದಿರಬೇಕಾಗಿತ್ತು. ವಾಸ್ತವವಾಗಿ ಈ ದಶಕದಲ್ಲಿ ನಮ್ಮ ದೇಶದಲ್ಲಿ ಹತ್ತಿಯ ಉತ್ಪಾದನೆ ಗಮನಾರ್ಹವಾಗಿ ಹೆಚ್ಚಿದೆ. ಅಮೇರಿಕಾದ್ದು ತಗ್ಗುತ್ತಿದೆ.

**ಮುಂಬಯಿ ಹೆಚ್.ಆರ್. ಲಕ್ಷ್ಮೀವೆಂಕಟೇಶ**

### ಕಂಪ್ಯೂಟರ್ ಪಿತಾಮಹ

ಜುಲೈ ಸಂಚಿಕೆಗಾಗಿ ಕು. ಚೇತನಾ ಡಿ.ಎಸ್. ಅವರು ಸಂಗ್ರಹಿಸಿದ ಶೋಧ-ಶೋಧಕರ ಬಗ್ಗೆ ನನ್ನದೊಂದು ಆಕ್ಷೇಪ.

ಅಲ್ಲಿ ಕಂಪ್ಯೂಟರನ್ನು ಮೊದಲಿಗೆ ಅಮೇರಿಕಾದ ಹೋವರ್ಡ್ ಅಡ್ಕನ್ (೧೯೩೭) ಎಂಬುವವರು ಕಂಡುಹಿಡಿದರು ಎನ್ನಲಾಗಿದೆ. ಆದರೆ ಮೊಟ್ಟಮೊದಲು ಕಂಪ್ಯೂಟರಿನ ರೂಪುರೇಷೆಗಳನ್ನು ನಿರ್ಮಿಸಿದವನು ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಗಣಿತದ ಪ್ರಾಧ್ಯಾಪಕನಾಗಿದ್ದ ಚಾರ್ಲ್ಸ್ ಬ್ಯಾಬೇಜ್ ಎಂಬುವವನು. ಆತ ೧೮೩೩ರಲ್ಲಿ ಈ ಮಹತ್ಕಾರ್ಯವನ್ನು ಸಾಧಿಸಿದ. ಆದ್ದರಿಂದಲೇ ಆತನನ್ನು 'ಆಧುನಿಕ ಗಣಕಯಂತ್ರದ ಪಿತಾಮಹ,' ಎಂದು ಕರೆಯಲಾಗುತ್ತಿದೆ. ಆಗ ತಂತ್ರಜ್ಞಾನ ಇನ್ನೂ ಅಷ್ಟು ಮುಂದುವರೆದಿಲ್ಲವಾದ್ದರಿಂದ ಅದನ್ನು ಕಾರ್ಯಗತಗೊಳಿಸಲಾಗಲಿಲ್ಲವೆಂಬ ಮಾತು ಬೇರೆ. ಆದರೆ ಕಂಪ್ಯೂಟರ್ ವಿಜ್ಞಾನಕ್ಕೆ ಅಡಿಪಾಯ ಹಾಕಿದವನು ಆತ ಎಂಬ ಬಗ್ಗೆ ಎರಡು ಮಾತಿಲ್ಲ.

ತಂತ್ರಜ್ಞಾನ ಸಾಕಷ್ಟು ಮುಂದುವರೆದ ನಂತರ, ೧೯೪೪ರಲ್ಲಿ ಅಮೇರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದ ಡಾ. ಲೋವರ್ಡ್ ಐಕಿನ್ ಎಂಬುವವರು ಪ್ರಪ್ರಥಮವಾಗಿ 'ದಿ ಆಟೋಮೆಟಿಕ್ ಸೀಕ್ವೆನ್ಸ್ ಕಂಟ್ರೋಲ್ಡ್ ಕ್ಯಾಲ್ಕುಲೇಟರ್ (ASCC) ಎಂಬ

(ಆರನೇ ಪುಟಕ್ಕೆ)

## ಚಿಲಕಿಂಡಿ

ಅಜ್ಜಿ ಹುಡುಗಿಯಾಗಿದ್ದಾಗ ಇಂದಿನ ಹುಡುಗಿಯರು ಮಾಡುತ್ತಿರುವ ಎಷ್ಟೋ ಕೆಲಸಗಳನ್ನು ಮಾಡುತ್ತಿರಲಿಲ್ಲ ಎನ್ನುವುದು ನಿಜ. ಆದರೆ ಇಂದಿನ ಅಜ್ಜಿಯರು ತಮ್ಮ ಅಜ್ಜಿ ಮಾಡುತ್ತಿದ್ದ ಎಷ್ಟೋ ಕೆಲಸಗಳನ್ನು ಮಾಡುವುದಿಲ್ಲ ಎನ್ನುವುದೂ ಅಷ್ಟೇ ನಿಜ.

- 'ಟೈಮ್ಸ್' ಪತ್ರಿಕೆಯಿಂದ

ಎಲ್ಲರೂ ತಮ್ಮ ಅಂಗಳವನ್ನು ಸ್ವಚ್ಛವಾಗಿಟ್ಟುಕೊಂಡರೆ ಸಾಕು, ಇಡೀ ಜಗತ್ತೇ ಸ್ವಚ್ಛವಾಗಿಬಿಡುತ್ತದೆ.

- ಗಯಟೆ

ಕೀಳು ಕೆಲಸವೆನ್ನುವುದು ಯಾವುದೂ ಇಲ್ಲ, ಇರುವುದೆಂದರೆ ಕೀಳು ದೃಷ್ಟಿಯೊಂದೆ.

- ವಿಲಿಯಂ ಬೆನೆಟ್

ಯಾವುದೇ ಸರಕಾರಿ ಯೋಜನೆಯನ್ನು ಮುಗಿಸಲು ಬೇಕಾದ ಸಮಯವು ಈಗಾಗಲೆ ಆ ಯೋಜನೆಗೆ ವ್ಯಯಿಸಿದ ಸಮಯಕ್ಕೆ ಸಮನಾಗಿರುತ್ತದೆ.

- ಜಾಯ್ ಟ್ರಾಕ್‌ಮನ್

ಈ ಮೂರು ಮಾತ್ರ ಸ್ವಲ್ಪವಾದರೆ ಚೆನ್ನ, ಬಹಳವಾದರೆ ಕೆಡಕು-ಯೀಸ್ಟ್, ಉಪ್ಪು ಹಾಗೂ ಅನುಮಾನಿಸುವುದು.

- ತಾಲ್‌ಮುದ್,
ಯಹೂದ್ಯರ ಪವಿತ್ರ ಗ್ರಂಥ



# ಅಂತರಂಗ

## ಸ್ಥಿರ ಶೀರ್ಷಿಕೆಗಳು



## 'ನೆತ್ತರು ದೆವ್ವ'ಗಳ ವೃತ್ತಾಂತ

ಪುಸ್ತಕ ವಿಭಾಗ



(ಮೂರನೇ ಪುಟದಿಂದ)

ಗಣಕಯಯಂತ್ರವನ್ನು ಐಬಿಎಂ ಕಂಪನಿಯ ಸಹಾಯದಿಂದ ತಯಾರಿಸಿದರು. ವಿಜ್ಞಾನ ಅಲ್ಲಿಂದ ಸೂಪರ್ ಕಂಪ್ಯೂಟರ್‌ವರೆಗೆ ಕ್ರಮಿಸಿದ ದಾರಿ ಬಲು ದೂರ.

ಹಾವೇರಿ ನಾ.ರಾ. ಗಡಗಿ

**ಆಗಂತುಕರು**

ಅದೊಂದು ಮರೆಯಲಾಗದ ಕಥೆ. ಆತ್ಮವಿಶ್ವಾಸ, ಛಲ ಹಾಗೂ ಪ್ರಯತ್ನವಿದ್ದಲ್ಲಿ ದೃಷ್ಟಿಹೀನರು ಕೂಡ ಹೇಗೆ ಸಾಮಾನ್ಯ ಜೀವನ ನಡೆಸಬಲ್ಲರು ಹಾಗೂ ಸಮಾಜಸೇವೆ ಮಾಡಬಲ್ಲರು ಎನ್ನುವುದಕ್ಕೆ ಉತ್ತಮ ಉದಾಹರಣೆ.

ಕಳನಾಡು ಮಾಲತಿ ಕಮಲಾಕ್ಷ

ಜುಲೈ ೯೭ರ ಸಂಚಿಕೆಯಲ್ಲಿ ಸಣಬಿನ ಬಗ್ಗೆ ಪ್ರಕಟವಾದ 'ವೃಷಭೇಂದ್ರಯ್ಯ'ನವರ ಲೇಖನ ತೀರಾ ಇತ್ತೀಚಿನ ಮಾಹಿತಿಗಳನ್ನು ಒಳಗೊಂಡು ಉಪಯುಕ್ತವಾಗಿದೆ.

ಇದೇ ಸಂಚಿಕೆಯ ಕಥೆ 'ಆಗಂತುಕರು' ಹಿಂದೊಮ್ಮೆ 'ಕಸ್ತೂರಿ'ಯಲ್ಲೇ ಓದಿದ್ದೇನೆನ್ನಿಸಿತು.

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ 'ಫ್ಲೈಯಿಂಗ್ ಸಾಸರ್ಸ್'ಸಂಗ್ರಹ ಓದುಗರಿಗೆ ಒಂದು ಒಳ್ಳೆಯ ಕೊಡುಗೆ.

ಬೆಳ್ಳೂರು ಕ್ರಾಸ್ ಕೆ. ಗಣೇಶ್

(ಅದೇ ಶೀರ್ಷಿಕೆಯ ಕಥೆ ಬಂದಿರಬಹುದಾದರೂ ಅದೇ ಕಥೆ ಬಂದಿರಲಾರದು. -ಸಂ)

**ಕ್ಷ-ಕಿರಣಗಳು**

ಜುಲೈ ಸಂಚಿಕೆಯಲ್ಲಿ ಪ್ರಕಟವಾದ 'ಕ್ಷ ಕಿರಣಗಳು ಎಷ್ಟು ಸುರಕ್ಷಿತ?' ಎಂಬ ಲೇಖನ ತುಂಬಾ ಉಪಯುಕ್ತವಾಗಿತ್ತು. ಲೇಖನದ ಕೊನೆಯಲ್ಲಿ "ಗರ್ಭಿಣಿಯರಿಗೆ ಎಕ್ಸ್‌ರೇ ತೆಗೆಯುವ ಕ್ರಮವನ್ನು ತಪ್ಪಿಸಲು ಯಾವಳೇ ಸ್ತ್ರೀಯ ಕಿಬ್ಬೊಟ್ಟೆಯ ಭಾಗದ ಎಕ್ಸ್‌ರೇಯನ್ನು ಅವಳು 'ಋತುಮತಿಯಾದ' ಮೊದಲ ಹತ್ತುದಿನಗಳಲ್ಲಿ ಮಾತ್ರ ತೆಗೆಯಬೇಕು" ಎಂದಿದೆ. ಆದರೆ 'ಋತುಮತಿಯಾಗಿ' ಎಂದಿರುವಲ್ಲಿ 'ಋತುಸ್ರಾವವಾಗಿ' ಎಂದಿದ್ದರೆ ಹೆಚ್ಚು ಸೂಕ್ತವಾಗಿರುತ್ತಿತ್ತು.

ಕೊಣ್ಣೂರು ಹಾಲಸ್ವಾಮಿ ಎಸ್.ಮಲ್ಲನಗೌಡರ

**ಅಬ್ಬಕ್ಕ**

ಜುಲೈ ಸಂಚಿಕೆಯಲ್ಲಿ ಪ್ರಕಟವಾದ 'ತುಳುನಾಡಿನ ರಣಚಂಡಿ' ಲೇಖನ ವೀರಾಂಗನೆ ಅಬ್ಬಕ್ಕನ ಬಗೆಗೆ ಹೆಚ್ಚಿನ ವಿವರ ನೀಡಿತು. ಚೆನ್ನಮ್ಮ, ಓಬವ್ವ, ಬೆಳವಡಿ ಮಲ್ಲಮ್ಮನಂಥ ವೀರ ರಾಣಿಯರಿಗೆ ಸಿಕ್ಕಂಥ ಪ್ರಚಾರ ಅಬ್ಬಕ್ಕನಿಗೆ ಸಿಗದಿದ್ದದ್ದು ವಿಷಾದನೀಯ.

ಬಾದಾಮಿ ಜಗದೀಶ ತಿ. ದೇವಾಡಿಗ

**ಸಂಭಾಷಣೆ**

ಯಲ್ಲೂರು ಪ್ರಭುಗಳ (ಆಗಸ್ಟ್ ಸಂಚಿಕೆ) 'ಸಂಭಾಷಣೆ' ಕಥೆಯನ್ನು ಓದಿದಾಗ ನಿಜವಾಗಿಯೂ ಸಂತೋಷವಾಯಿತು. ಕಥಾವಸ್ತುವಿನಲ್ಲಿ ಹೇಳಿಕೊಳ್ಳುವಂತಹದೇನೂ ಇರದಿದ್ದರೂ ಶೈಲಿ ತುಂಬಾ ಚೆನ್ನಾಗಿದ್ದುದರಿಂದ ಓದಿದ ಕಥೆಯನ್ನೇ ಮತ್ತೆ ನಾಲ್ಕಾರು ಬಾರಿ ಓದಿದೆ.

ಹುಬ್ಬಳ್ಳಿ ನಾರಾಯಣ ರಾ. ಕೆರೂರ

**ಆಕಸ್ಮಿಕದಿಂದ ಸಂಶೋಧನೆಯತ್ತ**

ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದ ಡಾ. ಸ.ಜ. ನಾಗಲೋಟಿಮಠರ 'ಆಕಸ್ಮಿಕದಿಂದ ಅದ್ಭುತ ಸಂಶೋಧನೆಯತ್ತ' ಲೇಖನ ಒಂದು ಹೊಸ ವಿಷಯವನ್ನು ತಿಳಿಸಿತು. ಇವರು ಸಂಶೋಧಿಸಿದ ಸೆಡಿಮೆಂಟ್ ಸೈಟಾಲಜಿ ವಿಧಾನದಿಂದ ಕಾಯಿಲೆಗೆ ಕಾರಣವಾಗುವ ಘಟಕಗಳನ್ನು ಬೇಗನೆ ಕಂಡುಹಿಡಿದು ರೋಗಿಯನ್ನು ಗುಣಪಡಿಸಬಹುದು ಎಂಬುದನ್ನು ಅರಿತಾಗ ನಾಗಲೋಟಿಮಠರ ಬಗ್ಗೆ ಅಭಿಮಾನ ಮೂಡಿಬಂತು.

ಹೂಲಿಹಳ್ಳಿ ಹೆಚ್.ಎಂ. ಬಸವರಾಜ

**ಹಿಂದುಮುಂದು**

ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದ ಡಾ. ಸ.ಜ. ನಾಗಲೋಟಿಮಠರ ಲೇಖನ ಸ್ವಾರಸ್ಯಕರವಾಗಿದ್ದು ಓದಿಸಿಕೊಂಡು ಹೋಗುತ್ತದೆ. ಆದರೆ ೫೨ ಹಾಗೂ ೫೩ನೆಯ ಪುಟಗಳು ಪರಸ್ಪರ ಸ್ಥಳಾಂತರಗೊಂಡಿದ್ದು ಮಾತ್ರ ರಸಭಂಗವನ್ನುಂಟುಮಾಡಿತು.

ಹುಬ್ಬಳ್ಳಿ ಎಸ್.ಎಂ. ಹಿರೇಮಠ

(ಈ ಪ್ರಮಾದಕ್ಕಾಗಿ ಕ್ಷಮೆಯಿರಲಿ -ಸಂ.)




# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: ೪೧ ಸೆಪ್ಟೆಂಬರ್ ೧೯೯೬ ಸಂಚಿಕೆ: ೧


## ರಾಗ-ದ್ವೇಷ

“ಈ ಜಗವೇ ಒಂದು ರಂಗಮಂಚ, ಜೀವಿಗಳೆಲ್ಲ ಪಾತ್ರಧಾರಿಗಳು" ಎಂದರು ಸುಜ್ಞಾನಿಗಳನೇಕರು. ಅವರ ಅನುಭವದ ಮೂಸೆಯಿಂದ ಉದಿತವಾದ ಈ ವಿಚಾರದ ಕುರಿತು ಕ್ಷಣಕಾಲ ಚಿಂತಿಸಿದಾಗ, ಮನಸ್ಸು ತನ್ನನ್ನು ತಾನೇ ಅರಿಯುವ ಕಾರ್ಯದಲ್ಲಿ ಖಂಡಿತ ಪ್ರವೃತ್ತವಾಗುತ್ತದೆ.

ಸದ್ಯ ಒಂದು ಚಿಕ್ಕ ಉದಾಹರಣೆಯನ್ನೇ ತೆಗೆದುಕೊಳ್ಳಿ. ನಾನು ಹಾಗೂ ನೀವು ಜೀವಕೊರಳ ಗೆಳೆಯರಾಗಿದ್ದುಕೊಂಡು ನಾಟಕ ಕಂಪನಿಯೊಂದರಲ್ಲಿ ಪಾತ್ರ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದೇವೆ ಎಂದುಕೊಳ್ಳಿ. 'ರಾಮಾಯಣ' ನಾಟಕ ನಡೆಯುತ್ತಿದೆ. ಅದರಲ್ಲಿಯ ಸನ್ನಿವೇಶವೊಂದರಲ್ಲಿ ರಾವಣನ ಪಾತ್ರಧಾರಿಯಾದ ನಾನು ಅತೀವ ಕ್ರೋಧದಿಂದ ರಾಮನ ಪಾತ್ರಧಾರಿಯಾದ ನಿಮಗೆ- “ಎಲೈ ಹೇಡಿಯೇ, ಜಗತ್ಪತಿ ಎನಿಸಿಯೂ ಪತ್ನೀವ್ಯಾಮೋಹದಿಂದ ಪೀಡಿತನಾಗಿ, ನರಹರಿಯು ನೀನೆಂಬುದನ್ನೂ ಮರೆತು, ನರನಿಗಿಂತಲೂ ನಿಕೃಷ್ಟನಾಗಿ, ವಾನರರ ಸಹಾಯಕ್ಕಾಗಿ ಯಾಚನೆಗೈದು, ವಾಲಿಯನ್ನು ಮೋಸದಿಂದ ವಧೆಗೈಸಿದ ವಂಚಕನೇ, ಇದೇ ಕ್ಷಣದಲ್ಲಿ ನಿನ್ನನ್ನು ಈ ಗದೆಯಿಂದ ಸಂಹರಿಸಿ ನಿನ್ನ ಪ್ರೀತಿಯ ಪತ್ನಿಯನ್ನು ನನ್ನ ಪಟ್ಟದರಸಿಯನ್ನಾಗಿಸಿಕೊಳ್ಳುವೆ" ಎಂದು ವಾಗ್ಬಾಣಗಳನ್ನು ಬಿಟ್ಟಾಗ ಅಂತರ್ಯದಲ್ಲಿ, ನನ್ನ ಬಗ್ಗೆ ಕೊಂಚವಾದರೂ ರಾಗ-ದ್ವೇಷಗಳು ಉಗಮವಾಗಬಲ್ಲವೇ?

ಇಲ್ಲ! ಏಕೆಂದರೆ, ಆಗ ವಸ್ತು ಸ್ಥಿತಿಯ ಅರಿವು ಅದೇನೆಂದರೆ “ನಾವು ಈಗ ನಾಟಕದಲ್ಲಿನ ಪಾತ್ರಧಾರಿಗಳು, ಪಾತ್ರಕ್ಕನ ಭಾವಾಭಿನಯ ಹಾಗೂ ಮರ್ಮಭೇದಕ ವಾಗ್ಬಾಣಗಳೆಲ್ಲವೂ ಕೃತಕವಾದವುಗಳ ಅಂತೆಯೇ ಜಗತ್ ರಂಗಮಂಚದ ಮೇಲೊಂದು, ಜಡಜೀವಿಗಳೆಂಬ ಪಾತ್ರಧಾರಿಗಳನ್ನೊಳಗೊಂಡ ಜಗನ್ನಿಯಾಮಕನೆಂಬ ಸೂತ್ರಧಾರಿಯು ಸಾದರಪಡಿಸುವ, ಜೀವನ ನಾಟಕವಿದೆಂದ ಮೇಲೆ, ಒಂದೇ ರಂಗಮಂಚದ ಮೇಲಿರುವ ನಮ್ಮ ಅಂತರ್ಯದಲ್ಲಿ ರಾಗ-ದ್ವೇಷಗಳೇಕೆ? ಪರಸ್ಪರರ ಪಲ್ಲವಿಸಿದಲ್ಲಿ, ಎಲ್ಲೆಡೆಯೂ ಶಾಂತಿ ತಾನೇ ನೆಲೆಗೊಳ್ಳುವು

● ಸುರೇಂದ್ರ ಸರ್ವದೆ

# 'ಮಧುರ ಮಂಡ್ಯ'ದ

# ಸುತ್ತಮುತ್ತ...

-ಬಿ. ನಾಗರತ್ನ, ಮಂಡ್ಯ

'ಮಂಡ್ಯ' ಎಂದರೆ ಸಾಕು, ಸಿಹಿಯ ಅನುಭವ ಮನಕ್ಕೂ, ನಾಲಿಗೆಗೂ ದೃಷ್ಟಿಗೂ ಒಮ್ಮೆಗೇ. 'ಮಧುರ ಮಂಡ್ಯ'ದ ಸುತ್ತಮುತ್ತ ಒಮ್ಮೆ ಸಂಚರಿಸಬೇಕು....

ಕನ್ನಡ ನಾಡು-ಚಿನ್ನದ ಬೀಡು ಎಂದೆಲ್ಲಾ ಕರೆಯಲ್ಪಡುವ ಕರ್ನಾಟಕದ ಹಿರಿಮೆಯೇ ಅಂಥದು. ಈ ನಾಡಿನ ಯಾವುದೇ ಮೂಲೆಯನ್ನೂ ಕುತೂಹಲದಿಂದ ಇಣುಕಿ ನೋಡುವ ಆಸಕ್ತರಿಗೆ ಅಲ್ಲಿನ ಕಲ್ಲುಗಳೇ ನೂರೆಂಟು ಕತೆ ಹೇಳುತ್ತವೆ. ಕೆಲವೊಮ್ಮೆ ಕಳೆದು ಹೋದ ವೈಭವಯುತ ಇತಿಹಾಸದ ಮಧುರ ನೆನಪನ್ನು ಕೂಡಾ ಮೂಡಿಸುತ್ತವೆ.

ಕನ್ನಡಾಂಬೆ, ಸಿರಿಗನ್ನಡ ತಾಯಿ ಎಂದೂ...
ಹಾಡು ಬಾ ಕೋಗಿಲೇ...
ನಲಿದಾಡು ಬಾರೆ ನವಿಲೇ...



ರಂಗನತಿಟ್ಟು ಪಕ್ಷಿಧಾಮ

ಎಂಬ ಹಾಡು ಕೇಳಿಯೇ ರೋಮಾಂಚನಗೊಂಡು ಕರ್ನಾಟಕಕ್ಕೆ ಕಾಲಿಟ್ಟ ಪ್ರವಾಸಿಗ ಬೆಟ್ಟ ಗುಡ್ಡಗಳಿಂದ ನದೀತಟದವರೆಗೆ, ದೇವಾಲಯದಿಂದ ಅರಮನೆಯವರೆಗೆ, ಗಿಜಿಗುಡುವ ನಗರದಿಂದ ಹಸಿರು ಕಾಡಿನವರೆಗೆ... ಹೀಗೆ ಎಲ್ಲೆಲ್ಲಿ ನೋಡಿದರೂ ಅವನಿಗೊಂದು ಇತಿಹಾಸ ಒದಗಿಹೋಗುತ್ತದೆ. ಸುಪ್ರಸಿದ್ಧ ಸ್ಮಾರಕಗಳ ಒಂದೊಂದು ಪುಟ್ಟ ಕಲ್ಲನ್ನೂ ಕುಶಲ ವಿಚಾರಿಸುವವನಂತೆ ಪ್ರವಾಸಿಗನೇನಾದರೂ ತಡವಲಾರಂಭಿಸಿದರೆ ಮುಗಿದೇ ಹೋಯಿತು. ಹಿಂದಿನ ಗತವೈಭವವನ್ನು ನೆನೆದು ಬಿಡುವ ಪ್ರತಿಯೊಂದು ಕಲ್ಲೂ "ಆಮೇಲೆ ಏನಾಯಿತೆಂದರೆ...." ಎಂದು ಆರಂಭಿಸಿ ತಮ್ಮ ಕತೆ ಹೇಳಲು ಶುರುಮಾಡಿಯೇ ಬಿಡುತ್ತವೆ!

ಹಳೆಯ ಮಧುರ ನೆನಪನ್ನು ಮೊಗೆಮೊಗೆದು ನೀಡುವ ಇಂತಹ ರಾಜ್ಯದಲ್ಲೊಮ್ಮೆ ರಸ್ತೆಯ ಮೂಲಕ ಸಂಚರಿಸುವ ಆಸೆ ಹೊಂದಿದ ಯಾವನೇ ಪ್ರವಾಸಿಗನಿಗೂ ಆಧುನಿಕತೆಯ ಸೋಗಿಗೆ ಮರುಳಾಗಿ ಹಳೆಯ ಸಂಸ್ಕೃತಿಗಳೆಲ್ಲಾ ಮರೆಯಾಗುತ್ತಿರುವ ಸಂಗತಿ ಅರಿವಿಗೆ ಬರುತ್ತದೆ.

"ಅರಮನೆಗಳ ತೌರುಮನೆ" ಎಂದೇ ಮೈಸೂರು ಹೆಸರಾದರೆ "ವಿಧಾನ ಸೌಧ"ದಿಂದಲೇ ಖ್ಯಾತಿ ಪಡೆದ ಹಿರಿಮೆ ಬೆಂಗಳೂರಿನದ್ದು. ಬೆಂಗಳೂರಿನಿಂದ ಮೈಸೂರಿಗೆ ತೆರಳುವಾಗ ಮಾರ್ಗ ಮಧ್ಯದಲ್ಲಿಯೇ ಸಿಗುವ "ಮಂಡ್ಯ"ದ ಜನಪ್ರಿಯತೆಯೇ ಮತ್ತೊಂದು ರೀತಿಯದ್ದು.

ಒಂದು ರೀತಿಯಲ್ಲಿ ಮೈಸೂರು-ಬೆಂಗಳೂರುಗಳ ಜನಪ್ರಿಯತೆಗೆ ಸರಿಸಮನಾಗಿ ಬೆಳೆದು ನಿಂತು, "ಇಂಡಿಯಾದೊಳಗೊಂದು ಮಂಡ್ಯ" "ಮಧುರ ಮಂಡ್ಯ" ಎಂದೆಲ್ಲಾ ಹೆಸರಾದ ಹೆಗ್ಗಳಿಕೆ ಮಂಡ್ಯದ್ದು. ಹಸಿರು ತುಂಬಿದ ಭತ್ತದ ಗದ್ದೆಗಳಿಂದ ಕೂಡಿರುವ ಸಕ್ಕರೆ ಜಿಲ್ಲೆ, ತೆಂಗಿನ ಸೀಮೆ ಎಂದೆಲ್ಲಾ ಮಂಡ್ಯ ಹೆಸರುವಾಸಿ.

ಬಹುಶಃ ಮಳೆಯೇ ಬಾರದಂತಹ ವೇಳೆಯಲ್ಲಿಯೂ ಪುಸಪುಸನೆ ಬೀಡಿ ಎಳೆಯುತ್ತಾ, ಕಡಲೆಕಾಯಿ ತಿನ್ನುತ್ತಾ, ನಿರುಮ್ಮಳವಾಗಿ ಥಿಯೇಟರಿನಲ್ಲಿ ಕೂತು ಸಿನಿಮಾ ನೋಡಿ ಖುಷಿಯಿಂದ ವಾಪಸಾ



ಚೆಲುವನಾರಾಯಣಸ್ವಾಮಿ

ಗುವ, ತಮಗೆ ಸಿಗಬೇಕಾದ ಹಕ್ಕುಗಳ ಬಗ್ಗೆ ಅಧಿಕಾರಿಗಳ ಜೊತೆ ಚರ್ಚಿಸುತ್ತಾ ಒಮ್ಮೊಮ್ಮೆ ವಾಗ್ವಾದಕ್ಕೂ ಇಳಿದುಬಿಡುವ ಜನರೆಂದರೆ ಮಂಡ್ಯದವರೇ ಇರಬೇಕು. ಇಲ್ಲಿನವರ ಸಿನಿಮಾ ಹುಚ್ಚು ಎಂತಹುದೆಂದರೆ ವರ್ಷದ ಬಹುತೇಕ ಎಲ್ಲಾ ಕಾಲದಲ್ಲಿಯೂ ಇಲ್ಲಿನ ಥಿಯೇಟರುಗಳಲ್ಲಿ ತುಂಬಿದ ಗೃಹಗಳ ಪ್ರದರ್ಶನ ನಡೆದೇ ತೀರುತ್ತದೆ.

"ಸಕ್ಕರೆಯ ಬಯಲು" ಎಂದೇ ಹೆಸರಾದ ಮಂಡ್ಯದಲ್ಲಿ ಪ್ರೇಕ್ಷಣೀಯ ಸ್ಥಳಗಳಿಗೇನೂ ಕೊರತೆಯಿಲ್ಲ. ಭೋರ್ಗರೆವ ಜಲಪಾತ, ಸುಂದರ ದೇವಾಲಯ, ಪ್ರಕೃತಿದತ್ತ ಪಕ್ಷಿಧಾಮ, ಮನಮೋಹಕ ಬೃಂದಾವನ ಉದ್ಯಾನವನ, ಒಂದೇ ಎರಡೇ... ಮಂಡ್ಯದಲ್ಲಿ ಕಣ್ಮನ ಸೆಳೆಯುವ ಪ್ರದೇಶಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

## ಧುಮ್ಮಿಕ್ಕಿ ಹರಿವ ಜಲಪಾತ "ಬ್ಲಫ್":

ಬೆಂಗಳೂರಿನಿಂದ ೭೬ ಕಿ.ಮೀ. ದೂರವಿರುವ ಶಿವನಸಮುದ್ರಕ್ಕೆ ಭೇಟಿನೀಡಿದ ಪ್ರತಿಯೊಬ್ಬನಿಗೂ ಇಲ್ಲಿ ಎರಡು ಕವಲುಗಳಾಗಿ ಬೇರ್ಪಟ್ಟು ಗಗನ

ಚುಕ್ಕಿ ಭರಚುಕ್ಕಿ ಎಂದು ಹೆಸರಾದ ಜಲಪಾತದಿಂದ ೩೫೦ ಅಡಿ ಎತ್ತರದಿಂದ ಧುಮ್ಮಿಕ್ಕಿ ಹರಿಯುವ ಕಾವೇರಿ ನದಿಯನ್ನು ಕಂಡೊಡನೆ ರೋಮಾಂಚನವಾಗುತ್ತದೆ. ಗಿರಿ ಕಂದರಗಳ ನಡುವಿನಿಂದ ಭೋರ್ಗರೆಯುತ್ತಾ ಹರಿದು ಬಂದು ರಭಸದಿಂದ ಧುಮ್ಮಿಕ್ಕಿ ಅಲ್ಲೊಂದು "ಮೋಡಗಳ ನಾಡನ್ನೇ" ಉಂಟುಮಾಡುವ ಕಾವೇರಿ ನದಿಯ ವೇಗವನ್ನು ಕಂಡು ಖುಷಿಯನ್ನು, ಆತಂಕವನ್ನೂ ಒಮ್ಮೆಗೇ ಪಡೆದುಕೊಳ್ಳುವ ಪ್ರವಾಸಿಗ ಆ ಪ್ರದೇಶದಲ್ಲಿ ಕಾವೇರಿ ನದಿ ಸೃಷ್ಟಿಸಿದ ಹಚ್ಚ ಹಸುರಿನ ಸುಂದರ ಪರಿಸರವನ್ನು ಕಂಡು ಹೆಮ್ಮೆಯಿಂದ ಬೀಗುತ್ತಾನೆ. ಒಂದರೆಗಳಿಗೆ ತಾನೇ ಕವಿಯಾಗಿ ಖುಷಿಯಿಂದ ಹಾಡುತ್ತಾನೆ.

ಭಾರತದಲ್ಲಷ್ಟೇ ಅಲ್ಲ, ಇಡೀ ಏಷ್ಯಾ ಖಂಡದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಜಲಶಕ್ತಿಯಿಂದ ವಿದ್ಯುತ್ ಉತ್ಪಾದಿಸಿದ ಖ್ಯಾತಿ ಶಿವನಸಮುದ್ರದ್ದು. ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ಅವರಿಂದ ೧೯೦೨-೧೯೦೩ರಲ್ಲಿಯೇ ಆರಂಭಗೊಂಡ ಈ ವಿದ್ಯುತ್ ಉತ್ಪಾದನಾ ಕೇಂದ್ರ ೪೨,೦೦೦ ಕಿಲೋ ವ್ಯಾಟ್ ವಿದ್ಯುತ್ ಉತ್ಪಾದಿಸುವ ಶಕ್ತಿ ಹೊಂದಿದೆ. ಕಾವೇರಿ ಮತ್ತು ಶಿಂಷಾ ನದಿಗಳ ಸಂಗಮದ ಸ್ಥಳಕ್ಕೆ ಹೊಂದಿಕೊಂಡಂತೆಯೇ ಈ ವಿದ್ಯುತ್ ಉತ್ಪಾದನಾ ಕೇಂದ್ರವಿದೆ.

ಈ ವಿದ್ಯುತ್ ಉತ್ಪಾದನಾ ಕೇಂದ್ರವನ್ನು ವೀಕ್ಷಿಸ ಹೊರಟವರಿಗೊಂದು ಖುಷಿ ನೀಡುವ ಸಂಗತಿಯಿದೆ. ಪ್ರವಾಸಿಮಂದಿರದಿಂದ ತೀರಾ ಕೆಳಗಿನ ಹಂತದಲ್ಲಿರುವ ಈ ವಿದ್ಯುತ್ ಉತ್ಪಾದನಾ ಕೇಂದ್ರಕ್ಕೆ ಹೋಗಲು 'ರೋಪ್ ವೇ ಟ್ರಾಲಿ'ಯ ಅನುಕೂಲವಿದೆ. ಟ್ರಾಲಿಯಲ್ಲಿ ಕೂತು ಸುತ್ತಲೂ ದಿಟ್ಟಿಸಿದ ಪ್ರವಾಸಿಗ ಕಣ್ಮನ ಸೆಳೆಯುವ ಪ್ರಕೃತಿ ಸೌಂದರ್ಯ, ಬೇರೊಂದು ಲೋಕಕ್ಕೆ ಕರೆದೊಯ್ಯುವ ಸುಂದರವಾದ ಹಸಿರಿನ ಕಣಿವೆ, ವಿದ್ಯುತ್ ಉತ್ಪಾದನಾ ಕೇಂದ್ರದಲ್ಲಿಯೂ ದ್ವೀಪವೊಂದನ್ನು ನಿರ್ಮಿಸಿದಂತೆ ಜುಳುಜುಳು ಎಂದು ನಲಿದಾಡುತ್ತಾ ಮುಂದಡಿಯಿಡುವ ನದಿಯನ್ನು ಕಂಡೊಡನೆ "ಮಧುರ ಮಧುರವೀ ಮಂಜುಳ ಗಾನ" ಎಂದು ತನಗೆ ತಾನೇ ಹೇಳಿಕೊಳ್ಳುತ್ತಾನೆ.

ಬೆಂಗಳೂರಿನಿಂದ ೧೦೦ ಕಿ.ಮೀ.ಗಳ ದೂರದಲ್ಲಿಯೇ "ಕಾವೇರಿ ಮೀನು ಕೇಂದ್ರ"ವಿದೆ: ಕಾವೇರಿ ನದಿಯ ದಡದಲ್ಲಿರುವ ಈ ಕೇಂದ್ರದಲ್ಲಿ

## "ವಡೇ.... ಮದ್ದೂರ್ ವಡೇ"

ಮೈಸೂರಿನಿಂದ ಬೆಂಗಳೂರಿಗೆ ಅಥವಾ ಬೆಂಗಳೂರಿನಿಂದ ಮೈಸೂರಿಗೆ ತೆರಳುವ ಬಸ್ ಅಥವಾ ರೈಲು ಯಾವುದಾದರೂ ಸರಿಯೇ, ಮದ್ದೂರು ಸಮೀಪಿಸತೊಡಗಿದಂತೆಲ್ಲಾ ಪ್ರಯಾಣಿಕರು ಚಿಲ್ಲರೆ ಹಣವನ್ನು ಜೋಡಿಸಿಕೊಂಡು ಕಿಟಕಿಯೆಡೆಗೆ ತಲೆ ತೂರಿಸುತ್ತಾರೆ. ಮದ್ದೂರು ಬಂತೋ ಇಲ್ಲವೋ....

"ವಡೇ ಸಾರ್.... ಮದ್ದೂರ್ ವಡೇ...."

-ಎಂದು ಕೂಗುತ್ತಾ ಬಸ್ಸಿನ ಎರಡೂ ಬದಿ ಓಡಾಡುವ;

ರೈಲಿನ ಬೋಗಿಯೊಳಕ್ಕೇ ನುಗ್ಗಿ "ವಡೇ...." ಎಂದು ಕೂಗುವ ಹುಡುಗರೊಂದಿಗೆ ಸ್ಪರ್ಧೆಗೆ ಬಿದ್ದವರಂತೆ ಮದ್ದೂರ್ ವಡೆಯ ಖರೀದಿಗೆ ತೊಡಗುತ್ತಾರೆ. ಹೆಚ್ಚು ಹೆಚ್ಚಾಗಿ ತಿಂದರೆ ಬೇಗ ಮುಗಿದು ಹೋಗೋದಿಲ್ವೆ? ಅಂದುಕೊಂಡು ಸ್ವಲ್ಪ ಸ್ವಲ್ಪವನ್ನೇ ಮುರಿದು ಬಾಯಿಗೆ ಹಾಕಿಕೊಳ್ಳುತ್ತಾ ಮೈಮರೆಯುತ್ತಾರೆ. ಕಿಟಕಿಯ ಬದಿ ಕುಳಿತ ಹೆಂಡತಿ/ಗೆಳತಿ ತನ್ನ ಪತಿಗೆ/ಪ್ರೇಮಿಗೆ ಲಘುವಾಗಿ ಆಕ್ಷೇಪಿಸುತ್ತಾಳೆ:

"ಎಷ್ಟೊಂದು ಚೆನ್ನಾಗಿದೆ, ಮತ್ತೊಂದೆರಡು ತಗೋಬಾರದಿತ್ತೇನ್ರೀ?"

ಮದ್ದೂರ್ ವಡೆಯ ವೈಶಿಷ್ಟ್ಯವೇ ಅದು.

ರುವ ವಿಶೇಷವೆಂದರೆ ಇಲ್ಲಿ ಮೀನು ಹಿಡಿಯುವ ಕಾರ್ಯವನ್ನು ಒಂದು ಸ್ಪರ್ಧೆಯೆಂಬಂತೆ ಪರಿಗಣಿಸಲಾಗುತ್ತದೆ. ಈ ರೀತಿ ಹಿಡಿದ ಮೀನುಗಳನ್ನು ತೂಕಮಾಡಿ ಸಾಧ್ಯವಾದರೆ ಫೋಟೋ ತೆಗೆದು ನಂತರ ತಕ್ಷಣ ನೀರಿನೊಳಕ್ಕೆ ಬಿಟ್ಟುಬಿಡುತ್ತಾರೆ.

"ಕಾವೇರಿ ಮೀನು ಕೇಂದ್ರ"ಕ್ಕೆ ಆಗಮಿಸುವ ಪ್ರವಾಸಿಗರಿಗೆ ದಟ್ಟ ಕಾಡಿನ ನಡುವೆಯೇ ಅರಣ್ಯ ಇಲಾಖೆ, ಪುಟ್ಟ ಪುಟ್ಟ 'ಕುಟೀರ'ಗಳನ್ನು ಕಟ್ಟಿಸಿದೆ. ಪ್ರತಿ 'ಕುಟೀರ'ಕ್ಕೂ ಸಾಧ್ಯವಿದ್ದಷ್ಟೂ ಮೂಲಭೂತ ಸೌಕರ್ಯಗಳನ್ನೊದಗಿಸಿದೆ. ವಿಹಾರಾರ್ಥವಾಗಿ ಆಗಮಿಸಿ ದೋಣಿಯಲ್ಲಿ ನಾವಿಕನಿಗೆದುರಾಗಿ ಕೂತು "ದೋಣಿ ಸಾಗಲಿ ಮುಂದೆ ಹೋಗಲಿ..." ಎಂದು ಶುರುಮಾಡಿಕೊಂಡು ಪ್ರಕೃತಿ ವೀಕ್ಷಣೆಯಲ್ಲಿ ಮೈಮರೆವ ನಿಸರ್ಗ ಪ್ರಿಯರಿಗೆ ಎರಡು-ಮೂರು ವಿಧದ ದೋಣಿಗಳನ್ನೂ ಒದಗಿಸಿದೆ.

## ಮೇಲುಕೋಟೆಯ ವೈರಮುಡಿ

ಕರ್ನಾಟಕದ ಹೆಸರಾಂತ ದೇವಾಲಯಗಳು ಎಂದೊಡನೆ ತಟ್ಟನೆ ನೆನಪಾಗುವ ಹೆಸರು 'ಮೇಲುಕೋಟೆ'.ಮೈಸೂರಿನಿಂದ ೩೦ ಮೈಲಿ ದೂರವಿರುವ ಮೇಲುಕೋಟೆ ಪಾಂಡವಪುರ ತಾಲ್ಲೂಕಿಗೆ ಸೇರಿಕೊಂಡ ಹೋಬಳಿ ಕೇಂದ್ರ.

೧೨ನೇ ಶತಮಾನದ ಆರಂಭದಲ್ಲಿಯೇ ವೈಷ್ಣವ ಪಂಥಕ್ಕೆ ಸೇರಿದ ಶ್ರೀರಾಮಾನುಜಾಚಾರ್ಯರು ಮೇಲುಕೋಟೆಯ ಶ್ರೀ ಚೆಲುವ ನಾರಾಯಣ ಸ್ವಾಮಿಯನ್ನು ಪೂಜಿಸುತ್ತಾ ಅಲ್ಲಿಯೇ ೧೪ ವರ್ಷಗಳನ್ನು ಕಳೆದ ನಂತರದಿಂದಲೇ ಮೇಲುಕೋಟೆ ಹೆಸರಾಗಿ ಹೋಯಿತು. ಅಂದಿನಿಂದ ಮೇಲುಕೋಟೆ ಶ್ರೀ ವೈಷ್ಣವ ಪಂಥಕ್ಕೆ ಸೇರಿದ ಬ್ರಾಹ್ಮಣರಿಗೆ ಪ್ರಮುಖ ಯಾತ್ರಾಸ್ಥಳವಾಗಿದೆ.

ಮೇಲುಕೋಟೆ ಎಂದೊಡನೆ ಪ್ರತಿವರ್ಷದ ಬೇಸಿಗೆ ಶುರುವಾಗುವ ವೇಳೆಯಲ್ಲಿ ಚೆಲುವರಾಯ ಸ್ವಾಮಿಗೆ ನಡೆಯುವ 'ವೈರಮುಡಿ ಸೇವೆ'ಯ ನೆನಪು ಬಾರದೇ ಇರದು. ಲಕ್ಷಾಂತರ ಮಂದಿ ಭಕ್ತಾದಿಗಳ ಜಯಘೋಷದ ನಡುವೆ ಮೆರವಣಿಗೆ ಹೊರಡುವ ಚೆಲುವರಾಯಸ್ವಾಮಿಯನ್ನು ಅಲಂಕರಿಸಲಾದ ಆಭರಣಗಳ ಬೆಲೆಯೇ ೫೦ ಕೋಟಿ ರೂ.ಗಳಿಗೂ ಅಧಿಕ ಮೊತ್ತದ್ದಾಗಿದೆ. ಮೈಸೂರಿನ ಹಿಂದಿನ ಮಹಾರಾಜರುಗಳಿಂದ ಕಾಣಿಕೆಯ ರೂಪದಲ್ಲಿ ಬಂದ ಈ ಆಭರಣಗಳನ್ನು ಉತ್ಸವ ಮುಗಿಸಿದೊಡನೆಯೇ ಜಿಲ್ಲಾ ಖಜಾನೆಯಲ್ಲಿ ಭದ್ರಪಡಿಸಿಡಲಾ

---

ಎಲ್ಲರೂ ಇಷ್ಟಪಡುವ ತಿಂಡಿ ಎಂದೇ ಹೆಸರಾದ, ವಡೆಗಳ ರಾಜ ಎಂದೇ ಖ್ಯಾತಿ ಪಡೆದ ಮದ್ದೂರ್ ವಡೆ ಮದ್ದೂರಿನ ಇತಿಹಾಸದೊಂದಿಗೇ ಬೆರೆತು ಹೋಗಿದೆ. ಅಷ್ಟೇ ಅಲ್ಲ, ತನ್ಮೂಲಕ ಮದ್ದೂರಿನ ಹೆಸರನ್ನು ಎಲ್ಲೆಡೆಗೂ ಪರಿಚಯಿಸಿದೆ.

ಮದ್ದೂರ್ ವಡೆ ಪಡೆದುಕೊಂಡ ಜನಪ್ರಿಯತೆ ಎಂತಹುದೆಂದರೆ ಈವರೆಗೂ ಪುಳಿಯೊಗರೆ ಮಿಕ್ಸ್, ಜಾಮೂನ್ ಮಿಕ್ಸ್ ಮುಂತಾದ ಸಿದ್ಧ ಮಸಾಲೆಯನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿದ ಕಂಪನಿಗಳು "ಮದ್ದೂರ್ ವಡೆ"ಯ ಮಸಾಲೆಯನ್ನೂ ಮಾರುಕಟ್ಟೆಗೆ ಬಿಡುಗಡೆ ಮಾಡಿದವು. ಆದರೆ ಮದ್ದೂರು ವಡೆಗೆ ಜನಪ್ರಿಯತೆ ಹೆಚ್ಚುತ್ತಾ ಹೋದಂತೆ ಈ ಮಸಾಲೆ ಮಿಶ್ರಣಕ್ಕೆ ಬೇಡಿಕೆ ಕಡಿಮೆಯಾಯಿತು.

ದೇವಾಲಯಗಳ ಮೂಲಕ, ಕಾನನದ ಮೂಲಕ, ಜಲಾಶಯಗಳ ಹೆಸರಿಂದಲೇ ಒಂದೊಂದು ಪಟ್ಟಣವು ಹೆಸರಾದ ವಿಷಯ ಎಲ್ಲರಿಗೂ ತಿಳಿದಿದ್ದೇ. ಆದರೆ, ಈ "ವಡೆ"ಯಿಂದಲೇ 'ಮದ್ದೂರು' ಜನಪ್ರಿಯವಾದದ್ದು. 'ಮೈಸೂರು ಪಾಕ್'ನಿಂದ ಮೈಸೂರು, 'ಪೇಡೆ'ಯಿಂದ ಧಾರವಾಡ, 'ಕರದಂಟು'ನಿಂದ ಅಮೀನಗಡ, 'ಕುಂದಾ'ದಿಂದ ಬೆಳಗಾವಿ ಪ್ರಸಿದ್ಧಿ ಪಡೆದ ಹಾಗೆಯೇ ಇದು ಎಂದು ಭಾವಿಸಿದರೆ ಅದು ತಪ್ಪು, ಉಳಿದವೆಲ್ಲ ಇನ್ನೆಲ್ಲೆಡೆಗೂ ತಯಾರಿಸಲ್ಪಡುತ್ತವೆ. ಆದರೆ 'ವಡೆ'ಗೆ ಮಾತ್ರ ಮದ್ದೂರೇ ಮುದ್ದೂರು!

- ಎ.ಆರ್. ಮಣಿಕಾಂತ್

ಮೀನು ಹಿಡಿಯುವ ಸ್ಪರ್ಧೆ



ಮೀನು ಹಿಡಿಯಲು ಹೊರಟ ಸಂಭ್ರಮ



ಗುತ್ತದೆ. ಮುಂದಿನ ವರ್ಷದವರೆಗೂ ಕಳೆದುಹೋದ ವರ್ಷದ ವೈಭವವೇ ಕತೆಯಾಗಿ ತೇಲುತ್ತಿರುತ್ತದೆ.

ದೇವಾಲಯಗಳ ಖ್ಯಾತಿಯೊಂದಿಗೆ ಹೆಸರಾದಂತೆಯೇ ಕೈಮಗ್ಗದ ಹತ್ತಿ ಬಟ್ಟೆಗಳಿಗೆ, ಉತ್ತಮ ಗುಣಮಟ್ಟದ ರೇಷ್ಮೆ ಜರಿಯ ಬಟ್ಟೆಗಳಿಗೆ ಮೇಲುಕೋಟೆ ಹೆಸರುವಾಸಿ. ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ನೀಡಿರುವ ಹಿರಿಯಜ್ಜ ಪು.ತಿ. ನರಸಿಂಹಾಚಾರ್ಯ (ಕಾವ್ಯನಾಮ: ಪುತಿನ)ರ ಜನ್ಮಸ್ಥಳವೇ ಮೇಲುಕೋಟೆ.



ಬೃಂದಾವನ ತೋಟ

## ರಂಗನತಿಟ್ಟು, ಕೊಕ್ಕರೆ ಬೆಳ್ಳೂರಿನ ಪಕ್ಷಿಧಾಮಗಳು:

ರಂಗನತಿಟ್ಟು ಪಕ್ಷಿಧಾಮ ಎಂದೊಡನೆ ಪಕ್ಷಿ ಪ್ರೇಮಿಗಳಿಗೆ ರೋಮಾಂಚನ, ಎಂಥದೋ ಪುಳಕ. ಇಡೀ ಶ್ರೀ ರಂಗಪಟ್ಟಣವೇ ತನ್ನ ಸ್ವತ್ತು ಎಂದು ತಿಳಿದಿರುವಂತೆ. ಈ ಊರಿನ ಸುತ್ತಲೂ ಹತ್ತಾರು ಕವಲುಗಳಾಗಿ ಹರಿದು ಬಿಡುವ ಕಾವೇರಿ ನದಿ ಇಲ್ಲಿಂದ ೩ ಕಿ.ಮೀ. ದೂರದಲ್ಲಿ ನಿರ್ಮಿಸಿರುವ ಪ್ರಕೃತಿದತ್ತ ಪಕ್ಷಿಧಾಮವೇ ರಂಗನತಿಟ್ಟು.

ಕಾವೇರಿ ನದಿಯ ಮಧ್ಯಭಾಗದಲ್ಲಿ ಸುಮಾರು ೧೦೦ ಎಕರೆಗಳಷ್ಟು ಪ್ರದೇಶವನ್ನು ವ್ಯಾಪಿಸಿಕೊಂಡಿರುವ ರಂಗನತಿಟ್ಟು ಕಾವೇರಿ ನದಿಯಿಂದ ನಿರ್ಮಿತವಾದ ಒಂದು ಪುಟ್ಟದ್ವೀಪ. ಮಳೆಗಾಲವನ್ನು ಹೊರತುಪಡಿಸಿದರೆ ಉಳಿದ ಸಂದರ್ಭದಲ್ಲಿ 'ನಿರಾಭರಣ ಸುಂದರಿ'ಯಂತೆ ಮೌನವಾಗಿ ಪ್ರವಹಿಸುವ ಕಾವೇರಿ ನದಿಯಿಂದ ಕೂಡಿರುವ ರಂಗನತಿಟ್ಟಿನಲ್ಲಿ ಅಲ್ಲಲ್ಲಿ ಹಸುರಿನ ಚಾಮರವನ್ನೇ ಹೊದ್ದಂತೆ ಕಂಡುಬರುವ ನಡುಗಡ್ಡೆಗಳಿವೆ. ಪ್ರತಿ ವರ್ಷದ ಜೂನ್‌ನಿಂದ ಡಿಸೆಂಬರ್ ತಿಂಗಳಿನ ಅವಧಿಯಲ್ಲಿ ರಂಗನತಿಟ್ಟಿಗೆ ಜಗತ್ತಿನ ಹಲವಾರು ಕಡೆಯಿಂದ ಲಗ್ಗೆಯಿಡುವ ಪಕ್ಷಿಗಳು ನಡುಗಡ್ಡೆಯಲ್ಲಿಯೇ ತಮಗೊಂದು 'ನೆಲೆ' ನಿರ್ಮಿಸಿಕೊಳ್ಳುತ್ತವೆ. ಹತ್ತಾರು ನಮೂನೆಯ ಗೂಡುಗಳಲ್ಲಿ ಬಣ್ಣಬಣ್ಣದ ಮೊಟ್ಟೆಯಿಟ್ಟು ಜೋಪಾನದಿಂದ ಅವುಗ

ಳನ್ನು ಕಾಪಾಡಿ ಮರಿಮಾಡುತ್ತವೆ.

ಆಹಾರದ ನೆನಪಾದೊಡನೆಯೇ ಗುಂಪು ಗುಂಪಾಗಿ ಪುರ್ರೆಂದು ಹಾರಿಹೋಗುತ್ತವೆ. ಆ ಒಂದು ಕ್ಷಣಕ್ಕೆ ಆಗಸವೆಲ್ಲಾ ನೂರಾರು ಬಣ್ಣದ ರೆಕ್ಕೆಗಳಿಂದ ತುಂಬಿಹೋಗುವುದನ್ನು ಕಂಡು ಎಂಥಾ ಅರಸಿಕನೂ "ಹಕ್ಕಿ ಹಾರುತಿದೆ ನೋಡಿದಿರಾ?" ಎಂದು ಹಾಡಿಯೇ ಬಿಡುತ್ತಾನೆ.

ಇಲ್ಲಿ ಪ್ರವಾಸಿಗರಿಗೆ ಪಕ್ಷಿಗಳ 'ಸ್ವಚ್ಛಂದ ವಿಹಾರ'ವನ್ನು, ಸರಸ-ಸಲ್ಲಾಪವನ್ನು ವೀಕ್ಷಿಸಲು ಅನುಕೂಲಮಾಡಿಕೊಟ್ಟಿರುವ ಅರಣ್ಯ ಇಲಾಖೆ ಪಕ್ಷಿ ವೀಕ್ಷಣೆಗೆ ಅನುಕೂಲವಾಗುವಂತೆ ಗೋಪುರವನ್ನು ನಿರ್ಮಿಸಿದೆ. ಅಷ್ಟೇ ಅಲ್ಲದೆ ಎರಡು ರೂಪಾಯಿಗಳ ಅಲ್ಪ ಮೊತ್ತದಲ್ಲಿಯೇ ದೋಣಿ ವಿಹಾರಕ್ಕೂ ಅವಕಾಶ ಕಲ್ಪಿಸಿದೆ. ಬಹುತೇಕ ಪಕ್ಷಿಗಳು ತಮ್ಮ ಗೂಡುಗಳೊಂದಿಗೆ ತಮ್ಮ ಮರಿಗಳೊಂದಿಗೆ ಖುಷಿಯಿಂದಿರುವ 'ನಡುಗಡ್ಡೆಗಳ' ಅಕ್ಕಪಕ್ಕದಲ್ಲೇ ದೋಣಿ ಸಂಚರಿಸುವುದರಿಂದ ಪಕ್ಷಿಗಳನ್ನು ತೀರಾ ಹತ್ತಿರದಿಂದ ವೀಕ್ಷಿಸುವ ಅದೃಷ್ಟ ಪ್ರವಾಸಿಗನಿಗಿದೆ.

ರಂಗನತಿಟ್ಟಿನಷ್ಟು ಖ್ಯಾತವಲ್ಲದ, ಆದರೆ ಅಷ್ಟೇ ಸುಂದರವಾದ ಪಕ್ಷಿಧಾಮವೆಂದರೆ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಕೊಕ್ಕರೆ ಬೆಳ್ಳೂರು. ಸಾವಿರಾರು ವರ್ಷಗಳಿಂದಲೂ ತಪ್ಪದೇ ಕೊಕ್ಕರೆ ಬೆಳ್ಳೂರೆಂಬ ಪುಟ್ಟ ಹಳ್ಳಿಗೆ ಹಾರಿಬರುತ್ತಿರುವ ಪೆಲಿಕಾನ್ ಮತ್ತು ಪೇಟೆಂಡ್ ಸ್ಟಾರ್ಕ್‌ಗಳು ಅಲ್ಲಿಯ ಜನರೊಂದಿಗೆ ಆತ್ಮೀಯ ಸಂಬಂಧ ಹೊಂದಿವೆ. ಈ ಎರಡೂ ರೀತಿಯ ಪಕ್ಷಿಗಳ ಪ್ರಮುಖ ಆಹಾರ ಮೀನುಗಳು ಮಾತ್ರ ಆಗಿರುವುದರಿಂದ ಒಂದೊಮ್ಮೆ ಈ ಪಕ್ಷಿಗಳಿಗೆ 'ಮೀನು'ದೊರಕದಿದ್ದರೆ ಏನು ಗತಿ? ಎಂದು ಚಿಂತಿತರಾಗಿರುವ ಕೊಕ್ಕರೆ ಬೆಳ್ಳೂರಿನ ಜನತೆ ತಾವೇ ತಾತ್ಕಾಲಿಕವಾಗಿ ಪುಟ್ಟ ಕೆರೆಯೊಂದನ್ನು ನಿರ್ಮಿಸಿ ಪಕ್ಷಿಗಳಿಗೆಂದು ಮೀನನ್ನೂ ಸಾಕಿದ್ದಾರೆ. ಅಲ್ಲಿನ ಪಕ್ಷಿಗಳನ್ನು 'ಮಕ್ಕಳಂತೆ' ತಿಳಿದು ಪೋಷಿಸುತ್ತಿದ್ದಾರೆ.

**'ಮೈಸೂರು ಹುಲಿ'ಯ ರಾಜಧಾನಿ**

ಮಂಡ್ಯಕ್ಕೆ ಭೇಟಿ ನೀಡುವ ಯಾವುದೇ ಪ್ರವಾಸಿಗನಿಗೂ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡದೆ ವಾಪಸಾಗುವುದು ಸಾಧ್ಯವೇ ಇಲ್ಲ. ಕೇವಲ ಸೈನಿಕನಾಗಿದ್ದುಕೊಂಡು ತನ್ನ ಬುದ್ಧಿಶಕ್ತಿ, ಚತುರತೆಯಿಂದ ಒಂದು ರಾಜ್ಯ ಕಟ್ಟಿದ ಹೈದರ್ ಆಲಿ, "ಬ್ರಿಟಿಶರೇ ಭಾರತ ಬಿಟ್ಟು ತೊಲಗಿ" ಎಂದು ೧೮ನೇ ಶತಮಾನದಲ್ಲಿಯೇ ಸಿಡಿಲಿನಂತೆ ಆರ್ಭಟಿಸಿ ಅದಕ್ಕಾಗಿ ನೆಪೋಲಿಯನ್‌ನ ಸಹಾಯ ಬೇಡಿದ್ದ ಟಿಪ್ಪು ಸುಲ್ತಾನನ ನೆನಪು ಪ್ರವಾಸಿಗನನ್ನು ಬಿಡದೇ ಕಾಡುತ್ತದೆ.

ಭಾರತ ದೇಶದಲ್ಲಿನ ಎರಡನೇ ಅತ್ಯಂತ ಬಲಿಷ್ಠವಾದ ಕೋಟೆ ಎಂದೇ ಹೆಸರಾಗಿದ್ದ ಟಿಪ್ಪು ಸುಲ್ತಾನನ ಈ ಕೋಟೆ ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕಾವೇರಿ ನದಿಯಿಂದಾವೃತ್ತವಾದ ಪುಟ್ಟದೊಂದು ದ್ವೀಪ. ರಣಧೀರನಷ್ಟೇ ಅಲ್ಲದೆ ಸೌಂದರ್ಯೋಪಾಸಕನೂ ಆಗಿದ್ದ ಟಿಪ್ಪು ಸುಲ್ತಾನ್ ಶ್ರೀರಂಗಪಟ್ಟಣದ ದಕ್ಷಿಣ ಭಾಗದಲ್ಲಿ ದರಿಯಾ ದೌಲತ್ ಎಂಬ ಉದ್ಯಾನವನ್ನು ನಿರ್ಮಿಸಿದನಲ್ಲದೆ ಉದ್ಯಾನದ ಮಧ್ಯಭಾಗದಲ್ಲಿ ಬೇಸಿಗೆ ಅರಮನೆಯೊಂದನ್ನೂ ಕಟ್ಟಿಸಿದ್ದ. ಟಿಪ್ಪುವಿನ ಕಲೋಪಾಸನೆಗೆ ಇಂದಿಗೂ ಸಾಕ್ಷಿಯೊಂದಾಗಿ ಉಳಿದು ಹೋಗಿರುವ ದರಿಯಾ ದೌಲತ್‌ನಲ್ಲಿ ಈಗಲೂ ಚಿತ್ತಾಕರ್ಷಕವಾದ ಕಲೆಗಾರಿಕೆಯಿದೆ. ಒಂದರೆಗಳಿಗೆ ಟಿಪ್ಪುವಿನ ಲೋಕಕ್ಕೆ ಕರೆದೊಯ್ಯಬಲ್ಲ 'ಮೈಸೂರು ಹುಲಿ'ಯ ದಿರಿಸುಗಳಿವೆ. ದುರಾಕ್ರಮಣದಿಂದ ಭಾರತೀಯರನ್ನು ಗೋಳು ಹುಯ್ದುಕೊಂಡ ಬ್ರಿಟೀಶರ ರುಂಡಗಳನ್ನು ಮುಲಾಜಿಲ್ಲದೆಯೇ ಚೆಂಡಾಡಿದ, ಇನ್ನೂ 'ಹರಿತ'ಕಳೆದುಕೊಂಡಿರದ ಕತ್ತಿಗಳ ಸಾಲಿದೆ. ಕುದುರೆಗೆ ಹಾಕುತ್ತಿದ್ದ 'ಜೀನು' ಇದೆ. ಅಂದಿನ ಕಾಲದಲ್ಲಿ ಬಳಸುತ್ತಿದ್ದ ಚಿನ್ನ, ಬೆಳ್ಳಿಯ ಹಣವೂ ಇದೆ.

ದರಿಯಾ ದೌಲತ್ತಿನ ಚಿತ್ತಾಕರ್ಷಕ ನೆನಪಿನಲ್ಲೇ ಮುಂದೆ ಸಾಗಿದವನಿಗೆ 'ಗುಂಬಜ್' ತಟ್ಟನೆ ಎದುರಾಗುತ್ತದೆ. ತನ್ನ ತಂದೆ ಹೈದರಾಲಿಯ ಸಮಾಧಿಗೆಂದು ಟಿಪ್ಪು ನಿರ್ಮಿಸಿದ ಈ ಸ್ಥಳದಲ್ಲಿಯೇ ಹೈದರ್, ಟಿಪ್ಪು ಮತ್ತು ಆತನ ತಾಯಿಯ ಗೋರಿಗಳಿವೆ. ಗುಂಬಜ್‌ಗೆ ಹೊಂದಿಕೊಂಡಂತೆಯೇ ಅದರ ಸುತ್ತಮುತ್ತಲೂ ಟಿಪ್ಪುವಿನೊಂದಿಗೆ ಹೋರಾಡಿ ಪ್ರಾಣ ತೆತ್ತವರ ಗೋರಿಗಳಿವೆ. ಟಿಪ್ಪುವಿನ ಅಪ್ರತಿಮ ಕೆಚ್ಚು ಎಂತಹುದೆಂದರೆ

'ಗುಂಬಜ್'ಗಿರುವ ಬೃಹದಾಕಾರದ ಬಾಗಿಲುಗಳನ್ನು ಲಾರ್ಡ್ ಡಾಲ್‌ಹೌಸಿಯೇ ಕೊಡುಗೆಯಾಗಿ ನೀಡಿದ್ದಾನೆ! ಇಷ್ಟೆಲ್ಲವನ್ನೂ ತಿಳಿವ ವೇಳೆಗೆ ಪ್ರವಾಸಿಗನ ಕಂಗಳು ಒದ್ದೆಯಾಗಿರುತ್ತವೆ. ಮನಸ್ಸು ಭಾರವಾಗಿರುತ್ತದೆ.

### ವಿಶ್ವವಿಖ್ಯಾತ 'ಬೃಂದಾವನ'

ಕೃಷ್ಣರಾಜಸಾಗರ ಎಲ್ಲಿದೆ? ಎಂದರೆ ಮೈಸೂರಿನಲ್ಲಿ ಎಂದು ತಟ್ಟನೆ ಉತ್ತರಿಸಿ ಬಿಡುವ ಮಂದಿಗೆ ಕೆ.ಆರ್.ಎಸ್. ಮಂಡ್ಯ ಜಿಲ್ಲೆಗೆ ಸೇರಿದೆ, ಎಂದರೆ ಆಶ್ಚರ್ಯವಾಗಬಹುದು.

ಮೊಗಲ್ ಅರಸರ ಯೋಜನಾ ಪದ್ಧತಿಯಡಿಯಲ್ಲಿ ಮೈಸೂರಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್‌ರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣಗೊಂಡ ಇಲ್ಲಿಯ ಉದ್ಯಾನವನ 'ಬೃಂದಾವನ' ಎಂದು ವಿಶ್ವವಿಖ್ಯಾತವಾಗಿದೆ. ಕೃಷ್ಣರಾಜಸಾಗರ ಅಣೆಕಟ್ಟೆಯ ಕೆಳಭಾಗದಲ್ಲಿ ನಿರ್ಮಾಣವಾಗಿರುವ ಬೃಂದಾವನ ಉದ್ಯಾನವನವು ಸಂಜೆಯಾದೊಡನೆಯೇ ಮದುವಣಗಿತ್ತಿಯಂತೆ ಅಲಂಕರಿಸಿಕೊಂಡು ಬೆಳಗಲಾರಂಭಿಸುತ್ತದೆ. ಅಲ್ಲಲ್ಲಿ ವರ್ಣರಂಜಿತ ಕಾರಂಜಿಗಳನ್ನು ಸೃಷ್ಟಿಸಿ 'ನಂದನವನವೆಂದರೆ ಇದೇ' ಇರಬೇಕೇನೋ ಎಂಬ ಭ್ರಮೆಯನ್ನು ಪ್ರವಾಸಿಗನಲ್ಲಿ ಮೂಡಿಸುತ್ತದೆ.

ಮಂಡ್ಯ ಜಿಲ್ಲೆಯ ಈ ಎಲ್ಲಾ ಸುತ್ತಾಟವನ್ನೂ ಮುಗಿಸುವ ವೇಳೆಗೆ ಪ್ರವಾಸಿಗ ಹಲವು ರೀತಿಯ ಅನುಭವ ಪಡೆದುಕೊಂಡಿರುತ್ತಾನೆ. ಪ್ರವಾಸಕ್ಕೆ ಮುನ್ನ ಅಪರಿಚಿತನಾಗಿದ್ದಾತ ಪ್ರವಾಸ ಕೊನೆಗೊಳ್ಳುವ ವೇಳೆಗೆ ಮಂಡ್ಯದವನೇ ಆಗಿಹೋಗಿರುತ್ತಾನೆ. ಈ ವರೆಗಿನ ಪ್ರವಾಸ ಕಾಲದಲ್ಲಿನ ಹಲವಾರು ಮಧುರ ನೆನಪುಗಳನ್ನು ಮತ್ತೆ ಮತ್ತೆ ನೆನೆಯುತ್ತಲೇ ಕಡೆಗೊಮ್ಮೆ ಖುಷಿಯಿಂದ ನುಡಿಯುತ್ತಾನೆ.

"ಮಂಡ್ಯ, ಮಂಡ್ಯ.. ಮಧುರ ಮಂಡ್ಯ"

ಈ ಊರಿಗೆ ಕಡೆಯ ನಮನ ಎಂದು ನುಡಿದು ಮುನ್ನಡೆದ ಪ್ರವಾಸಿಗನಿಗೆ ಅಷ್ಟೆತ್ತರ ಬೆಳೆದ ಕಬ್ಬು, ಕಾಳುಗಳಿಂದ ತುಂಬಿಹೋದ ಭತ್ತದ ತೆನೆಗಳು ನಿಟ್ಟುಸಿರಿನೊಂದಿಗೇ ತಾವೂ ವಿದಾಯ ಹೇಳುತ್ತವೆ.

---

*(ಆಧಾರ: 'ಆಲೈವ್'ನಲ್ಲಿ ಪುನೀತಾ ಖತ್ರಿ ಬರೆದ ಚಿತ್ರ ಲೇಖನ)*



## ಹರ ಕಾಯಲ್.....

ಕವಿ ಕುವೆಂಪು ಅವರ 'ಹರ ಕೊಲ್ಲಲ್ ನರ ಕಾಯ್ವನೆ'ನಿಮಗೆಲ್ಲ ಗೊತ್ತು. ಆದರೆ ಹರನೇ ಕಾಯ್ದರೆ ನರನೆಂತು ಕೊಂದಾನು?

ಇರಾಣಿ ಪತ್ರಿಕೆಯೊಂದರ ಪ್ರಕಾರ ನಿಯಾಜ್ ಅಲಿ ಎಂಬ ಕೈದಿಗೆ ಮರಣದಂಡನೆ ವಿಧಿಸಲ್ಪಟ್ಟಿತು. ಆ ಪ್ರಕಾರ ಆತನನ್ನು ನೇಣುಗಂಬಕ್ಕೇರಿಸಿ ಇಪ್ಪತ್ತು ನಿಮಿಷಗಳ ಕಾಲ ತೂಗಾಡಿಸಲಾಯಿತು. ಪಾಪ, ನಿಯಾಜ್ ಅಲಿಯ ಮುಖ ಕಪ್ಪಿಟ್ಟಿತು. ನಾಲಿಗೆ ಹೊರಬಂತು. ಆತ ಸತ್ತನೆಂದು ದೇಹವನ್ನು ವೈದ್ಯರಿಗೆ ಒಪ್ಪಿಸಲಾಯಿತು. ಅವರು ಪರೀಕ್ಷಿಸಿ ನಿಯಾಜ್ ಅಲಿ 'ಸತ್ತಿದ್ದನ್ನು' ದೃಢಪಡಿಸಿದ್ದೂ ಆಯಿತು, ಶವಾಗಾರಕ್ಕೆ 'ಶವ'ವನ್ನು ಒಯ್ದದ್ದೂ ಆಯಿತು.

ಅಂತ್ಯಸಂಸ್ಕಾರಕ್ಕಾಗಿ ಹೆಣವನ್ನು ಪಡೆಯಬಂದ ಅವನ ಆಪ್ತೇಷ್ಟರಿಗೆ ಆಶ್ಚರ್ಯ ಕಾದಿತ್ತು. ನಿಯಾಜ್ ಅಲಿಯ ಹೃದಯ ಇನ್ನೂ ತುಡಿಯುತ್ತಲೇ ಇತ್ತು. ತುರ್ತಾಗಿ ಆಸ್ಪತ್ರೆಗೆ ಸಾಗಿಸಿದಾಗ ಆತ ಬದುಕುಳಿದ.

ಹಾಂ. ಆಸ್ತಿಕ ಬಂಧುಗಳಿಗೊಂದು ಸಂತಸದ ಸುದ್ದಿ: ಅಲ್ಲಾನ ಭಕ್ತನಾದ ನಿಯಾಜ್ ಅಲಿ ಜೈಲಿನಲ್ಲಿಯೂ ನಿಯಮಿತವಾಗಿ ನಮಾಜು ಮಾಡುತ್ತಿದ್ದನಂತೆ.

ಬಹುಶಃ 'ಹರ ಕಾಯಲ್ ನರಕೊಲ್ವನೆ?' ಎಂದು ಸೋಮೇಶ್ವರ ಕವಿಯು ಹೇಳಿದ್ದು ಇದಕ್ಕೇ ಇರಬೇಕು.. ಇಷ್ಟಕ್ಕೂ ಭಕ್ತಾಭಿಮಾನಿಯಲ್ಲವೆ ದೇವರು?

- ವಾಸುದೇವ ರಾ. ಕಲಘಟಗಿ



ಭಾರತೀಯ ವಿಜ್ಞಾನಿ ಆನಂದ ಚಕ್ರವರ್ತಿ

# ಪುರಾತನ ಜೀವಿಗಳಿಗೆ ಆಧುನಿಕ ಶಿಕ್ಷಣ

ವಿಜ್ಞಾನಿಗಳೂ ಬೇರೆಯ ಆದ ತರದಲ್ಲಿ ಶಿಕ್ಷಕರಾಗುತ್ತಿದ್ದಾರೆ

ಬೊನ್ಸಾಯ್ ಶ್ರೀನಿವಾಸ

ಪರಿಸರಕ್ಕೂ ಮಾನವ ಕುಲಕ್ಕೂ ಅವಿನಾಭಾವದ ಸಂಬಂಧ. ಹಾಗೆ ನೋಡಿದರೆ ಮಾನವ ಕುಲದ ಉಗಮವೇ ಪರಿಸರ ಮಾಲಿನ್ಯಕ್ಕೆ ಮೂಲ. ಕೋಟ್ಯಂತರ ವರ್ಷಗಳ ಹಿಂದೆ ಹಲವಾರು ಮಾನವರಿಂದ ಅಲ್ಪ ಪ್ರಮಾಣದಲ್ಲಿ ಆರಂಭವಾದ ಪರಿಸರ ಮಾಲಿನ್ಯ ಕ್ರಮೇಣ ಹೆಚ್ಚಾಗುತ್ತಾ ನಡೆದು ಸುಮಾರು ೨೦ ವರ್ಷಗಳಿಂದೀಚೆಗೆ ಮಾನವ ಕುಲದ ಅಸ್ತಿತ್ವಕ್ಕೇ ಮಾರಕವಾಗುವ ರೀತಿಯಲ್ಲಿ ಬೆಳೆದು ನಿಂತಿತು.

ಅದರ ಪರಿಣಾಮ ಊಹಿಸಲಸದಳ. ಆದರೆ ನಮ್ಮ ಭೂಪಾಲಿನ ಸೈನೈಡ್ ದುರಂತ, ೨೦ ವರ್ಷಗಳ ಹಿಂದೆ ಜಪಾನಿನ ಮಿನಮಾಟೊ ಕೊಲ್ಲಿಯಲ್ಲಿ ಪಾದರಸವನ್ನು ಹೀರಿದ ಮೀನುಗಳನ್ನು ತಿಂದ ಮೀನುಗಾರರ ಬವಣೆ, ಇಡೀ ಪಾಶ್ಚಾತ್ಯ ದೇಶಗಳಲ್ಲಿ ವಾಹನಗಳಿಂದ ಹೊರಬರುವ ಹೊಗೆಯಿಂದ ಉಂಟಾಗುವ ವಾಯುಮಾಲಿನ್ಯ ಇತ್ಯಾದಿಗಳಿಗೆ ಇನ್ನು ಮುಂದೆ ಮಾನವಕುಲ ಹೆದರಬೇಕಿಲ್ಲ.

ನಂಬಲು ಅಸಾಧ್ಯ ಎನ್ನುವಿರಾ? ಇದುವರೆಗೂ ಮಾನವನನ್ನು ಜೀವಂತ ತಿಂದು ಜೀರ್ಣಿಸಿಕೊಂಡ

ಸೂಕ್ಷ್ಮಾಣುಗಳು ತಾವು ಇದುವರೆಗೆ ಎಸಗಿದ 'ಪಾಪಕೃತ್ಯಗಳಿಗೆ ಪ್ರಾಯಶ್ಚಿತ್ತವೊ' ಎಂಬಂತೆ ಇಂದು ಇಡೀ ಮಾನವಕುಲಕ್ಕೆ ಅನೇಕ ಉಪಕಾರಗಳನ್ನು ಮಾಡಲಾರಂಭಿಸಿದೆ.

ಶತ್ರುವನ್ನೇ ಮಿತ್ರನನ್ನಾಗಿ ಮಾರ್ಪಡಿಸುವುದು ನೂತನ ತಂತ್ರಜ್ಞಾನದ ಹಲವಾರು ಉಪಾಯಗಳ ಪೈಕಿ ಒಂದು. ಹೀಗಾಗಿ ಅನಾದಿ ಕಾಲದಿಂದ ಸೂಕ್ಷ್ಮಾಣುಗಳಿಗೆ ಹೆದರುತ್ತಿದ್ದ ಮಾನವ ಇಂದು ಅವುಗಳಿಗೆ ಭಯಪಡಬೇಕಾಗಿಲ್ಲ.

ಒಂದಾನೊಂದು ಕಾಲದಲ್ಲಿ ಅಮೆರಿಕನ್ನರ ಬಂಗಾರದ ಹುಚ್ಚು ಅಲ್ಲಿ ಹರಿಯುವ ನದಿಗಳ ನೀರಿನಿಂದ ಬಂಗಾರ ತೆಗೆಯುವುದಕ್ಕೆ ನಾಂದಿಯಾಯಿತು. ಕ್ರಮೇಣ ಅವರು ಗಣಿಗಳಿಂದ ಹೊರತೆಗೆದ ಅದಿರನ್ನು ಶುದ್ಧೀಕರಿಸಲು ಭಯಂಕರವಾದ ಸೈನೈಡ್, ಪಾದರಸ, ಆರ್ಸೆನಿಕ್ ಇತ್ಯಾದಿಗಳನ್ನು ಉಪಯೋಗಿಸಲಾರಂಭಿಸಿದರು. ಶುದ್ಧೀಕರಣದ ನಂತರ ಹೊರಬಂದ ಮಾಲಿನ್ಯ ಎಲ್ಲೆಂದರಲ್ಲಿ ಹರಿದು ಹಳ್ಳ, ಕೊಳ್ಳ, ನದಿ, ಸಾಗರಗಳನ್ನು ಸೇರಿ ಮಾಲಿನ್ಯವನ್ನು ಉಂಟುಮಾಡತೊಡಗಿತು.

ಪರಿಸರ ಮಾಲಿನ್ಯ ಅತಿಯಾದಾಗ ಈ ಸೈನೈಡ್‌ನ ಹೊಡೆತವನ್ನು ತಾಳಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆ ಬಂತು. ವಿಜ್ಞಾನಿಗಳು ಉತ್ತರವನ್ನೂ ದೊರಕಿಸಿಕೊಟ್ಟರು. ಇಂದು ಆ ಸೈನೈಡನ್ನೇ ತಿಂದು ಜೀರ್ಣಿಸಿಕೊಂಡು ಕೆಲವೇ ಗಂಟೆಗಳಲ್ಲಿ ಜಲವನ್ನು ಶುದ್ಧೀಕರಿಸಬಲ್ಲದು ಒಂದು ವಿಧದ ಬ್ಯಾಕ್ಟೀರಿಯಾ. 'ಬಯೋರೆಮೆಡಿಯೇಷನ್' ಎಂಬ ಪದ್ಧತಿಯನ್ನಳವಡಿಸಿಕೊಂಡು ಅಮೆರಿಕದ ಸುಮಾರು ೫೦ ಶುದ್ಧೀಕರಣ ಕಂಪೆನಿಗಳು ಅಲ್ಲಿನ ಜಲಮಾರ್ಗಗಳನ್ನು ಶುದ್ಧೀಕರಿಸಿವೆ. ಇಂದು ಮೀನುಗಾರರು ಈ ನದೀ ಕೊಳ್ಳಗಳಿಂದ ಆರೋಗ್ಯವಾದ ಮೀನುಗಳನ್ನು ಹಿಡಿಯಲಾರಂಭಿಸಿದ್ದಾರೆ. ಅವುಗಳನ್ನು ತಿಂದರೆ ಸೈನೈಡ್ ವಿಷ ಶರೀರವನ್ನು ಸೇರುವುದೆಂಬ ಭಯ ಈಗಿಲ್ಲ.




"ಈ ಹೊಸ ಕಂಪ್ಯೂಟರ್ ಬರಿ ನೆರಳು ಬಿದ್ದರೆ ಸಾಕು, ನಿಮ್ಮ ಹಿಂದಿನ ಜೀವನ ಚರಿತ್ರೆಯ ವಿವರಗಳನ್ನೆಲ್ಲಾ ಎರಡು ನಿಮಿಷದಲ್ಲಿ ಕೊಟ್ಟಿಡುತ್ತೆ ಸಾರ್."

ಸೂಕ್ಷ್ಮಾಣು ವಿಜ್ಞಾನಿಗಳೂ ಈಗ ಒಂದು ರೀತಿಯಲ್ಲಿ ಶಿಕ್ಷಕರಾಗಿದ್ದಾರೆ. ಅವರು ತಮ್ಮ ತರಗತಿಗಳ ಮೂಲಕ ಈ ಸೂಕ್ಷ್ಮಾಣುಗಳನ್ನು ತಮ್ಮ ಇಷ್ಟಕ್ಕೆ ಬಂದಹಾಗೆ ತರಬೇತುಗೊಳಿಸಿ ಪರಿಸರವನ್ನು ಶುದ್ಧ ಗೊಳಿಸುವುದರಲ್ಲಿ ತೊಡಗಿದ್ದಾರೆ.

ಇವುಗಳ ಪೈಕಿ ಕೆಲವು ಸೂಕ್ಷ್ಮಾಣುಗಳು ಕಾರ್ಖಾನೆಯ ನೌಕರರಾಗಿಯೂ ದುಡಿಯಲಾರಂಭಿಸಿವೆ. ಔಷಧಿಗಳು, ಕ್ರಿಮಿನಾಶಕಗಳು, ದ್ರಾವಕಗಳು, ಪ್ಲಾಸ್ಟಿಕ್ ಇತ್ಯಾದಿಗಳ ತಯಾರಿಕೆಯಲ್ಲಿ, ಬಂಗಾರದಿಂದ ತಾಮ್ರವನ್ನು ಬೇರ್ಪಡಿಸುವಂತಹ ಗಣಿಕಾರ್ಯದಲ್ಲಿ (ಮೊದಲಿನ ಹಾಗೆ ಸೈನೈಡ್ ಉಪಯೋಗಿಸಬೇಕಿಲ್ಲ) ಸ್ಕೀಂಯಿಗ್ (Skiing) ವಿಹಾರಗಳಲ್ಲಿ, ಹೇರಳವಾಗಿ ಬರ್ಫವನ್ನು ತಯಾರಿಸಲು ಹೀಗೆಯೆ ಇನ್ನೂ ಅನೇಕ ವಿಧಗಳಲ್ಲಿ ಅವುಗಳನ್ನು ದುಡಿಸಿಕೊಳ್ಳಲಾಗುತ್ತಿದೆ. ಸೂಕ್ಷ್ಮಾಣುಗಳ ಸಾಹಸಗಾಥೆ ಇಲ್ಲಿಗೇ ಮುಗಿಯಲಿಲ್ಲ, ಕೆಲವು ಜಾತಿಯ ಸೂಕ್ಷ್ಮಾಣುಗಳು ತೈಲಗಳನ್ನು ಪುನರುಜ್ಜೀವಿಸುವುದರಲ್ಲಿ ತೊಡಗಿದ್ದರೆ ಮತ್ತೆ ಕೆಲವು ಸೂಕ್ಷ್ಮಾಣುಗಳು ಜೈವಿಕ ತಂತ್ರಜ್ಞಾನದ ವಿಭಾಗದಲ್ಲಿ ಅವಶ್ಯಕವಾದ DNAಗಳನ್ನು ಬೇರ್ಪಡಿಸಲು ಬೇಕಾದ ಕಿಣ್ವಗಳನ್ನು ತಯಾರಿಸುತ್ತವೆ. ಇನ್ನು ಕೆಲವು ಮದ್ಯದ ತಯಾರಿಕೆಯಲ್ಲಿ ಶರ್ಕರ ಪಿಷ್ಟಗಳನ್ನು ಹಾಗೂ ಬ್ರೆಡ್, ಬಿಯರ್, ಚೀಸ್, ಮೊಸರು, ವಿನೆಗರ್, ವೈನ್‌ಗಳಾಗಿ ಪರಿವರ್ತಿಸುವ ಕಾರ್ಯದಲ್ಲಿ ತೊಡಗಿವೆ.

ಅಂದಹಾಗೆ ಕೆಲವು ಸೂಕ್ಷ್ಮಾಣುಗಳು ಅನಾದಿಕಾಲದಿಂದ ಮಾನವಕುಲದ ಶತ್ರುಗಳು; ಕ್ಷಯ, ಕಾಲರಾ ಮತ್ತು ಇತರ ಭಯಂಕರ ರೋಗಗಳ ವಾಹಕಗಳು. ಆದರೆ ಸುದೈವದಿಂದ ಈ ರೀತಿಯ ರೋಗಾಣು ಸೂಕ್ಷ್ಮಾಣುಗಳು ಪರಿಸರದಲ್ಲಿ ಹೆಚ್ಚಾಗಿಲ್ಲ. ಬಹಳವೆಂದರೆ ಒಂದು ಸಾವಿರದಲ್ಲಿ ಒಂದು ಮಾತ್ರ ರೋಗಕಾರಕ ಸೂಕ್ಷ್ಮಾಣುವಾಗಿರಬಹುದಷ್ಟೆ. ಉಳಿದ ಸೂಕ್ಷ್ಮಾಣುಗಳೇ ಇಲ್ಲದಿದ್ದಲ್ಲಿ ಜೀವನವೇ ದುರ್ಭರವಾಗಿರುತ್ತಿತ್ತು. ಅವು ನಮಗೆ ಅವಶ್ಯಕವಾದುದನ್ನು ಉತ್ಪಾದಿಸುತ್ತವೆ ಹಾಗೂ ಅನವಶ್ಯಕವಾದುದನ್ನು ತೊಲಗಿಸುತ್ತವೆ- ಅವೇ ಜೈವಿಕ ತಂತ್ರಜ್ಞಾನದ ನಮ್ಮ ಸೇವಕರು.

ಅಗೋಚರವಾದ ಈ ಸೇವಕರೆಲ್ಲಾ ಏಕಾಣುಕೋಶ ಜೀವಿಗಳು. ನಿಮ್ಮ ತೋಟದ ಒಂದು ಚಮಚೆ ಮಣ್ಣನ್ನು ತೆಗೆದುಕೊಂಡು ಸೂಕ್ಷ್ಮದರ್ಶಕದ ಮೂಲಕ ವೀಕ್ಷಿಸಿದಾಗ ವಿವಿಧ ರೀತಿಯ ಸೂಕ್ಷ್ಮಾಣುಗಳು ಗೋಚರಿಸುತ್ತವೆ. ಬ್ರೆಡ್‌ಅನ್ನು ತಯಾರಿಸುವ ಯೀಸ್ಟ್ ಇವುಗಳ ಪೈಕಿ ಒಂದು. ಪ್ರಾಯಶಃ ನಾವು ತೆಗೆದ ಚಮಚ ಮಣ್ಣಿನಲ್ಲಿ ಹತ್ತುಲಕ್ಷ ಸೂಕ್ಷ್ಮಾಣುಗಳಿದ್ದರೂ ಆಶ್ಚರ್ಯವಿಲ್ಲ.

ಕೂದಲಿನಂತಹ ಎಳೆಗಳಿಂದ ಕೂಡಿದ ಕೋಶಗಳೇ ಬೂಜು. ಸೂಕ್ಷ್ಮದರ್ಶಕದ ಮೂಲಕ ವೀಕ್ಷಿಸುವ ಗಾಜಿನ ತಟ್ಟೆಯಲ್ಲಿ ಸುಮಾರು ಎರಡು ಲಕ್ಷ ಹಿಡಿಸುತ್ತದೆ. ಈ ಬೂಜು ಜೈವಿಕ ಮಾಲಿನ್ಯವನ್ನು ವಿಭಜಿಸುವ ಕಾರ್ಯದಲ್ಲಿ ಅಗ್ರಗಣ್ಯ. ಇಡೀ ಕಾಡಿನ ಮಾಲಿನ್ಯವನ್ನೆಲ್ಲಾ ವಿಭಜಿಸಿ ಪುನಃ ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಶುದ್ಧೀಕೃತವಾದದ್ದನ್ನು ಭೂಮಿಗೇ ಸಮರ್ಪಿಸಿ ಇಡೀ ಕಾಡಿನ ಸಮತೋಲವನ್ನೇ ಕಾಯುತ್ತದೆ.

ಮೇಲೆ ವಿವರಿಸಿದ್ದನ್ನು ಹೊರತುಪಡಿಸಿ ಉಳಿದುವೆಲ್ಲಾ ಬ್ಯಾಕ್ಟೀರಿಯಗಳು. ಪೃಥ್ವಿಯಲ್ಲಿಯೆ ಅತ್ಯಂತ ಪುರಾತನ ಜೀವಿಗಳಾದ ಇವು (ಹಿಂದಿನ ಎರಡು ನೂರು ಕೋಟಿ ವರ್ಷಗಳ ಕಾಲ ಭೂಮಿಯ ಮೇಲೆ ಜೀವಿಸಿದ್ದ ಏಕೈಕ ಜೀವಿಗಳು) ಅತ್ಯಂತ ಸರಳ ವಿನ್ಯಾಸದಿಂದ ಕೂಡಿವೆ. ಇತರ ಸೂಕ್ಷ್ಮಾಣುಗಳಲ್ಲಿರುವ ಕೋಶಕೇಂದ್ರ (cell nucleus) ಇವುಗಳಲ್ಲಿಲ್ಲ. ಹೆಚ್ಚಿನವು ಒಂದನ್ನೊಂದು ಬೆರೆತು ಕೋಶ ವಿಭಜನೆಯ ಮೂಲಕ ಪುನರುತ್ಪಾದನೆಗೊಳ್ಳುತ್ತವೆ. ಅತ್ಯಂತ ಹೆಚ್ಚಿನ ವೈವಿಧ್ಯ ಮತ್ತು ನೈಪುಣ್ಯವನ್ನು ಪಡೆದಿರುವ ಇವು ಅತ್ಯಂತ ಉಪಯೋಗಕರವೂ ಹೌದು, ಕೆಲವು ಅತ್ಯಂತ ಮಾರಕವೂ ಹೌದು.

ಈ ಸೂಕ್ಷ್ಮಾಣುಗಳು ಬೃಹತ್ ಸಂಖ್ಯೆಯಲ್ಲಿ ನಮ್ಮ ದೇಹವನ್ನೇ ಮನೆಯಾಗಿಸಿಕೊಂಡಿವೆ. ನೀವು ಜನ್ಮ ತಾಳಿದ ಕ್ಷಣದಲ್ಲಿ ನಿಮ್ಮ ದೇಹದಲ್ಲಿ ಕೇವಲ ಒಂದೇ ಒಂದು ಬ್ಯಾಕ್ಟೀರಿಯವೂ ಇರಲಿಲ್ಲ. ಆದರೆ ನಂತರದ ಕೆಲವೇ ಗಂಟೆಗಳಲ್ಲಿ ಗಾಳಿಯ ಮೂಲಕ ನಿಮ್ಮ ಜನನಕ್ಕೆ ಸಹಾಯನೀಡಿದ

ವೈದ್ಯರ ಹಾಗೂ ದಾದಿಯ ಮೂಲಕ, ಅಲ್ಲದೆ ನಿಮ್ಮ ತಾಯಿಯ ಹಾಲಿನ ಮೂಲಕ ನಿಮ್ಮ ಬೆಚ್ಚನೆಯ ದೇಹದಲ್ಲಿ ಅವು ವಸಾಹತು ಹೂಡಿದವು. ಇಂದು ನಿಮ್ಮ ದೇಹದಲ್ಲಿ ಒಟ್ಟು ಕಾಲು ಪೌಂಡಿನಷ್ಟು ತೂಕದ ಬ್ಯಾಕ್ಟೀರಿಯಗಳಿವೆ. ಕೋಟ್ಯಂತರ ಸಂಖ್ಯೆಯಲ್ಲಿ ನಿಮ್ಮ ಆಹಾರವನ್ನು ಜೀರ್ಣಿಸಲು ಸಹಾಯಮಾಡುತ್ತವೆ.

ನಮ್ಮ ಭೌತದ್ರವ್ಯಗಳನ್ನು ವಿಘಟಿಸಬಲ್ಲ ಅವುಗಳ ಈ ಅನುಪಮ ಸಾಮರ್ಥ್ಯವೇ ಇಂದು ಮಾನವ ಕುಲ ಸೂಕ್ಷ್ಮಾಣುಗಳನ್ನು ಹೊಸದೃಷ್ಟಿಯಿಂದ ನೋಡಲು ಕಾರಣವಾಗಿದೆ.

ಅವು ಪ್ರಕೃತಿಯಲ್ಲಿನ ಘಟಕಗಳನ್ನು ಪುನಶ್ಚಕ್ರೀಕರಿಸಬಲ್ಲ ದೂತರು. ಇವುಗಳನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಮುಂಬರುವ ಇಡೀ ಭೂಮಂಡಲವನ್ನೇ ಹಿಂದೆಂದೂ ಇಲ್ಲದಿದ್ದಷ್ಟು ನಿರ್ಮಲವಾಗಿ ಇಡಬಹುದು.

ಹಾಗಾದರೆ ಇವುಗಳನ್ನು ಪಡೆಯುವುದು ಹೇಗೆ? ಇವು ನಮ್ಮ ಬಳಿ ಈಗಾಗಲೆ ಇವೆ. ಒಂದರ ಉಚ್ಛಿಷ್ಟವನ್ನು ಮತ್ತೊಂದು ತಿಂದು ಬದುಕುವ ಸಾವಿರಾರು ಜಾತಿಯ ಸೂಕ್ಷ್ಮಾಣುಗಳಿವೆ. ಈಗ ನಮ್ಮ ವಿಜ್ಞಾನಿಗಳು ಮಾಡಬೇಕಾದ್ದೇನೆಂದರೆ ಒಂದೊಂದು ಕಾರ್ಯಕ್ಕೂ ಸೂಕ್ತವಾದ ಸೂಕ್ಷ್ಮಾಣುಗಳನ್ನಾರಿಸಿ ಪ್ರೋತ್ಸಾಹ ನೀಡುವುದೇ ಆಗಿದೆ. ಸಾರಜನಕ ಸಂಯುಕ್ತಗಳು, ರಂಜಕ ಹಾಗೂ ಆಮ್ಲಜನಕಗಳೇ ಅವುಗಳ ಆಹಾರ. ಈ 'ತಿಂಡಿತಿನಿಸು'ಗಳನ್ನು ಯಥೇಚ್ಛವಾಗಿ ನೀಡಿ, ತೃಪ್ತಿಗೊಳಿಸಿ ನಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳಬೇಕು.

ಹೀಗೆ ಮಾನವನ ಶತ್ರುವನ್ನೇ ಮಿತ್ರನನ್ನಾಗಿಸಿಕೊಂಡ ತಂತ್ರಜ್ಞಾನಕ್ಕೆ ಪರಿಮಿತಿಗಳೇ ಇದ್ದಂತೆ ಕಾಣುವುದಿಲ್ಲ. ಈ ನೂತನ ತಂತ್ರಜ್ಞಾನದಿಂದ ಹೊಸ ಪ್ರಪಂಚವನ್ನೇ ಸೃಷ್ಟಿಸಹೊರಟಿರುವ ನಮ್ಮ ವಿಜ್ಞಾನಿಗಳು ಸಫಲರಾಗಬಲ್ಲರೆ ಅಥವಾ ಎಡವಿ ಬೀಳುವರೆ ಎಂಬುದನ್ನು ಕಾಯ್ದು ನೋಡೋಣ. ಸಮಯ ಮಾತ್ರ ಇದಕ್ಕೆ ಉತ್ತರ ನೀಡಬಲ್ಲದು. ●

## ದೇನೇವಾಲಾ ಜಬ್ ಭೀ ದೇತಾ

**ಹಿಂ**ದಿಯಲ್ಲಿ ಒಂದು ನಾಣ್ಣುಡಿ ಪ್ರಚಲಿತವಾಗಿದೆ. "ದೇನೆವಾಲಾ ಜಭ್ ಭೀ ದೇತಾ -ಪೂರಾ ಛಪ್ಪಡ್ ಫಾಡ್ ಕೇ ದೇತಾ."(ಅಂದರೆ ಕೊಡುವವ -ದೇವರು) ಕೊಡತೊಡಗಿದರೆ ಮಾಳಿಗೆ ಒಡೆದು ಕೊಡತೊಡಗುತ್ತಾನೆ ಎರಡೂ ಕೈಗಳಿಂದ.

ಬೀದಿ ಬೀದಿ ಅಲೆಯುತ್ತಾ ಕೂಲಿಮಾಡುತ್ತಿದ್ದ ಕಾರ್ಮಿಕನೊಬ್ಬ ಇಂದು ಅಂತಾರಾಷ್ಟ್ರೀಯ ಖ್ಯಾತಿಯ ಕಲಾವಿದನಾದದ್ದು ಈ ರೀತಿ ದೇವರು ಕೊಟ್ಟದ್ದಕ್ಕೇ ಎಂಬ ರೀತಿಯ ಸಂಗತಿ ಇಲ್ಲಿದೆ.

ಮೂವತ್ತು ವರ್ಷಗಳ ಜಂಗ್ಗಾನ್‌ಸಿಂಗ್ ಶ್ಯಾಮ್ ರಸ್ತೆ ನಿರ್ಮಾಣದ ಕೆಲಸದಲ್ಲಿ ಡಾಂಬರ್, ಮರಳು ಹೊರುವ ಕೆಲಸ ಮಾಡುತ್ತಿದ್ದ. ವಿರಾಮ ಕಾಲದಲ್ಲಾತ ಭಿತ್ತಿಚಿತ್ರಗಳನ್ನು ಬಿಡಿಸುವುದನ್ನು ಹವ್ಯಾಸವಾಗಿ ರೂಢಿಸಿಕೊಂಡಿದ್ದ. ಆರುವರ್ಷಗಳ ಹಿಂದೆ ಮಧ್ಯಪ್ರದೇಶದ ಮಾಂಡ್ಲಾ ಜಿಲ್ಲೆಗೆ ಭೇಟಿನೀಡಿದ್ದ ಭೋಪಾಲದ 'ಭಾರತ ಭವನ'ದ ಖ್ಯಾತ ಕಲಾವಿದ ಶ್ರೀ ಜೆ. ಸ್ವಾಮಿನಾಥನ್ ಅಲ್ಲಿನ ಗ್ರಾಮವೊಂದರಲ್ಲಿ ಸಂಚರಿಸುತ್ತಿದ್ದಾಗ ಶ್ಯಾಮ್ ಬಿಡಿಸಿದ ಭಿತ್ತಿಚಿತ್ರಗಳನ್ನು ನೋಡಿದರು. ಅವುಗಳಿಂದ ಆಕರ್ಷಿತರಾದ ಅವರು ವಿಳಾಸವನ್ನು ಪತ್ತೆಹಚ್ಚಿ ಶ್ಯಾಮ್‌ನನ್ನು ಭೇಟಿಯಾದರು. ಅಲ್ಲಿಗೆ ಮುಗಿಯಿತು ಜಂಗಾನ್‌ಸಿಂಗ್ ಶ್ಯಾಮ್‌ನ ಬಡತನದ ಬವಣೆ. ಸ್ವಾಮಿನಾಥನ್ ಶ್ಯಾಮ್‌ನನ್ನು ಭೋಪಾಲಕ್ಕೆ ಕರೆತಂದು ಎರಡು ಸಾವಿರದ ಸಂಬಳದ ಮೇಲೆ . ಭಾರತಭವನದಲ್ಲಿ ಕಲಾವಿದನನ್ನಾಗಿ ನಿಯಮಿಸಿದರು. ಅನಂತರ ಶ್ಯಾಮ್ ಹಂತಹಂತವಾಗಿ ಸಾಧನೆಯ ಮೆಟ್ಟಿಲೇರುತ್ತಾ ಇಂದು ಜಗದ್ವಿಖ್ಯಾತ ಕಲಾವಿದರಲ್ಲಿ ಒಬ್ಬನಾಗಿ ಪರಿಗಣಿಸಲ್ಪಡುತ್ತಿದ್ದಾನೆ.

ವಾಸುದೇವ ರಾ. ಕಲಘಟಗಿ



ಕಾಲೇಜು ಕಟ್ಟಿದ ಅವರು ವಿಶ್ವವಿದ್ಯಾಲಯದ ಕನಸು ಕಂಡರು

# ಡಾ. ಅಳಗಪ್ಪ ಚೆಟ್ಟಿಯಾರ್

ಬದುಕಿದ್ದು ಕೇವಲ ನಲವತ್ತೆಂಟು ವರ್ಷ; ಆದರೆ ಗಳಿಸಿದ್ದು ಕೋಟ್ಯಂತರ. ಗಳಿಸಿದ ಹಣವನ್ನೆಲ್ಲಾ ವಿದ್ಯಾ ಸಂಸ್ಥೆಗಳನ್ನು ಕಟ್ಟಲು, ಬೆಳೆಸಲು ಖರ್ಚುಮಾಡಿದ ವಿದ್ಯಾ ಪಕ್ಷಪಾತಿ. ಅಳಗಪ್ಪ ಚೆಟ್ಟಿಯಾರರು ಅವರ ಕೋಮಿಗೇ ಒಂದು ರೀತಿಯಲ್ಲಿ ಅಪವಾದ. ನಾಟ್ಟುಕೋಟೆ ಚೆಟ್ಟಿಯಾರರ ಮುಖ್ಯ ಕಸುಬು ಲೇವಾದೇವಿ, ವ್ಯಾಪಾರ. ಅವರಲ್ಲಿ ಉನ್ನತ ವಿದ್ಯಾಭ್ಯಾಸ ಮಾಡುವವರು ಬಹಳ ಕಡಿಮೆ. ಕೆಲವರು ಶತಮಾನದ ಆದಿ ಭಾಗದಲ್ಲಿ ಮಲೇಷಿಯಾ, ಸಿಂಗಪುರ, ಬರ್ಮಾಗಳಿಗೆ ಹೋಗಿ ಲೇವಾದೇವಿ ನಡೆಸಿ ಶ್ರೀಮಂತರಾಗಿ ಭಾರತಕ್ಕೆ ವಾಪಸಾಗಿದ್ದಾರೆ.

ಕೊಟ್ಟೈಯೂರ್‌ನಲ್ಲಿ ೬-೪-೧೯೦೯ ರಲ್ಲಿ ರಾಮನಾಥನ್ ಚೆಟ್ಟಿಯಾರ್ ಮತ್ತು ಉಮಾಯಳ್ ದಂಪತಿಗೆ ಹುಟ್ಟಿದ ಅಳಗಪ್ಪ ತಮ್ಮ ಶಾಲಾ ಶಿಕ್ಷಣವನ್ನು ಕಾರೈಕುಡಿಯಲ್ಲಿ ಮುಗಿಸಿದರು. ನಂತರ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯ ತೆಗೆದುಕೊಂಡು ೧೯೩೦ ರಲ್ಲಿ ಎಂ.ಎ. ಮಾಡಿದರು. ಆಗ ಅವರಿಗೆ ಕೇವಲ ೨೧ ವರ್ಷ. ಅಂದ ಹಾಗೆ ಚೆಟ್ಟಿಯಾರ್ ಮತ್ತು ಮಾಜಿ ಕೇಂದ್ರ ಮಂತ್ರಿ ಮತ್ತು ಮಹಾರಾಷ್ಟ್ರದ ಮಾಜಿ ಗವರ್ನರ್ ಸಿ. ಸುಬ್ರಹ್ಮಣ್ಯಂ ಕಾಲೇಜಿನಲ್ಲಿ ಸಹಪಾಠಿಗಳು. ಆದರೆ ಸುಬ್ರಹ್ಮಣ್ಯಂ ವ್ಯಾಸಂಗಕ್ಕೆ ವಿಜ್ಞಾನ ತೆಗೆದುಕೊಂಡಿದ್ದರೆ, ಚೆಟ್ಟಿಯಾರರು ಸಾಹಿತ್ಯ ತೆಗೆದುಕೊಂಡಿದ್ದರು. ನಂತರ ಚೆಟ್ಟಿಯಾರ್ ಲಂಡನ್ನಿಗೆ ಹೋದರು; ಚಾರ್ಟರ್ಡ್ ಬ್ಯಾಂಕಿನಲ್ಲಿ ಟ್ರೇನಿಯಾಗಿ ಸೇರಿದರು. ಈ ವಿದೇಶಿ ಬ್ಯಾಂಕಿಗೆ ತರಬೇತುಗಾರನಾಗಿ

ಸೇರಿದ ಮೊದಲ ಭಾರತೀಯ ಚೆಟ್ಟಿಯಾರ್. ಮುಂದೆ ಅವರು ಬ್ಯಾಂಕಿನ ನಿರ್ದೇಶಕರಲ್ಲಿ ಒಬ್ಬರಾದರು. ಲಂಡನ್ನಿನಲ್ಲಿರುವಾಗ ಬಾರ್-ಎಟ್-ಲಾ ಮುಗಿಸಿದರು. ಚೆಟ್ಟಿಯಾರರಿಗೆ ವಿಮಾನ ನಡೆಸುವುದರಲ್ಲೂ ಆಸಕ್ತಿ ಇತ್ತು. ತರಬೇತಿ ಪಡೆದ ವಿಮಾನ ಚಾಲಕನ ಸರ್ಟಿಫಿಕೇಟನ್ನೂ ಅವರು ಲಂಡನ್ನಿನಲ್ಲಿದ್ದಾಗ ಪಡೆದಿದ್ದರು.

ಭಾರತಕ್ಕೆ ವಾಪಸಾದ ಮೇಲೆ ಅವರು ವಕೀಲಿ ವೃತ್ತಿ ನಡೆಸಲಿಲ್ಲ. ಕುಲ ಕಸುಬು ಲೇವಾದೇವಿ ಮಾಡಲಿಲ್ಲ. ಬದಲು ಕೈಗಾರಿಕೆಗಳನ್ನು ಸ್ಥಾಪಿಸಿದರು. ಮೂವತ್ತರ ದಶಕ; ಹಣದ ಮುಗ್ಗಟ್ಟು. ಸಾಮಾನು ಸರಂಜಾಮು ಹೇರಳ. ಆದರೆ ಯಾರಲ್ಲೂ ಹಣವಿಲ್ಲ. ಆಗ ಡಾ. ಷಣ್ಮುಗಂ ಚೆಟ್ಟಿ ಕೊಚ್ಚಿನ್‌ನ ದಿವಾನರಾಗಿದ್ದರು. ತಮ್ಮ ರಾಜ್ಯ ಅಭಿವೃದ್ಧಿ ಹೊಂದಲು ಕೈಗಾರಿಕೆಗಳು ಸ್ಥಾಪನೆಯಾಗಬೇಕು ಎಂದು ನಂಬಿದ್ದ ಅವರು ಆಳಗಪ್ಪ ಚೆಟ್ಟಿಯಾರರನ್ನು ತಮ್ಮ ರಾಜ್ಯದಲ್ಲಿ ಹತ್ತಿ ಗಿರಣಿ ಸ್ಥಾಪಿಸಲು ಆಹ್ವಾನಿಸಿದರು. ಚೆಟ್ಟಿಯಾರರ ಹತ್ತಿ ಗಿರಣಿ ಸ್ಥಾಪನೆಯಾಯಿತು. ನಂತರ ಇನ್ನೊಂದು ಟ್ರಾವೆಂಕೂರ್‌ನಲ್ಲಿ. ಮಲಬಾರ್ ಡಿಸ್ಟ್ರಿಕ್ಟಿನ ಕಣ್ಣಾನೂರಿನಲ್ಲಿ ಅವರು ಕೈಮಗ್ಗ ನೇಯ್ಗೆ ಕಾರ್ಖಾನೆ ತೆರೆದರು. ನಿರುದ್ಯೋಗಿಗಳಿಗೆ ಕೆಲಸ, ಮಾಲೀಕರಿಗೂ ಲಾಭ. ಆಳಗಪ್ಪ ಚೆಟ್ಟಿಯಾರರು 'ಸ್ಟಾಕ್ ಮತ್ತು ಷೇರ್' ದಳ್ಳಾಳಿಯೂ ಆಗಿದ್ದರು. ಯುದ್ಧದ ಸಮಯ; ವಸ್ತುಗಳ ಬೇಡಿಕೆ ಜಾಸ್ತಿಯಾಯಿತು. ಚೆಟ್ಟಿಯಾರರ ಕಾರ್ಖಾನೆಗಳು ಹಗಲೂ ಇರುಳೂ ಕೆಲಸ ಮಾಡಿದವು. ಅಗಾಧ ಪ್ರಮಾಣದಲ್ಲಿ ಲಾಭವಾಯಿತು.

ಆಳಗಪ್ಪ ಚೆಟ್ಟಿಯಾರ್ ಲೋಭಿಯಲ್ಲ. ಸಂಪಾದಿಸಿದ ಹಣದ ಸದ್ವಿನಿಯೋಗವಾಗಬೇಕು. ವಿದ್ಯಾವಂತ ಹಣ ಗಳಿಸಿ ವ್ಯಯ ಮಾಡುವುದಕ್ಕೂ ಅವಿದ್ಯಾವಂತ ಗಳಿಸಿದ ಹಣ ವ್ಯಯ ಮಾಡುವುದಕ್ಕೂ ತುಂಬ ವ್ಯತ್ಯಾಸವಿದೆ ಎಂದು ಅವರು ತೋರಿಸಿದರು. ಆಳಗಪ್ಪ ನಗರದ ತಮ್ಮ ಮಿಲ್‌ಗೆ ಸೇರಿದ ಆಸ್ಪತ್ರೆಯ ಹೆರಿಗೆ ವಾರ್ಡಿಗೆ ಒಂದು ಲಕ್ಷ ರೂಪಾಯಿ, ಎರ್ನಾಕುಲಂನ ಮಹಾರಾಜ ಕಾಲೇಜಿಗೆ ನಾಡು ಔಷಧಿ ಶೋಧನೆ ವಿಭಾಗಕ್ಕೆ ಎಂಭತ್ತು ಸಾವಿರ ರೂಪಾಯಿ, ಕೊಚ್ಚಿನ್ ರಾಜ್ಯದ ಶಾಲಾ ಮಕ್ಕಳ ಮಧ್ಯಾಹ್ನದ ಊಟದ ಏರ್ಪಾಡಿಗೆ ಒಂದೂವರೆ ಲಕ್ಷ, ಟ್ರಾವೆಂಕೂರ್ ವಿಶ್ವವಿದ್ಯಾಲಯದಲ್ಲಿ ತಮಿಳು ವಿಭಾಗ ತೆರೆಯಲು ಹತ್ತು ಸಾವಿರ ರೂಪಾಯಿ, ಮದ್ರಾಸಿನ ಠಕ್ಕರ್ ಬಾಪಾ ವಿದ್ಯಾಲಯಕ್ಕೆ ಒಂದು ಲಕ್ಷ, ದೆಹಲಿಯ ಸೌತ್ ಇಂಡಿಯನ್ ಎಜುಕೇಶನಲ್ ಸೊಸೈಟಿಗೆ ಇಪ್ಪತ್ತೈದು ಸಾವಿರ, ಮದ್ರಾಸ್ ಸೇವಾ ಸದನಕ್ಕೆ ಎಪ್ಪತ್ತೈದು ಸಾವಿರ, ಸೌತ್ ಇಂಡಿಯನ್ ಚೇಂಬರ್ಸ್ ಮದ್ರಾಸ್ ಜಿಲ್ಲೆಗೆ ಎಪ್ಪತ್ತೈದು ಸಾವಿರ ಅವರು ದಾನ ಮಾಡಿದ್ದಾರೆ. ಮದ್ರಾಸ್ ಮತ್ತು ಅಣ್ಣಾಮಲೈ ವಿಶ್ವವಿದ್ಯಾನಿಲಯಗಳು ಟೆಕ್ನಾಲಜಿ ಕಾಲೇಜುಗಳನ್ನು ತೆರೆಯಲು ಒಂದೊಂದಕ್ಕೂ ಐದು ಲಕ್ಷ ರೂಪಾಯಿಗಳನ್ನು ಚೆಟ್ಟಿಯಾರರು ಕೊಟ್ಟಿದ್ದಾರೆ. ಅವರು ಧನ ಸಹಾಯ ಮಾಡಿದ ಸಂಸ್ಥೆಗಳಿಗೆ ಲೆಕ್ಕವಿಲ್ಲ.

ಚೆಟ್ಟಿಯಾರರು ಸಾಹಿತ್ಯದ ವಿದ್ಯಾರ್ಥಿಯಾದರೂ ವಿಜ್ಞಾನ ಮತ್ತು ತಂತ್ರಜ್ಞಾನದ ಕಡೆಗೇ ಹೆಚ್ಚು ಒಲವು.

---

- ಎಚ್.ಆರ್. ಚಂದ್ರವದನರಾವ್

---

ಕಾರೈಕುಡಿಯಲ್ಲಿ ಎಲೆಕ್ಟ್ರೋ-ಕೆಮಿಕಲ್ ರಿಸರ್ಚ್ ಇನ್ಸ್ಟಿಟ್ಯೂಟ್ ಸ್ಥಾಪನೆಗೆ ಮುನ್ನೂರು ಎಕರೆ ಭೂಮಿ, ಹದಿನೈದು ಲಕ್ಷ ರೂಪಾಯಿಗಳನ್ನು ಅವರು ಕೊಟ್ಟರು. ಸರ್ಕಾರಿ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಸ್ಥಳಾಭಾವದಿಂದ ಸೀಟು ಕೊಡುವುದು ಆಗುತ್ತಿಲ್ಲ ಎಂದು ಮದ್ರಾಸಿನಲ್ಲಿ ವಿ.ವಿ.ನಿಲಯದ ವೈಸ್-ಛಾನ್ಸೆಲರ್ ಡಾ. ಎ. ಲಕ್ಷ್ಮಣಸ್ವಾಮಿ ಮೊದಲಿಯಾರರು ಒಂದು ಸಮಾರಂಭದಲ್ಲಿ ಹೇಳಿದಾಗ ಚೆಟ್ಟಿಯಾರರು ತಾವು ಕಾಲೇಜೊಂದನ್ನು ಸ್ಥಾಪಿಸಲು ಸಿದ್ಧ ಎಂದು ಎದ್ದು ನಿಂತು ಹೇಳಿದರು. ಕಾರೈಕುಡಿಯಲ್ಲಿ ೧೯೪೭ ರಲ್ಲಿ ಕಾಲೇಜು ಪ್ರಾರಂಭವಾಯಿತು. ೧೪೯ ವಿದ್ಯಾರ್ಥಿಗಳು ಸೇರಿದರು. ಎರಡು ಚದರ ಮೈಲು ಜಾಗದಲ್ಲಿ ಈಗ ಅಲ್ಲಿ ಹತ್ತು ವಿದ್ಯಾ ಸಂಸ್ಥೆಗಳಿವೆ. ಕಲಾ ಮತ್ತು ವಿಜ್ಞಾನ ಕಾಲೇಜು, ಉಪಾಧ್ಯಾಯರ ಪ್ರಶಿಕ್ಷಣ ಕಾಲೇಜು, ಎಂಜಿನಿಯರಿಂಗ್ ಕಾಲೇಜು, ಪಾಲಿಟೆಕ್ನಿಕ್, ಫಿಜಿಕಲ್ ಎಜುಕೇಶನ್ ಕಾಲೇಜು, ಹೈಸ್ಕೂಲ್, ಮಾಂಟೆಸ್ಸೋರಿ ಶಾಲೆ, ಶಿಶುವಿಹಾರ,

ಸಂಗೀತ ವಿದ್ಯಾಲಯ. ಇವಕ್ಕೆ ಒಟ್ಟು ೧೨೫ ಲಕ್ಷ ಖರ್ಚಾಗಿದೆ. ಅದರಲ್ಲಿ ಚೆಟ್ಟಿಯಾರರ ಕೊಡುಗೆ ಎಪ್ಪತ್ತೈದು ಲಕ್ಷ.

ಚೆಟ್ಟಿಯಾರ್ ತುಂಬ ವಿಷಯ ತಿಳಿದಿದ್ದರು. ಅವರ ವಿದ್ವತ್ತನ್ನು ಗಮನಿಸಿ ಅಣ್ಣಾಮಲೈ ಮತ್ತು ಮದ್ರಾಸ್ ವಿಶ್ವವಿದ್ಯಾಲಯಗಳು ಅವರಿಗೆ ಡಿ.ಲಿಟ್ ಮತ್ತು ಎಲ್.ಎಲ್.ಡಿ. ಪದವಿಗಳನ್ನು ೧೯೪೩ ಮತ್ತು ೧೯೪೪ ರಲ್ಲಿ ನೀಡಿದವು. ೧೯೪೫ ರಲ್ಲಿ ಅವರಿಗೆ ನೈಟ್‌ಹುಡ್ ಪ್ರಶಸ್ತಿಯನ್ನು ಬ್ರಿಟಿಶ್ ಸರ್ಕಾರ ಕೊಟ್ಟಿತು; ಆದರೆ ಚೆಟ್ಟಿಯಾರ್ ದೇಶಕ್ಕೆ ಸ್ವತಂತ್ರ್ಯ ಬಂದ ನಂತರ ಅದನ್ನು ತ್ಯಜಿಸಿದರು. ಭಾರತ ಸರ್ಕಾರ ಅವರಿಗೆ ೧೯೫೭ ರಲ್ಲಿ ಪದ್ಮಭೂಷಣ ಪದವಿ ನೀಡಿತು. ೧೯೪೪ ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಗೌರವ ಎಲ್‌ಎಲ್‌ಡಿ ಪದವಿ ಪಡೆದ ಚೆಟ್ಟಿಯಾರ್ ೧೯೫೪ ರಲ್ಲಿ ಆ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಭಾಷಣ ಮಾಡಿದರು!

ದುರದೃಷ್ಟ! ಅಳಗಪ್ಪ ಚೆಟ್ಟಿಯಾರರಿಗೆ ಕುಷ್ಠ ರೋಗ ತಗುಲಿತು. ೧೯೩೧ ರಲ್ಲಿ ಅವರು ಲಂಡನ್ನಿನಲ್ಲಿದ್ದಾಗಲೇ ರೋಗದ ಚಿಹ್ನೆಗಳು ಕಾಣಿಸಿಕೊಂಡಿದ್ದವು. ದಿನೇ ದಿನೇ ರೋಗ ಜಾಸ್ತಿಯಾಗಿ ಅವರು ನಿಶ್ಶಕ್ತ, ಅಂಗಹೀನರಾದರು. ದೆಹಲಿಗೆ ಹೋದಾಗ ಬಿದ್ದು ಕಾಲುಗಳನ್ನು ಮುರಿದುಕೊಂಡರು. ಕುಷ್ಠ ಮೂಳೆಗೂ ತಗುಲಿತ್ತು. ವೈದ್ಯರ ತಂಡ ಅವರಿಗೆ ಔಷಧೋಪಚಾರವನ್ನು ಮನೆಯಲ್ಲೇ ನಡೆಸಿತು. ರಾಜಾಜಿ, ಸುಬ್ರಹ್ಮಣ್ಯಂ, ಪಂಡಿತ್ ನೆಹರೂ, ಮಹಾರಾಜ ಜಯಚಾಮರಾಜೇಂದ್ರ ಒಡೆಯರ್, ಡಾ. ರಾಜೇಂದ್ರಪ್ರಸಾದ್, ಗೌರ್ನರ್ ಶ್ರೀ. ಪ್ರಕಾಶ್ ಮುಂತಾದವರು ಅವರ ಮನೆಗೆ ಬಂದು ನೋಡಿಕೊಂಡು ಹೋದರು. ಕಾರೈಕುಡಿ ವಿದ್ಯಾಸಂಸ್ಥೆಗಳು ಒಂದು ವಿಶ್ವ ವಿದ್ಯಾಲಯವಾಗಬೇಕು ಎಂಬ ಆಸೆಯನ್ನು ಅವರು ಪ್ರಧಾನಿ ನೆಹರೂರವರ ಬಳಿ ಆಗ ಹೇಳಿದ್ದರು. ಅವರ ಕನಸು ಅವರು ಸತ್ತ ಹತ್ತು ವರ್ಷಗಳ ಮೇಲೆ ನನಸಾಯಿತು.

ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಅವರು ಭಾರತಕ್ಕೆ ೧೯೩೩ ರಲ್ಲಿ ಹಿಂತಿರುಗಿದಾಗ ಚೆಟ್ಟಿಯಾರರಿಗೆ ೨೪ ವರ್ಷ. ಅವರು ಅಪ್ರಾಪ್ತ ವಯಸ್ಸಿನಲ್ಲಿ ದಿವಂಗತರಾದಾಗ (೫-೪-೧೯೫೭) ಅವರಿಗೆ ಕೇವಲ ನಲವತ್ತೆಂಟು ವರ್ಷ. ವಿದ್ಯಾರ್ಥಿ ಜೀವನ ಬಿಟ್ಟು ಉಳಿದ ಇಪ್ಪತ್ತು ನಾಲ್ಕು ವರ್ಷಗಳಲ್ಲಿ ಚೆಟ್ಟಿಯಾರರು ಗಳಿಸಿದ್ದು, ಸಮಾಜ ಸೇವೆ ಮಾಡಿದ್ದು ಅಪಾರ. ಅವರಿಗೆ ಅಂದಿನ ನಾಯಕರುಗಳೆಲ್ಲಾ ಚಿರಪರಿಚಿತರು. ಹೆಸರಾಂತ ರಾಜಕಾರಣಿಗಳಾದ ಡಾ. ರಾಜೇಂದ್ರಪ್ರಸಾದ್, ಪಂಡಿತ್ ನೆಹರೂ, ರಾಜಗೋಪಾಲಾಚಾರಿ, ಸಿ.ಸುಬ್ರಹ್ಮಣ್ಯಂ, ಕಾಮರಾಜ್, ಪಟೇಲ್ ಮುಂತಾದವರು, ತಮ್ಮ ವಿದ್ವತ್ತಿನಿಂದ ಕೀರ್ತಿ ಗಳಿಸಿದ್ದ ಡಾ. ಎಸ್. ರಾಧಾಕೃಷ್ಣನ್, ಡಾ. ಲಕ್ಷ್ಮಣಸ್ವಾಮಿ ಮೊದಲಿಯಾರ್, ಡಾ. ರಾಮಸ್ವಾಮಿ ಅಯ್ಯರ್, ಸರ್ ಸಿ.ವಿ. ರಾಮನ್, ಸಿ.ಡಿ. ದೇಶಮುಖ್, ಸರ್ ಎಂ.ವಿಶ್ವೇಶ್ವರಯ್ಯ ಮುಂತಾದವರೊಡನೆ ಅಳಗಪ್ಪ ಚೆಟ್ಟಿಯಾರ್ ಸಂಪರ್ಕವಿಟ್ಟುಕೊಂಡಿದ್ದರು. ಮದ್ರಾಸಿನ ವೇಪರಿಯಲ್ಲಿರುವ ಅವರ ಗೃಹಕ್ಕೆ (ಕೃಷ್ಣ ವಿಲಾಸ್) ಈ ಮಹನೀಯರು ಹಲವು ವೇಳೆ ಭೇಟಿ ನೀಡಿದ್ದಾರೆ.

ಚೆಟ್ಟಿಯಾರ್ ಕೋಮಿನಲ್ಲಿ ವ್ಯಕ್ತಿ ತನ್ನ ಸ್ವಂತ ಆಸ್ತಿಯನ್ನು ಹೇಗೆ ವಿನಿಯೋಗಿಸಿದರೂ ಯಾರೂ ಏನೂ ಕೇಳುವಂತಿಲ್ಲ. ಆದರೆ ಮನೆ ಮತ್ತು ಮನೆಯಲ್ಲಿರುವ ಬೆಳ್ಳಿ, ಚಿನ್ನದ ಆಭರಣಗಳನ್ನು ಮಕ್ಕಳಿಗೇ ಕೊಡಬೇಕು. ಅಳಗಪ್ಪ ಚೆಟ್ಟಿಯಾರರಿಗೆ ಇರುವವರು ಒಬ್ಬಳೇ ಮಗಳು-ಉಮಯಳ. ಅವಳ ಮದುವೆಗೆ ಅಂದಿನ ಕಾಲದಲ್ಲಿ ಚೆಟ್ಟಿಯಾರ್ ಎರಡು ಕೋಟಿ ರೂಪಾಯಿ ಖರ್ಚು ಮಾಡಿದರು. ಜನ ಅಂತಹ ವೈಭವಯುಕ್ತ ವಿವಾಹ ಮಹೋತ್ಸವವನ್ನು ಹಿಂದೆ ನೋಡಿರಲಿಕ್ಕಿಲ್ಲ. ಮನೆ ಮತ್ತು ಒಡವೆಗಳನ್ನು ಮಗಳಿಗೆ ಕೊಟ್ಟು ಉಳಿದೆಲ್ಲವನ್ನೂ ಚೆಟ್ಟಿಯಾರರು ವಿದ್ಯಾ ಸಂಸ್ಥೆಗಳ ಸ್ಥಾಪನೆಗೆ, ಬೆಳವಣಿಗೆಗೆ ಕೊಟ್ಟಿದ್ದಾರೆ. ಅವರು ಸತ್ತಾಗ ಅವರ ಹೆಸರಿನಲ್ಲಿ ಒಂದು ಬಿಡಿಕಾಸೂ ಇರಲಿಲ್ಲ.

ಇದ್ದುದೆಲ್ಲವನ್ನೂ ವಿದ್ಯಾ ಪ್ರಸಾರಕ್ಕೆ ಖರ್ಚು ಮಾಡಿದ ಆದರ್ಶ ಶ್ರೀಮಂತ ಅಳಗಪ್ಪ ಚೆಟ್ಟಿಯಾರ್. ಅವರು ದಿವಂಗತರಾಗಿ ಸುಮಾರು ಮೂವತ್ತೊಂಬತ್ತು ವರ್ಷಗಳಾಗಿವೆ, ಆದರೆ ಅವರ ಹೆಸರು ನಿತ್ಯ ಹಸಿರು. 

# ಅಪಘಾತ



ಆ ದಿನದ ಟಪಾಲಿನಲ್ಲಿ ನೌಕರ ಕಲ್ಯಾಣ ವಿಭಾಗ ದಿಂದ ಬಂದ ಸುತ್ತೋಲೆ ಯಲ್ಲಿ ಸುಂದರನ ಹೆಸರು ದಂಗುಬಡಿಸಿತು!

ಹೋಟೆಲ್ 'ಪುನರ್ಜನ್ಮ'ದಲ್ಲಿ ಊಟ ಮಾಡಿ ತೇಗುತ್ತಾ ಬ್ಯಾಂಕಿನ ಬಾಗಿಲು ತಲುಪಿದೆ. ಮೆಟ್ಟಲೇರುತ್ತಿದ್ದಂತೆ ಒಳಗಿನಿಂದ ಕೇಳಿಬರುತ್ತಿದ್ದ ಗಾನ ನನ್ನನ್ನು ಅಲ್ಲಿಯೇ ನಿಲ್ಲಿಸಿತು. ಒಂದು ನಿಮಿಷ ಆಲಿಸಿ ಮೆಲ್ಲನೆ ಒಳಹೊಕ್ಕೆ. ಕಡತಗಳ ಕೋಣೆ ಯಿಂದ ಮಧುರ ಗಾಯನ ಕೇಳಿಬರುತ್ತಿತ್ತು. "ಮೇರಿ ಕಿಸ್‌ಮತ್ ಮೆ ತೂ... ನಹೀಂ... ಶಾಯದ್... ಕ್ಯೊಂ ತೆರಾ..."

ಆಗ ಬ್ಯಾಂಕಿನಲ್ಲಿದ್ದ ಇನ್ನೊಬ್ಬರೇ ವ್ಯಕ್ತಿಯೆಂದರೆ ಕ್ಲರ್ಕ್ ಕುಮಾರನ್. ಮಿಲಿಟರಿಯಲ್ಲಿದ್ದು ಬಂದ ಅವರು ತಮ್ಮ ಸ್ಥಾನದಲ್ಲಿ ಆಸೀನರಾಗಿ ಖಾತೆ ಪುಸ್ತಕ ಬರೆಯುವುದರಲ್ಲಿಯೇ ಮಗ್ನರಾಗಿದ್ದರು. ಸುತ್ತಮುತ್ತಲೂ ಕಾಡು. ಎದುರು ಹಾದುಹೋ ಗುವ ರಸ್ತೆಯಲ್ಲಿ ಒಂದು ವಾಹನವೂ ಇರಲಿಲ್ಲ.

- ಎಸ್. ಸೂರ್ಯನಾರಾಯಣ ಭಟ್

ಹೋಟೆಲ್, ಅಂಗಡಿ ಇತ್ಯಾದಿಗಳು ಸ್ವಲ್ಪ ದೂರ ದಲ್ಲೇ ಇದ್ದವು. ಹಾಗಾಗಿ ಸುಂದರನ ಗಾಯನ ಸ್ಥಳದ ಗಂಭೀರ ಮೌನವನ್ನು ಭೇದಿಸಿತ್ತು.

ಇದ್ದಕ್ಕಿದ್ದಂತೆ ಹಾಡು ನಿಂತಿತು. ಜೊತೆಗೆ ಠಪ್ ಎಂಬ ಸಪ್ಪಳ. ಭಟ್ಟರ ಫೈಲನ್ನು ದೂರ ಬಿಸುಟ

ಸುಂದರ ಗೊಣಗಿದ "ಅಂವ ಕಟ್ಟುವುದಿಲ್ಲ ಎಂತ ಇಲ್ಲ. ಯಾವ ಕರ್ಮಕ್ಕೆ ಇದೆಲ್ಲ ?". ಎರಡು ನಿಮಿಷ ಮೌನ. ನಡುನಡುವೆ ಕಾಗದ ಪತ್ರಗಳನ್ನು ತೂತು ಮಾಡಿದ ಸಪ್ಪಳ. ಪುನಃ ಮೌನ.

ಸುಂದರ ಅಟೆಂಡರ್ ಆದರೂ ವಾಸ್ತವವಾಗಿ ಅವನೇ ಬ್ಯಾಂಕ್ ನಡೆಸುವ ಮೆನೆಜರ್. ತನ್ನ ಹನ್ನೆರಡು ವರ್ಷಂ ಸರ್ವೀಸಿನಲ್ಲಿ ಈಗಿನವರಲ್ಲದೆ ಹಿಂದೆ ಮೂರು ಮೆನೆಜರ್‌ಗಳು ಬಂದು ಹೋಗಿದ್ದರು. ಈಗಿನವರೂ ಹಿಂದಿನವರ ಹಾದಿಯನ್ನೇ ತುಳಿಯುವವರು. ಯಾವುದಕ್ಕೂ ಸುಂದರನೇ ಬೇಕು. ಸಾಲ ಕೊಡುವುದಿರಲಿ, ವಸೂಲಿ ಇರಲಿ ಅಥವಾ ಠೇವಣಿ ಸಂಗ್ರಹವಿರಲಿ ಸುಂದರನ ಸಲಹೆ ಇಲ್ಲದೆ ಯಾವ ಕೆಲಸವೂ ಇಲ್ಲ. ಇದು ಊರಿನವರಿಗೂ ತಿಳಿದ ವಿಷಯ. ಮೆನೆಜರರಲ್ಲಿ ಏನಾದರೂ ಕೆಲಸವಿದ್ದರೆ ಸುಂದರನಲ್ಲಿ ಪೂರ್ವ ಸಮಾಲೋಚನೆ ಮಾಡದೆ ಹೋಗುವವರು ತೀರಾ ವಿರಳ. ಅವನಿಗಂತೂ ಇದರಿಂದಾಗಿ ತುಂಬಾ ಬಿಗುಮಾನ. ಅವನ ಯೋಚನೆಯಲ್ಲಿ ಅಲ್ಲಿರುವ ಪ್ರತಿಯೊಬ್ಬರೂ "ತಮಗೆ ಸುಂದರನಿದ್ದಾನೆ" ಎಂಬ ಧೈರ್ಯದಿಂದಲೇ ಬ್ಯಾಂಕಿಗೆ ಸೇರಿದವರು. ತಾನಿಲ್ಲದಿದ್ದರೆ ಬ್ಯಾಂಕಿನ ಇತಿಶ್ರೀ ಆದಂತೆಯೇ ಸರಿ ಎಂದೇ ಅವನು ತಿಳಿದಿದ್ದ. ಬ್ಯಾಂಕಿನ ಅಸಿಸ್ಟೆಂಟ್ ಮೆನೆಜರ್ ನಾನಾದರೂ ನನ್ನ ಮೇಲೂ ಅವನದೇ ಅಧಿಕಾರ. ಆದರೆ ಅವನ ಕರ್ತವ್ಯಪ್ರಜ್ಞೆ, ಪ್ರಾಮಾಣಿಕತೆ ಇತ್ಯಾದಿಗಳಿಗೆ ತಲೆದೂಗಿದ್ದ ನಾನು ಇವನ ಅಧಿಕಾರವನ್ನು ಪ್ರಶ್ನಿಸುವ ಗೋಜಿಗೆ ಈತನಕ ಹೋಗಿರಲಿಲ್ಲ.

ಮೌನವಾಗಿ ನನ್ನ ಕುರ್ಚಿಯಲ್ಲಿ ಕುಳಿತೆ. ಮನಸ್ಸು ಓಡತೊಡಗಿತು. ಮೊದಮೊದಲು ಹುಡುಗಿಯರ ಫೋಟೋ-ಜಾತಕಗಳು ಬಂದಾಗ ಮೌನವಾಗಿ ಒಂದಲ್ಲ ಒಂದು ಕಾರಣ ಹೇಳಿತಪ್ಪಿಸುತ್ತಿದ್ದುದು ಶೆಟ್ಟರ ಮಗಳು ಕುಸುಮಳಿಗೆ ಇವನು ಪ್ರೇಮ ಪತ್ರ ಬರೆದದ್ದು; ಅವಳು ಎಂ.ಎ. ಕ್ಲಾಸಿಗೆ ಹೋಗುವ ದಾರಿಯಲ್ಲಿ ಅಡಗಿ ಕುಳಿತು ಹಠಾತ್ ಪ್ರತ್ಯಕ್ಷವಾಗಿ 'ಐ ಲವ್ ಯೂ' ಎಂದು ಹೇಳಿದ್ದು, ನಂತರ ಪೆಟ್ಟು ತಿಂದು ಆಸ್ಪತ್ರೆ ಸೇರಿದ್ದು ಎಲ್ಲ ಕಣ್ಣಿಗೆ ಕಟ್ಟಿದಂತಾಯಿತು. ಇವನು ಅವಳನ್ನು ಇನ್ನೂ ಮರೆಯಲಿಲ್ಲವೇ? ಯಾಕೆ ಅವಳನ್ನೇ ಹಂಬಲಿಸುತ್ತಿದ್ದಾನೆ? ಛೆ! ಇಲ್ಲ. ಇವನಿಗೆ ಪೆಟ್ಟು ಕೊಡಿಸಿದ ಒಂದು ತಿಂಗಳಲ್ಲಿ ಸೆಟ್ಟರು ಕುಸುಮಳ ಮದುವೆ ಮಾಡಿಸಿದ್ದರು. ಸುಂದರನೂ ಎಚ್ಚೆತ್ತಿದ್ದ. ಆಕಾಶಕ್ಕೆ ಏಣಿ ಇಡಲು ಹೋದದ್ದು ತಪ್ಪೆಂದು ನನ್ನಲ್ಲಿ ಮನಬಿಚ್ಚಿ ಹೇಳಿದ್ದ.

ಬಹುಶಃ ಯಾವುದೋ ಸಿನಿಮಾ ತಾರೆಯನ್ನು ಕಲ್ಪಿಸಿಕೊಂಡು ಅಂತಹ ಹುಡುಗಿಗಾಗಿ ಹಂಬಲಿಸುತ್ತಿರಬೇಕು. ಮೂವತ್ತು ಕಳೆದು ಮೂವತ್ತೊಂದಕ್ಕೆ ಕಾಲಿಟ್ಟ ಇವನಿಗೆ ಇನ್ನೂ ಬುದ್ಧಿ ಭೂಮಿಗೆ ಬರಲಿಲ್ಲ. ಕ್ಯಾಶಿಯರ್ ಜಗ್ಗು ಒಮ್ಮೊಮ್ಮೆ ಛೇಡಿಸುವುದಿತ್ತು. "ಸುಂದರನಿಗೆ ತಲೆಗೂದಲು ಹಣ್ಣಾದರೆ ಸಾಲದಂತೆ! ಉಳಿದ ರೋಮಗಳೂ ಹಣ್ಣಾದ ಮೇಲೇ ಮದುವೆಯಾಗುವುದಂತೆ" ಎಂದು. ಅದಕ್ಕೆ ಅವನ ಉತ್ತರ ಹ್ಹೆಹ್ಹೆಹ್ಹೆ ಎಂಬ ನಗು ಮಾತ್ರ.

* * *

ಅದೊಂದು ದಿನ ಎಲ್ಲರೂ ಅವರವರ ಕೆಲಸಗಳಲ್ಲಿ ಮಗ್ನರಾಗಿದ್ದರು. ಸುಂದರ ಏನೋ ಹಂಚುತ್ತಿರುವುದು ಕಂಡಿತು. ಆಮಂತ್ರಣ ಪತ್ರಿಕೆಯಂತಿತ್ತು. ಒಡೆದು ನೋಡುತ್ತೇನೆ, ಸುಂದರನದೇ ವಿವಾಹ! ಆಮಂತ್ರಣ ಮಾತ್ರ ವಿವಾಹಕ್ಕಲ್ಲ, ಸಂತೋಷಕೂಟಕ್ಕೆ! ಹುಡುಗಿ ಕೆಳಗಿನ ಕೇರಿಯ ಲೀಲಾ. ಒಳ್ಳೊಳ್ಳೆಯ ಸಂಬಂಧಗಳನ್ನು ತಿರಸ್ಕರಿಸಿ ಸುಂದರ ಕೊನೆಯಲ್ಲಿ ವಿಚ್ಛೇದಿತೆಯೊಬ್ಬಳನ್ನು ಕಟ್ಟಿಕೊಂಡಿದ್ದ. ವಿವಾಹ ನಡೆದುಹೋಗಿತ್ತು. ನನಗೆ ಮಾತೇ ಹೊರಡಲಿಲ್ಲ. ಜಗ್ಗು ಮಾತ್ರ ನಿರ್ದಾಕ್ಷಿಣ್ಯವಾಗಿ ಲೀಲಾಳ ಪುರಾಣ ಬಿಚ್ಚತೊಡಗಿದ. "ಅವಳು ಹೋದ ತಿಂಗಳು ಫ್ಯಾನ್ಸಿ ಸ್ಟೋರಿನ ರಾಘವನೊಂದಿಗೆ..."

ಸಾಯಂಕಾಲ ಶಟರ್ ಹಾಕುತ್ತಿದ್ದ ಸುಂದರನನ್ನು ಪ್ರಶ್ನಿಸಿದೆ.

"ಸುಂದರ, ನಿನಗೆ ಲೀಲಾ ಹೇಗೆ ಸಿಕ್ಕಿಕೊಂಡಳು? ಯಾಕೆ ಅವಳನ್ನೇ ಮದುವೆಯಾದೆ?"

"ಕಳೆದ ವರ್ಷ ಮಳೆಗಾಲದ ಒಂದು ದಿನ ಸರ್" ಸುಂದರ ನಡೆದ ಕತೆ ಹೇಳತೊಡಗಿದ.

"ಅವಳು ನನ್ನ ರೂಮಿಗೆ ಬಂದಿದ್ದಳು. 'ಒಂದೈವತ್ತು ರೂಪಾಯಿ ಸಾಲ ಕೊಡುತ್ತೀರಾ?' ಎಂದು ಕೇಳಿದಳು. ನಾನು 'ಇಲ್ಲ' ಎಂದೆ.

"ರಾತ್ರಿ ಗಂಜಿ ಇಡಲು ಅಕ್ಕಿ ಇಲ್ಲ. ನೀವು ಕೊಡದಿದ್ದರೆ ಉಪವಾಸವೇ ಗತಿ. ದಯವಿಟ್ಟು ಉಪಕಾರ ಮಾಡಿ ಪುಣ್ಯ ಕಟ್ಟಿಕೊಳ್ಳಿ' ಎಂದಳು.

ಗಂಡ ಅವಳನ್ನು ಬಿಟ್ಟುಬಿಡುವ ಮೊದಲು ಹಿಂಸೆ ಕೊಡುತ್ತಿದ್ದುದು, ಅವಳೆದುರಲ್ಲಿಯೇ ರಂಗಿಯ ಜೊತೆ ಕಾಮಕೇಳಿ ನಡೆಸುತ್ತಿದ್ದುದು ಎಲ್ಲ ಹೇಳಿ ಅತ್ತಳು. ನನಗೂ ಪಾಪ ಎನಿಸಿತು. ಮೆನೆಜರರಲ್ಲಿ ಹೇಳಿ ಒಂದು ಕಡಿಮೆ ಬಡ್ಡಿ ಸಾಲ ಕೊಡಿಸಿದೆ. ನಂತರ ಅವಳು ಕಾಣಸಿಕ್ಕಾಗ ತನ್ನೆಲ್ಲ ಕಷ್ಟಗಳನ್ನು ಹೇಳಿ ಅಳುತ್ತಿದ್ದಳು. ನಿಧಾನವಾಗಿ ಅವಳ ಮೇಲೆ ಸಿಂಪತಿ ಬೆಳೆಯಿತು. ನಾನೇ ಅವಳನ್ನು ಮದುವೆಯಾಗಿ ಯಾಕೆ ಉದ್ಧರಿಸಬಾರದು ಎಂದು ತೋರಿತು.

"ಒಂದು ದಿನ ಭಟ್ಟನಿಗೆ ನೋಟೀಸು ಕೊಡಲು ಹೋಗುವ ಹಾದಿಯಲ್ಲಿ ಇವಳು ಸಿಕ್ಕಿದಳು. ನಾನು ಕೊಡಲಿಕ್ಕಿರುವ ಅಮೂಲ್ಯ ಉಡುಗೊರೆಯನ್ನು ಅವಳಿಗೆ ತಿಳಿಸಿದೆ. ಅವಳ ಆನಂದಕ್ಕೆ ಪಾರವೇ ಇಲ್ಲ. ಕಾಡಿನ ನಡುವೆ ತಿರುವಿನ ರಸ್ತೆ. ಅತ್ತ ಇತ್ತ ಯಾರೂ ಇರಲಿಲ್ಲ. ನನ್ನನ್ನು ಭರದಿಂದ ಸೆಳೆದಪ್ಪಿ ಗಳಗಳನೆ ಅತ್ತಳು. ಅದರ ಪರಿಣಾಮ ಸರ್ ಈ ಆಮಂತ್ರಣ. ತಪ್ಪದೆ ಬನ್ನಿ."

* * *

ಅಲ್ಲಿಂದ ಮೊರದಾಬಾದಿಗೆ ಬಂದು ಒಂದು ವರ್ಷ ಕಳೆಯಿತು. ಬ್ಯಾಂಕ್ ಹೊಕ್ಕೊಡನೆ ಹೆಡ್ಡಾಫೀಸಿನ ಸುತ್ತೋಲೆಗಳನ್ನು ಓದಿದ ಮೇಲೆಯೆ ಕೆಲಸ ಪ್ರಾರಂಭಿಸುವುದು ನನ್ನ ಕರ್ತವ್ಯಕ್ಕಿಂತಲೂ ಹೆಚ್ಚು ಹವ್ಯಾಸಕ್ಕಾಗಿ ಬೆಳೆದುಬಂದಿತ್ತು. ಆ ದಿನದ ಟಪಾಲಿನಲ್ಲಿ ಬಂದ ಸುತ್ತೋಲೆಗಳನ್ನು ಎಂದಿನಂತೆ ಕೈಗೆತ್ತಿಕೊಂಡೆ. ನೌಕರ ಕಲ್ಯಾಣ ವಿಭಾಗದಿಂದ ಒಂದು ಸುತ್ತೋಲೆ ಬಂದಿತ್ತು. ಬ್ಯಾಂಕ್ ಸೇವೆ ಕೊನೆಗೊಳಿಸಿದ ನೌಕರರ ಯಾದಿ ಅದು. ನಾಲ್ಕನೆಯದಾಗಿ ಸುಂದರನ ಹೆಸರು ಕಂಡು ಹೌಹಾರಿದೆ. 'ಕಾರಣ' ಎಂಬಲ್ಲಿ 'ಸ್ಕೂಟರ್ ಅಪಘಾತದಲ್ಲಿ ಮರಣ' ಎಂಬುದನ್ನು ಓದಿ ಕಣ್ಣಿಗೆ ಕತ್ತಲು ಕವಿಯಿತು.

ಬ್ಯಾಂಕ್ ಬಿಡುವಾಗ ಹೆಜ್ಜೆ ಭಾರವಾಗಿತ್ತು. ಕಣ್ಣು ಮಂಜಾಗಿತ್ತು. ಸುಂದರನ ಹಾಡು ಎಲ್ಲಿಂದಲೋ ಕೇಳಿಬಂದಂತಿತ್ತು. "ಮೇರಿ ಕಿಸ್‌ಮತ್ ಮೆ... ತೂ... ನಹೀಂ... ಶಾಯದ್..." 

### ಹಿಂದೋಟ...

ಕಾಲ ಪ್ರವಾಹದಲ್ಲಿ ಹಿಂದಕ್ಕೆ ಚಲಿಸಲು ಸಾಧ್ಯವೇ? ಹೌದು! ಸಾಧ್ಯವೆಂದು ವೈಜ್ಞಾನಿಕ ಕತೆಗಳ ಲೇಖಕರು ಹೇಳುತ್ತಾರೆ. ಇಲ್ಲ! ಅಸಾಧ್ಯವೆಂದು ಎಲ್ಲಾ ವಿಜ್ಞಾನಿಗಳೂ, ಐನ್‌ಸ್ಟಾಯಿನ್ ಸಾಪೇಕ್ಷ ಸಿದ್ಧಾಂತ ಮಂಡಿಸುವವರೆಗೂ, ಹೇಳುತ್ತಿದ್ದರು. ಆನಂತರ ಅವರಲ್ಲಿ ಒಂದು ಗುಂಪು ಸಾಧ್ಯವೆಂದು ಹೇಳಲಾರಂಭಿಸಿತು. ಖ್ಯಾತ ವಿಜ್ಞಾನಿ ಸ್ಟೀಫನ್ ವಿಲಿಯಂ ಹಾಕಿಂಗ್ ಸಾಧ್ಯವೆನ್ನುವವರ ಗುಂಪಿಗೆ ಇತ್ತೀಚೆಗೆ ಸೇರ್ಪಡೆಯಾಗಿದ್ದಾರೆ. ಇವರು ಇದುವರೆಗೂ ಕಾಲಪ್ರವಾಹದಲ್ಲಿ ಹಿಂದಕ್ಕೆ ಹೋಗುವುದಾಗಲಿ ಕ್ಷೀರಪಥವನ್ನು ದಾಟಿ ಪ್ರಯಾಣ ಬೆಳೆಸುವುದಾಗಲಿ ಅಸಾಧ್ಯವೆಂದು ವಾದಿಸುವವರಲ್ಲಿ ಪ್ರಮುಖರಾಗಿದ್ದರು. ಆದರೀಗ ಬೆಳಕಿಗಿಂತ ಹೆಚ್ಚಿನ ವೇಗದಲ್ಲಿ ಕ್ಷೀರಪಥವನ್ನು ದಾಟಿ ಹೋಗಲು ಸಾಧ್ಯ; ಆದರಿಂದಾಗಿ ಭೂತಕಾಲಕ್ಕೆ ಹಿಂದಿರುಗುವುದೂ ಸಾಧ್ಯ ಎನ್ನುವುದನ್ನು ಒಪ್ಪಿಕೊಂಡಿದ್ದಾರೆ.

– ಕೆ.ಗಣೇಶ್

### ಅತ್ಯಧಿಕ ತೆರಿಗೆ

ಭಾರತದಲ್ಲಿ ಸಿಗರೇಟಿನ ಮೇಲೆ ವಿಧಿಸುವ ತೆರಗೆ ಏಶಿಯಾದಲ್ಲೆ ಅತ್ಯಧಿಕ. ಅತಿ ಕಡಿಮೆ ತೆರಿಗೆ ವಿಧಿಸುವ ದೇಶ ಫಿಲಿಫೀನ್ಸ್. ಭಾರತವನ್ನು ಬಿಟ್ಟರೆ ಸಿಗರೇಟಿನ ಮೇಲೆ ಹೆಚ್ಚಿನ ತೆರಿಗೆ ಇರುವುದು ಹಾಂಗ್‌ಕಾಂಗಿನಲ್ಲಿ. ಭಾರತದೊಡನೆ ಪ್ರಪಂಚದ ಇನ್ನಿತರ ದೇಶಗಳನ್ನು ಹೋಲಿಸಿದರೆ ಅಲ್ಲಿನವರು ಸರಾಸರಿಯಾಗಿ ಇಲ್ಲಿನವರಿಗಿಂತಲೂ ೧೪ ಪಟ್ಟು ಹೆಚ್ಚು ಸಿಗರೇಟು ಸೇದುತ್ತಾರೆ.

- ವಿಜಯ ಸಿ. ಪೂಜಾರಿ

ವೆಲ್ಲಿಂಗ್ಟನ್‌ನಲ್ಲಿ ನಡೆದ ಪ್ರಥಮ ಟೆಸ್ಟ್ ಪಂದ್ಯದಲ್ಲಿ ಇಯಾನ್ ಬಾಥಮ್ ಮತ್ತು ಡೆರಿಕ್ ರ್‍ಯಾಂಡಲ್ (೧೬೪) ಅವರ ಶತಕಗಳ ನೆರವಿನಿಂದ ಇಂಗ್ಲೆಂಡ್ ೪೬೩ ರನ್ ಸೇರಿಸಿದ ನಂತರ ತಿರುಗೇಟು ನೀಡಿದ ಆತಿಥೇಯ ನ್ಯೂಜಿಲೆಂಡ್ ಮಾರ್ಟಿನ್ ಕ್ರೋವ್ ಮತ್ತು ಜೆರ್ಮಿ ಕೋನಿ ಅವರು ಹೊಡೆದ ಸೆಂಚುರಿ ಫಲವಾಗಿ ೫೩೭ ರನ್ ಗಳಿಸಿದ್ದರಿಂದ ಪಂದ್ಯ ನೀರಸ ಡ್ರಾದಲ್ಲಿ ಮುಕ್ತಾಯ ವಾಗಿತ್ತು.

ಒಂದು ವಾರದ ನಂತರ ಕ್ರೈಸ್ಟ್ ಚರ್ಚ್‌ನ ಲ್ಯಾಂಕಾಸ್ಟರ್ ಪಾರ್ಕ್‌ನಲ್ಲಿ ಎರಡನೆ ಟೆಸ್ಟ್ ಆರಂಭ ವಾಗುವ ಮುನ್ನ ಎರಡೂ ತಂಡಗಳು ತಮ್ಮ ಬೌಲಿಂಗ್ ಪ್ರದರ್ಶನದ ಬಗ್ಗೆ ಗಂಭೀರ ಚರ್ಚೆ ನಡೆಸಿದವು.

ಇದಕ್ಕೂ ಮುನ್ನ ೧೯೮೨-೮೩ರಲ್ಲಿ ಆಸ್ಟ್ರೇಲಿಯ ಪ್ರವಾಸ ಕೈಗೊಂಡು ಸರಣಿ ಸೋತಿದ್ದ ಇಂಗ್ಲೆಂಡ್‌ಗೆ ನ್ಯೂಜೀಲೆಂಡಿನಲ್ಲಾದರೂ ಸರಣಿ ಗೆದ್ದು ತಾಯ್ನಾಡಿಗೆ ಮರಳಬೇಕೆಂಬ ಹೆಬ್ಬಯಕೆಯಿತ್ತು.

ಇದೇ ಸಂದರ್ಭದಲ್ಲಿ ವೆಲ್ಲಿಂಗ್ಟನ್ ಪರ ನ್ಯೂಜೀಲೆಂಡಿನಲ್ಲಿ ಆಡುತ್ತಿದ್ದ ಟೋನಿ ಪಿಗೋಟ್ ಅಚ್ಚರಿ ಪಡುವಂತೆ ಇಂಗ್ಲೆಂಡ್ ತಂಡಕ್ಕೆ ಆಯ್ಕೆಗೊಂಡ. ತನ್ನ ಕ್ರಿಕೆಟ್ ಜೀವನದಲ್ಲಿ ಒಮ್ಮೆಯಾದರೂ ಟೆಸ್ಟ್ ಪಂದ್ಯ ಆಡಬೇಕೆನ್ನುವ ಹಂಬಲವಿದ್ದ ಟೋನಿ ಅದಕ್ಕಾಗಿ ತನ್ನ ವಿವಾಹವನ್ನು ಮುಂದೂಡಿದ್ದ.

### ಮೈದಾನದಲ್ಲಿ

ವೇಗದ ಬೌಲಿಂಗಿಗೆ ಸಹಾಯಕಾರಿಯಾಗಿದ್ದ ಪಿಚ್‌ನಲ್ಲಿ ಮೊದಲು ಬ್ಯಾಟಿಂಗಿಗೆ ಇಳಿದ ನ್ಯೂಜೀಲೆಂಡ್ ೩೦ ರನ್ ಸೇರಿಸುವವರೆಗೆ ಒಂದೂ ವಿಕೆಟ್ ಕಳೆದುಕೊಳ್ಳಲಿಲ್ಲ. ಒಂದು ತುದಿಯಲ್ಲಿ ಜಾನ್‌ರೈಟ್ (೨೫)ಗೆ ಬರೀ ಕಂಪನಿ ಕೊಡುತ್ತಿದ್ದ ಎಡ್ಗರ್ (೧)ಪಿಗೋಟ್ ಬೌಲಿಂಗಿನಲ್ಲಿ ರ್‍ಯಾಂಡಲ್‌ಗೆ ಕ್ಯಾಚ್ ನೀಡಿ ಮೊದಲ ಬಲಿಪಶುವಾದ. ನಂತರ ಬಂದ ನಾಯಕ ಜೆಫ್ ಹೋವರ್ತ್ (೯) ಕೋವನ್ಸ್‌ಗೆ ಬಲಿಯಾಗಿ ಪೆವಿಲಿಯನ್ ಕಂಡಾಗ ಆತಿಥೇಯರ ಸ್ಕೋರು ೪೨.

ಮೊದಲ ನಾಲ್ವರು ಬ್ಯಾಟ್ಸ್‌ಮನ್‌ಗಳನ್ನು ಪ್ರಯಾಸವಿಲ್ಲದೆ ಕೆಡವಿದ ಇಂಗ್ಲೆಂಡ್




● ಆದಿಕೇಶವ

## ಅಂದಿನ ಆಟ !
## ಇಂದಿನ ನೋಟ !

ನ್ಯೂಜಿಲೆಂಡ್-ಇಂಗ್ಲೆಂಡ್

ದ್ವಿತೀಯ ಟೆಸ್ಟ್

ಸ್ಥಳ: ಕ್ರೈಸ್ಟ್‌ಚರ್ಚ್ ಲ್ಯಾಂಕಾಸ್ಟರ್ ಪಾರ್ಕ್
ದಿನಾಂಕ: ೧೯೮೩-೮೪ ಫೆಬ್ರುವರಿ ೩, ೪, ೫

# ಇಂಗ್ಲೆಂಡ್ ಮೇಲೆ ನ್ಯೂಜೀಲಂಡ್‌ನ ಮೊದಲ ಜಯ!

ಬೌಲರ್‌ಗಳನ್ನು ಮುಂದಿನ ನಾಲ್ವರು ಆಟಗಾರರು ತೀವ್ರವಾಗಿ ಕಾಡಿದರು.

ಮಾರ್ಟಿನ್ ಕ್ರೋವ್ (೧೯) ಬಾಥಮ್ ಬೌಲಿಂಗಿನಲ್ಲಿ ವಿಕೆಟ್ ಒಪ್ಪಿಸಿ ನಿರ್ಗಮಿಸಿದ ನಂತರ ಜೆಫ್ ಕ್ರೋವ್ (೪೭)ನನ್ನು ಕೂಡಿಕೊಂಡ ಜೆ. ಕೋನಿ (೪೧) ಐದನೆ ವಿಕೆಟ್ ಪಾಲುಗಾರಿಕೆಯಲ್ಲಿ ೫೦ ರನ್ ಸೇರಿಸಿದ ನಂತರ ಬಂದ ರಿಚರ್ಡ್ ಹ್ಯಾಡ್ಲಿ ಇಂಗ್ಲೆಂಡ್ ಬೌಲರ್‌ಗಳಿಗೆ ಸಾಕಷ್ಟು ಚಳ್ಳೆ ಹಣ್ಣು ತಿನ್ನಿಸಿದ.

ಮೊದಲ ಐದು ವಿಕೆಟ್‌ಗಳನ್ನು ಬೇಗನೇ ಕಬಳಿಸಿದ ಸಂತಸದಲ್ಲಿದ್ದ ವಿಲ್ಲಿಸ್ ಬಳಗಕ್ಕೆ ಭಯಾನಕವಾಗಿ ಕಂಡ ಹ್ಯಾಡ್ಲಿ ವಿಲ್ಲಿಸ್ ಬೌಲಿಂಗ್‌ನಲ್ಲಿ ಬಾಬ್ ಟೇಲರ್ ಕ್ಯಾಚ್ ನೀಡುವ ಮುನ್ನ ಕೇವಲ ೮೧ ಎಸೆತಗಳಲ್ಲಿ ಭರ್ಜರಿ ೯೯ ರನ್ ಬಾರಿಸಿದ.

ಆನಂತರ ಇಯಾನ್ ಸ್ಮಿತ್ ಉಳಿದವರಿಂದ ಸರಿಯಾದ ಬೆಂಬಲ ಸಿಗದೆ ಹೋದರೂ ಅಜೇಯ ೩೨ ರನ್ ಬಾರಿಸಿ ನ್ಯೂಜೀಲೆಂಡಿನ ಮೊತ್ತ ೩೦೭ಕ್ಕೆ ಸೀಮಿತಗೊಳ್ಳುವಂತೆ ಮಾಡಿದ.

ಇಂಗ್ಲೆಂಡ್ ಪರ ವಿಲ್ಲಿಸ್ ಯಶಸ್ವಿ ಬೌಲರ್ ಎನಿಸಿ ೫೧ ರನ್ ನೀಡಿ ನಾಲ್ಕು ವಿಕೆಟ್ ಹೆಕ್ಕಿದರೆ ಕೋವಾನ್ಸ್‌ಗೆ ಮೂರು ಮತ್ತು ಪಿಗೋಟ್‌ಗೆ ಎರಡು ವಿಕೆಟ್‌ಗಳು ಬಿದ್ದವು. ಈ ಹಿಂದೆ ಇಂಗ್ಲೆಂಡ್ ಗೆಲುವುಗಳಲ್ಲಿ ಹೀರೋ ಎನಿಸಿದ್ದ ಇಯಾನ್ ಬಾಥಂ ಈ ಪಂದ್ಯದಲ್ಲಿ ಕೇವಲ ಒಂದು ವಿಕೆಟ್ ಗಳಿಸುವಲ್ಲಿ ಯಶಸ್ವಿಯಾದ.

ಇಂಗ್ಲೆಂಡಿನ ಬ್ಯಾಟಿಂಗ್ ಆದರ ಬೌಲಿಂಗ್‌ಗಿಂತಲೂ ಕೆಟ್ಟದಾಗಿತ್ತು. ಗೂಡು ಬಿಟ್ಟು ಬರಲು ಅಂಜಿದವರಂತೆ ಕಂಡ ಪ್ರಮುಖ ಬ್ಯಾಟ್ಸ್‌ಮನ್‌ಗಳು ಒಬ್ಬರಾದ ಮೇಲೊಬ್ಬರಂತೆ ಪಿಚ್‌ಗೆ ಬಂದು 'ಹಾಜರಿ' ಹಾಕಿಹೋದರು. ಮೊದಲ ನಾಲ್ಕು ವಿಕೆಟ್‌ಗಳು ಕೇವಲ ೧೦ ರನ್‌ಗಳಾಗುವಷ್ಟರಲ್ಲಿ ಪೆವಿಲಿಯನ್ ಕಂಡಿದ್ದವು. ಮೈಕ್ ಗ್ಯಾಟಿಂಗ್ (೧೯) ತಂಡದ ಪರ ಹೆಚ್ಚು ರನ್ ಗಳಿಸಿದ ಆಟಗಾರನೆಂಬ ಗೌರವ ಪಡೆದರೆ, ಬೌಲಿಂಗ್‌ನಲ್ಲಿ ವಿಫಲನಾಗಿದ್ದ ಬಾಥಮ್ ೧೮ ರನ್ ಹೊಡೆದ.

ಪಂದ್ಯದ ಎರಡನೆ ದಿನ ಚಹಾ ವೇಳೆಯ ಸಮಯದಲ್ಲಿ ಮಳೆ ಬಾರದೇ ಹೋಗಿದ್ದರೆ ಇಂಗ್ಲೆಂ ಡಿನ ಆಟ ಆಗಲೇ ಮುಗಿದುಹೋಗುತ್ತಿತ್ತು. ಆದರೆ ಹಾಗಾಗದೆ ದಿನದ ಆಟ ನಿಂತಾಗ ಏಳು ವಿಕೆಟ್‌ಗಳಿಗೆ ೫೩ ರನ್ ಸೇರಿಸಿ ಮರ್ಯಾದೆ ಉಳಿಸಿಕೊಂಡಿತ್ತು.

ಮೂರನೇ ದಿನದ ಆಟ ಆರಂಭವಾದಾಗ ಇಂಗ್ಲೆಂಡಿನ ಬ್ಯಾಟ್ಸ್‌ಮನ್‌ಗಳಿಗೆ ಹೆಚ್ಚಿಗೆ ಹೊತ್ತು ತಳ ಊರಲು ಅವಕಾಶ ಕೊಡದ ಕಿವೀಸ್ ಬೌಲರ್‌ಗಳು ಭೋಜನ ವಿರಾಮಕ್ಕೆ ೪೫ ನಿಮಿಷ ಗಳ ಮೊದಲು ಇಂಗ್ಲೆಂಡಿನ ಸರದಿ ೮೨ ರನ್‌ಗಳಿಗೆ ಮುಗಿಯುವಂತೆ ಮಾಡಿ 'ಫಾಲೋ ಆನ್' ನೀಡಿದರು.

ನ್ಯೂಜೀಲೆಂಡ್ ಇನ್ನಿಂಗ್ಸ್‌ನಲ್ಲಿ ಬರೀ ಒಂದು ರನ್ನಿನಿಂದ ಶತಕ ತಪ್ಪಿಸಿಕೊಂಡಿದ್ದ ರಿಚರ್ಡ್ ಹ್ಯಾಡ್ಲಿ ಬೌಲಿಂಗ್‌ನಲ್ಲೂ ಭಯಂಕರವಾಗಿ ಕಾಡಿ ೧೬ ರನ್‌ಗಳಿಗೆ ಮೂರು ಪ್ರಮುಖ ವಿಕೆಟ್‌ಗಳನ್ನು ಎಗುರಿಸಿದ. ಲಾನ್ಸ್ ಕೇರ್ನ್ಸ್ (೩-೩೫)ಚೌಟಫೀಲ್ಡ್ (೩-೧೦) ತಾವೇನು ಕಮ್ಮಿಯಿಲ್ಲ ಎನ್ನುವಂತೆ ತಲಾ ಮೂರು ವಿಕೆಟ್ ಕಬಳಿಸಿದರು.

ಇನಿಂಗ್ಸ್ ಸೋಲು ತಪ್ಪಿಸಿಕೊಳ್ಳಬೇಕಾದರೆ ೨೨೫ ರನ್‌ಗಳನ್ನು ಮಾಡಬೇಕಿದ್ದ ಇಂಗ್ಲೆಂಡ್ ಪರಿಸ್ಥಿತಿ ಎರಡನೇ ಇನ್ನಿಂಗ್ಸ್‌ನಲ್ಲೂ ಕೆಟ್ಟದಾಗಿಯೇ ಮುಂದುವರಿಯಿತು. ಆರಂಭಿಕ ಬ್ಯಾಟ್ಸ್‌ಮನ್‌ಗಳಾದ ಫ್ಲಾವರ್ (೧೦) ಮತ್ತು ಕ್ರಿಸ್ ಟ್ಯಾವರೆ ಈ ಬಾರಿ ಹೆಚ್ಚು ಹೊತ್ತು ಪಿಚ್‌ನಲ್ಲಿದ್ದರೂ ರನ್‌ಗಳು ಮಾತ್ರ ಬರಲಿಲ್ಲ. ಸ್ಕೋರು ೧೫ ಆಗಿದ್ದಾಗ ಟ್ಯಾವರೆ, ಹ್ಯಾಡ್ಲಿಗೆ ವಿಕೆಟ್ ನೀಡುವ

ಮೂಲಕ ಇಂಗ್ಲೆಂಡ್ ಪತನಕ್ಕೆ ನಾಂದಿ ಹಾಕಿದ.

ಇಲ್ಲಿಂದ ಇಂಗ್ಲೆಂಡ್‌ಗೆ ಶುರುವಾಯಿತು ಶನಿರಾಯನ ಕಾಟ. ಹ್ಯಾಡ್ಲಿಯ ವೇಗದ ದಾಳಿಯನ್ನು ತಡೆದುಕೊಳ್ಳಲಾರದೆ ತಂಡದ ಪ್ರಮುಖ ಬ್ಯಾಟ್ಸ್‌ಮನ್‌ಗಳು ಮೊದಲಿನಂತೆ ಪೆವಿಲಿಯನ್‌ಗೆ ಪೆರೇಡ್ ನಡೆಸಿದರು. ಪ್ರಥಮ ಇನ್ನಿಂಗ್ಸ್‌ನಲ್ಲಿ ಅತಿ ಹೆಚ್ಚು ಓಟಗಳಿಸಿದ್ದ ಮೈಕ್ ಗ್ಯಾಟಿಂಗ್ ತನಗೆ ದೃಷ್ಟಿಯಾಯಿತು ಎನ್ನುವಂತೆ ಒಂದೂ ಓಟ ಗಳಿಸದೆ ನಿರ್ಗಮಿಸಿದ್ದು ಹೇಗಾದರೂ ಮಾಡಿ ಪಂದ್ಯ ಉಳಿಸಿಕೊಳ್ಳಬೇಕೆನ್ನುವ ನಾಯಕನ ಆಸೆಗೆ ಭಾರೀ ಭಂಗವಾಯಿತು.

ಗ್ಯಾಟಿಂಗ್ ಮತ್ತು ಬಾಥಮ್ ಶೂನ್ಯದೊಂದಿಗೆ ನಿರ್ಗಮಿಸಿದಾಗ ಡೆರಿಕ್ ರ್‍ಯಾಂಡಲ್ (೨೫)ನನ್ನು ಕೂಡಿಕೊಂಡ ಬಾಬ ಟೇಲರ್ (೧೫) ಆರನೇ ವಿಕೆಟ್ ಪಾಲುಗಾರಿಕೆಯಲ್ಲಿ ೩೯ ರನ್ ಸೇರಿಸಿ ಸ್ವಲ್ಪ ಪ್ರತಿರೋಧ ಒಡ್ಡಿದ್ದರಾದರೂ ಇಂಗ್ಲೆಂಡಿನ ಗುರಿ ಇನ್ನೂ ಬಹಳ ದೂರ ಉಳಿದಿತ್ತು.

ಇಂಗ್ಲೆಂಡ್ ತಂಡವನ್ನು ಕೇವಲ ೯೩ ರನ್‌ಗಳಿಗೆ ಉರುಳಿಸಿದ ರಿಚರ್ಡ್ ಹ್ಯಾಡ್ಲಿ ೨೮ ರನ್ ನೀಡಿ ಐದು ವಿಕೆಟ್ ಹೆಕ್ಕಿದ್ದಲ್ಲದೆ ಬರೀ ಮೂರು ದಿನಗಳಲ್ಲಿ ನ್ಯೂಜೀಲೆಂಡಿಗೆ ಅವಿಸ್ಮರಣೀಯ ಇನ್ನಿಂಗ್ಸ್ ಮತ್ತು ೧೩೨ ರನ್‌ಗಳ ಅಮೋಘ ಜಯ ತಂದುಕೊಟ್ಟ.

ಇಂಗ್ಲೆಂಡ್ ಈ ಮುಂಚಿನ ತನ್ನ ೧೦ ವರ್ಷಗಳ ಆಟದಲ್ಲಿ ಇಷ್ಟು ಹೀನಾಯ ಸೋಲನ್ನೆಂದೂ ಕಂಡಿರಲಿಲ್ಲ. ಮುಖ್ಯವಾಗಿ ಇಂಗ್ಲೆಂಡ್ ಈ ಪಂದ್ಯದ ಎರಡೂ ಇನ್ನಿಂಗ್ಸ್‌ಗಳಲ್ಲೂ ಶತಕ ದಾಟುವಲ್ಲಿ ವಿಫಲವಾಗಿ ಭಾರೀ ಮುಖಭಂಗ ಅನುಭವಿಸಿತು.

ಬಾಬ್ ವಿಲ್ಲಿಸ್, "ನಮಗೆ ಈ ಸೋಲಿನಿಂದ ಕ್ಷಮೆ ಎಂಬುದೇ ಇಲ್ಲ. ಯಾರೂ ನಿರೀಕ್ಷಿಸಲಾರದಷ್ಟು ಕೆಟ್ಟ ಪ್ರದರ್ಶನ ನಮ್ಮಿಂದ ಬಂತು. ಆದರಲ್ಲೂ ನಮ್ಮ ಬೌಲಿಂಗ್ ಅಂತೂ ಅತೀ ಹೊಲಸಾಗಿತ್ತು. ಈ ರೀತಿಯ ಬೌಲಿಂಗ್‌ನ್ನು ನಾನು ಈ ಹಿಂದಿನ ಯಾವ ಟೆಸ್ಟ್ ಪಂದ್ಯದಲ್ಲಿಯೂ ನೋಡಿರಲಿಲ್ಲ" ಎಂದು ಅಭಿಪ್ರಾಯ ಪಟ್ಟ.

ಜೆಫ್ ಹೋವರ್ತ್, "ನನ್ನ ಕ್ರಿಕೆಟ್ ಜೀವನದಲ್ಲಿ ಎಂದೆಂದಿಗೂ ಮರೆಯಲಾರದ ಅವಿಸ್ಮರಣೀಯ ಕ್ಷಣ ಇದು. ಕೆಲವರು ಇದು 'ನ್ಯೂಜೀಲೆಂಡಿಗೆ ಬಂದ 'ಅಚಾನಕ್ ಗೆಲುವು' ಎಂದು ಹೇಳುವರಾದರೂ ನಾವು ಈ ಪಂದ್ಯ ಗೆಲ್ಲಲೇಬೇಕೆಂಬ ಛಲದಿಂದ ಆಡಿದ್ದೆವು. ನಮ್ಮ ಅಮೋಘ ಗೆಲುವಿನ ರೂವಾರಿ ರಿಚರ್ಡ್ ಹ್ಯಾಡ್ಲಿ ಎನ್ನುವಲ್ಲಿ ಎರಡು ಮಾತಿಲ್ಲ. ಬೌಲಿಂಗ್ ಮತ್ತು ಬ್ಯಾಟಿಂಗ್ ಎರಡರಲ್ಲೂ ಉತ್ಕೃಷ್ಟ ಪ್ರದರ್ಶನ ನೀಡಿದ ಹ್ಯಾಡ್ಲಿ ವಿಶ್ವದ ಸರ್ವಶ್ರೇಷ್ಠ ಆಲ್ ರೌಂಡರ್ ಎಂಬುದು ನಿಸ್ಸಂಶಯ" ಎಂದು ಶ್ಲಾಘಿಸಿದ.

## ದಾಖಲೆಯಲ್ಲಿ

ವೆಲ್ಲಿಂಗ್ಟನ್ ಮೈದಾನದಲ್ಲಿ ರನ್‌ಗಳ ಪ್ರವಾಹವನ್ನೇ ಕಂಡ ಪ್ರಥಮ ಟೆಸ್ಟ್ ಪಂದ್ಯ ನಿರೀಕ್ಷಿಸಿದಂತೆ ಡ್ರಾದಲ್ಲಿ ಕೊನೆಗೊಂಡಿತ್ತು. ಇಯಾನ್ ಬಾಥಂ ಶತಕ ಬಾರಿಸಿ ದಾಖಲೆಯ ಐದು ಬಾರಿ ಐದು ವಿಕೆಟ್‌ಗಳನ್ನು ಬುಟ್ಟಿಗಿಳಿಸಿದ್ದಲ್ಲದೆ ರ್‍ಯಾಂಡಲ್ (೧೬೪) ಜೊತೆ ಆರನೆ ವಿಕೆಟ್ ಜೊತೆಯಾಟದಲ್ಲಿ ೨೦೧ ನಿಮಿಷಗಳಲ್ಲಿ ೨೩೨ ರನ್ ಸೇರಿಸಿದ. ಇಂಗ್ಲೆಂಡ್ ಇವರ ಶತಕಗಳ ನೆರವಿನಿಂದ ತನ್ನ ಪ್ರಥಮ ಇನಿಂಗ್ಸ್‌ನಲ್ಲಿ ೪೬೩ ರನ್ ಸಂಪಾದಿಸಿತ್ತು. ನ್ಯೂಜಿಲೆಂಡ್ ಪರ ಲ್ಯಾನ್ಸ್ ಕೇನ್ಸ್ ೧೪೩ ರನ್ ನೀಡಿ ಏಳು ವಿಕೆಟ್ ಪಡೆದುಕೊಂಡ.

ನ್ಯೂಜೀಲೆಂಡಿನ ಎರಡನೆ ಇನ್ನಿಂಗ್ಸ್‌ನಲ್ಲಿ ಮಾರ್ಟಿನ್ ಕ್ರೋವ್ ಮತ್ತು ಜೆರ್ಮಿ ಕೋನಿ ಚೊಚ್ಚಲ ಶತಕ ದಾಖಲು ಮಾಡಿದರು. ಈ ಸರದಿಯಲ್ಲಿ ಕಿವಿಸ್ ತಂಡ ೫೩೭ ರನ್ ಗಳಿಸಿತು.

ಆಕ್ಲಂಡ್‌ನಲ್ಲಿ ಮೂರನೆ ಟೆಸ್ಟ್ ಪಂದ್ಯವನ್ನು ಡ್ರಾ ಮಾಡಿಕೊಂಡ ನ್ಯೂಜೀಲೆಂಡ್ ಇಂಗ್ಲೆಂಡ್ ವಿರುದ್ಧ ಪ್ರಥಮ ಬಾರಿಗೆ ಸರಣಿ (೧-೦) ಗೆದ್ದ ಸಾಧನೆ ಮಾಡಿತು.

ನ್ಯೂಜೀಲೆಂಡಿನ ೪೯೬ ರನ್‌ಗಳಲ್ಲಿ ಜಾನ್ ರೈಟ್ (೧೩೦) ಜೆಫ್ ಕ್ರೋವ್ (೧೨೮) ಹಾಗೂ ವಿಕೆಟ್ ಕೀಪರ್ ಇಯಾನ್ ಸ್ಮಿತ್ (ಔಟಾಗದೆ ೧೧೩) ಚೊಚ್ಚಲ ಶತಕ ಸಂಪಾದಿಸಿದರು.

ಇದಕ್ಕುತ್ತರವಾಗಿ ಇಂಗ್ಲೆಂಡ್ ೪೩೯ ರನ್ ಹೊಡೆಯಿತು. ಡೆರಿಕ್ ರ್‍ಯಾಂಡಲ್ (೧೦೪) ಮತ್ತೊಮ್ಮೆ ಶತಕ ಬಾರಿಸಿದರೆ ಕ್ರಿಸ್ ಸ್ಮಿತ್ ೯೧ ಹಾಗೂ ಬಾಥಂ ೭೦ ರನ್ ಬಾರಿಸಿದರು.

☆ ☆ ☆

ಈ ರೋಗದ
ನಿವಾರಣೆಯಲ್ಲೊಂದು
ಮೈಲುಗಲ್ಲು!

# ಮಲೇರಿಯಾಕ್ಕೆ

# ರಾಮಬಾಣ

- ಡಾ. ಡಿ.ವಿ.ರಾವ್
(ಕೃಪೆ: ದಾಯ್ಜ್ಯಲಾಂತ್ ಮ್ಯಾಗಜೀನ್)

ಇಂದಿಗೂ ಮಲೇರಿಯಾ ರೋಗ ಪ್ರಪಂಚದ ಒಂದು ಪ್ರಬಲ ಪಿಡುಗು ಎಂದು ಪರಿಗಣಿಸಲ್ಪಟ್ಟಿದೆ. ಸುಮಾರು ಪ್ರಪಂಚದ ಎಲ್ಲ ಭಾಗಗಳಿಗೂ ವ್ಯಾಪಿಸಿದ ಅದು ಅಸಂಖ್ಯ ಜನರ ಸಾವಿಗೆ ಕಾರಣವಾಗಿದೆ. ಕಳೆದ ಕೆಲವು ವರ್ಷಗಳಿಂದ ನಮ್ಮ ದೇಶದಲ್ಲಿ ಮಲೇರಿಯಾ ನಿರ್ಮೂಲವಾಗಿದೆ ಎಂಬ ಭಾವನೆ ಸಾರ್ವತ್ರಿಕವಾಗಿತ್ತು. ಆದರೆ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಕೆಲವು ಕಡೆ ಅದು ಕಾಣಿಸಿಕೊಂಡಿದ್ದರಿಂದ ಆ ಭಾವನೆ ನಿರಾಧಾರವೆಂದು ಸಿದ್ಧವಾಗಿದೆ.

ಎರಡನೆ ಮಹಾಯುದ್ಧದ ಅನಂತರ ಈ ಪಿಡುಗನ್ನು ನಿರ್ಮೂಲಗೊಳಿಸಲು ಪ್ರಪಂಚದಾದ್ಯಂತ ಪ್ರಯತ್ನ ನಡೆದಿದೆ. ತತ್ಪರಿಣಾಮವಾಗಿ ಕಂಡುಹಿಡಿಯಲ್ಪಟ್ಟ ಡಿಡಿಟಿಯಿಂದ ಮಲೇರಿಯಾ ತಹಬಂದಿಗೆ ಬಂತು.

ಈವರೆಗೂ ಮಲೇರಿಯಾವನ್ನು "ಉಷ್ಣವಲಯದ ಅಜೇಯವ್ಯಾಧಿ" ಎಂದೇ ಪರಿಗಣಿಸಲಾಗಿತ್ತು. ಪ್ರಪಂಚದ ಅರ್ಧದಷ್ಟು ಜನ ಮಲೇರಿಯಾ ಪೀಡಿತ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಕಳೆದ ೨೫ ವರ್ಷಗಳಲ್ಲಿ ಸುಮಾರು ೫೦ ಕೋಟಿ ಜನ ಮಲೇರಿಯಾದಿಂದ ಪೀಡಿತರಾಗಿದ್ದಾರೆ. "ಮಲೇರಿಯಾ ಟ್ರಾಪಿಕ್" ಎಂದು ಹೆಸರಿರುವ ಮಲೇರಿಯಾದಿಂದ ಪ್ರತಿವರ್ಷ ೨೫ ರಿಂದ ೩೦ ಲಕ್ಷ ಜನ ಸಾಯುತ್ತಾರೆಂದು ಒಂದು ಅಂದಾಜು.

ಶತಮಾನಗಳಿಂದ ಈ ಪೀಡೆಗೆ ಸರಿಸಮನಾದ ರೋಗ ಬೇರೊಂದಿಲ್ಲ ಎಂದು ರೋಗನಿದಾನ ತಜ್ಞರ ಅಭಿಪ್ರಾಯ. ಎರಡನೆ ಮಹಾಯುದ್ಧದ ಜೊತೆಗೆ ಸೊಳ್ಳೆಗಳು ಮೊಟ್ಟೆಯಿಟ್ಟು ಮರಿಮಾಡುವ ಕೊಳಚೆ ಮತ್ತು ಜೌಗು ಪ್ರದೇಶಗಳಲ್ಲಿ ಡಿಡಿಟಿಯನ್ನು ಸಿಂಪಡಿಸುವ ಕಾರ್ಯಕ್ರಮವನ್ನು ವ್ಯಾಪಕವಾಗಿ ಜಾರಿಗೆ ತಂದು ರೋಗ ಹರಡದಂತೆ ತಡೆಯಲಾಯಿತು. ಮಲೇರಿಯಾ ಜ್ವರ ನಿವಾರಣೆಗೆ ಸಿದ್ಧೌಷಧ ಎಂದು ಪರಿಗಣಿಸಲಾದ "ಕ್ಲೋರೋಕ್ವಿನ್" ಎಂಬ ಔಷಧದ ಬಿರುಸಿನ ಬಳಕೆಯಿಂದ ಮಲೇರಿಯಾ ಹಾವಳಿಯನ್ನು ತಡೆಯಲು ಸಾಧ್ಯವಾಗಿತ್ತು.

ಕಳೆದ ಎರಡು ದಶಕಗಳಿಂದ ಔಷಧ ಮತ್ತು ರಾಸಾಯನಿಕ ಶಾಸ್ತ್ರಗಳಲ್ಲಿ ಗಣನೀಯವಾಗಿ ಅನ್ವೇಷಣೆಗಳು ನಡೆದಿವೆ. ದಕ್ಷಿಣ ಅಮೇರಿಕದ ಕೊಲಂಬಿಯಾ ರಾಜ್ಯದಲ್ಲಿ ಜೀವರಸಾಯನ ಶಾಸ್ತ್ರದ ವಿಜ್ಞಾನಿ ಮತ್ತು ವೈದ್ಯರಾದ ಡಾ. ಮ್ಯಾನ್ಯುಯೆಲ್ ಪೆಟರೋರ್ಯಯೋರು ದಶಕಗಳ ಕಾಲ ಶ್ರಮಿಸಿ ಮಲೇರಿಯಾವನ್ನು ನಿವಾರಿಸುವ ಉಪಾಯಗಳನ್ನು ಕಂಡು ಹಿಡಿದಿದ್ದಾರೆ. ಅವರು ತಮ್ಮ ಸಹಾಯಕರೊಂದಿಗೆ ೧೯೭೮ರಲ್ಲಿ ಮಲೇರಿಯಾ ನಿರೋಧಕ ಚುಚ್ಚುಮದ್ದನ್ನು (ವ್ಯಾಕ್ಸಿನ್) ಕಂಡು ಹಿಡಿದರು.

೧೯೭೮ರವರೆಗೂ ಮಲೇರಿಯಾಕ್ಕೆ ಕಾರಣವಾದ ಪರೋಪಜೀವಿಯ ನಿರ್ಮೂಲನಕ್ಕಾಗಿ ಮಾಡಿದ್ದ ಪ್ರಯೋಗಗಳೆಲ್ಲಾ ವಿಫಲವಾಗಿದ್ದವು. ಪ್ರಾಯಶಃ ಮಲೇರಿಯಾ ರೋಗ ಹರಡಲು ಕಾರಣವಾದ "ಅನಾಫಿಲಿಸ್" ಜಾತಿಯ ಹೆಣ್ಣುಸೊಳ್ಳೆಗಳು ಡಿಡಿಟಿಗೆ ಪ್ರತಿರೋಧ ಶಕ್ತಿಯನ್ನು



"ಕ್ಷಮಿಸು ಬೋರಣ್ಣಾ.... 'ಅಪರಾಧ ಮತ್ತು ರಾಜಕಾರಣಿಗಳ ಸಂಬಂಧ'ದ ಬಗೆಗಿನ ವಿಚಾರ ಸಂಕಿರಣಕ್ಕೆ ಹೋಗಿದ್ದೆ. ಹೀಗಾಗಿ ಲೇಟಾಯ್ತು."

ಬೆಳೆಸಿಕೊಳ್ಳುತ್ತವೆ. ಅಥವಾ ಮಲೇರಿಯಾಕ್ಕೆ ಕಾರಣವಾದ ಪರೋಪಜೀವಿಯೇ ಡಿಡಿಟಿಗೆ ಮತ್ತು ಕ್ಲೋರೋಕ್ವಿನ್ನಿಗೆ ಪ್ರತಿರೋಧ ಶಕ್ತಿಯನ್ನು ಬೆಳೆಸಿಕೊಳ್ಳಲೂ ಸಾಧ್ಯವಿದ್ದೀತು ಎಂಬ ಅಭಿಪ್ರಾಯಕ್ಕೆ ಬಂದರು. ಮಲೇರಿಯ ಹೆಚ್ಚಾಗಿರುವ ಥೈಲೆಂಡಿನಲ್ಲಿ ಇಂದಿನ ದಿನಗಳಲ್ಲಿ ಕ್ಲೋರೋಕ್ವಿನ್ ಔಷಧವು ಮಲೇರಿಯಾದ ಪರೋಪಜೀವಿಗಳ ಮೇಲೆ ಪ್ರಭಾವ ಬೀರುತ್ತಿಲ್ಲ. ಕಾಂಬೋಡಿಯಾ ದೇಶದಲ್ಲಿ ಹತ್ತು ವರ್ಷಗಳ ಹಿಂದೆ ಹೊಸದಾಗಿ ಕಂಡುಹಿಡಿದ ಮೆಫ್ಲೋಕ್ವಿನ್ ಎಂಬ ಔಷಧವೂ ಮೊದಮೊದಲು ಮಲೇರಿಯಾ ಪರೋಪಜೀವಿಯನ್ನು ನಾಶಪಡಿಸಿದರೂ ಈಗ ಪರಿಣಾಮ ಕಳೆದುಕೊಂಡಿದೆ.

ಹದಿನೈದು ವರ್ಷಗಳಷ್ಟು ಹಿಂದೆಯೆ ಪೆಟರ್ರೊಯೋ ಅವರು ಬಗೋಟದ ಮಲೇರಿಯಾ ಕೇಂದ್ರದಲ್ಲಿ ನಡೆಸಿದ ಪ್ರಯೋಗಗಳಿಂದ ಮಾನವ ದೇಹದಲ್ಲಿರುವ ಸೋಂಕು ರಕ್ಷಣಾ ನಿಯಂತ್ರಣ ಶಕ್ತಿಯನ್ನು (Immune defence machanism) ಈ ಪರೋಪಜೀವಿಯು ತಡೆದು ಹೇಗೆ ನುಣುಚಿಕೊಳ್ಳುತ್ತದೆ ಎಂಬುದನ್ನು ಕಂಡುಕೊಂಡರು. ಹೆಣ್ಣು ಅನಾಫಿಲಿಸ್ ಸೊಳ್ಳೆಯು ಆಹಾರ ಹುಡುಕುವ ಪ್ರಯತ್ನದಲ್ಲಿ ಮಾನವರ ರಕ್ತವನ್ನು ಹೀರಿಕೊಳ್ಳುವಾಗ ಮಲೇರಿಯಾ ಪರೋಪಜೀವಿಯನ್ನೂ ತನ್ನ ಜೊಲ್ಲಿನ ಮೂಲಕ ದೇಹದೊಳಗೆ ಸೇರಿಸುತ್ತದೆ. ರಕ್ತವು ಪರೋಪಜೀವಿಯನ್ನು ಹೊರಹಾಕುವ ಪ್ರಯತ್ನ ಮಾಡುವುದರೊಳಗೇ ಅದು ತನ್ನ ರೂಪ ಬದಲಿಸಿಕೊಂಡು ಸ್ಪೊರೊಝೈಟ್ಸ್ ಎಂಬ ಹೆಸರಿನಿಂದ ಮನುಷ್ಯನ ಪಿತ್ತಕೋಶದಲ್ಲಿ ಅಡಗಿಕೊಳ್ಳುತ್ತದೆ. ಪಿತ್ತಕೋಶದಿಂದ ಪುನಃ ರಕ್ತಕ್ಕೆ ಸೇರುವಾಗ ಸ್ಪೊರೋಝೈಟ್ಸ್ ತನ್ನ ಸ್ವರೂಪವನ್ನು ಬದಲಿಸಿಕೊಂಡು ಮರೊಝೊಯಿಟ್ಸ್ ಎಂಬ ಇನ್ನೊಂದು ಹೊಸ ರೂಪದಿಂದ ರಕ್ತಕ್ಕೂ ಅನಂತರ ರಕ್ತವಾಹಿನಿಗೂ ಸೇರುತ್ತದೆ ಎಂಬುದನ್ನು ಅವರು ಕಂಡುಹಿಡಿದರು. ಆದುದರಿಂದಲೇ ಮನುಷ್ಯನ ರಕ್ತದಲ್ಲಿ ಸೇರಬಹುದಾದ ವಿಷಾಣುಗಳ ದುಷ್ಪರಿಣಾಮವನ್ನು ತಡೆಯುವಂತಹ ಪ್ರತಿಷೇಧ ವಸ್ತು (ಆಂಟಿ ಬಾಡಿ) ರಕ್ತದಲ್ಲಿ ಉತ್ಪತ್ತಿಯಾಗುವುದಕ್ಕೆ ಮೊದಲೆ ಮಲೇರಿಯಾ ಪರೋಪಜೀವಿಯು ತನ್ನ ರಕ್ಷಣಾ ಸ್ಥಳವನ್ನು ಸೇರಿಕೊಳ್ಳುತ್ತದೆ! ಈ ಪರೋಪಜೀವಿಯ ದಾಳಿಯಿಂದ ಕೆಂಪುರಕ್ತ ಕಣಗಳು ಒಡೆಯಲು ಪ್ರಾರಂಭಿಸಿ ಚಳಿ ಕಾಣಿಸಿಕೊಂಡು ಜ್ವರ ಏರುತ್ತದೆ ಎಂದು ಪೆಟರ್ರೊಯೋ ನಿರ್ಧರಿಸಿದರು.

ಗುಣಪಡಿಸುವ ಔಷಧಕ್ಕಿಂತ ರೋಗ ಪ್ರತಿಬಂಧಕ ವಿಧಾನವೇ ಉತ್ತಮ ಎಂದು ನಿರ್ಧರಿಸಿಕೊಂಡಿದ್ದ ಡಾ. ಪೆಟರ್ರೊಯೊ ಸೋಂಕು ರಕ್ಷಣಾ ನಿಯಂತ್ರಣ ಕುರಿತೇ ತಮ್ಮ ಪ್ರಯೋಗಗಳನ್ನು ಮುಂದುವರಿಸಿ ಮಲೇರಿಯಾಕ್ಕೆ ಕಾರಣವಾದ ಪರೋಪಜೀವಿಯ ಹೊರಮೈಯ ಪದರಿನ ಕಣಕಣಗಳನ್ನೂ ಪರೀಕ್ಷಿಸಿ ಶೋಧನೆಯ ಫಲಿತಾಂಶವನ್ನು ಜೀವರಸಾಯನ ಶಾಸ್ತ್ರಾನುಸಾರ ಪುನರ್ ನಿರ್ಮಿಸಿದರು. ಈ ಶೋಧನೆಯ ಫಲವೇ ``SPF-೬೬" ಎಂಬ ಹೆಸರಿನ ಮಲೇರಿಯಾ ವ್ಯಾಕ್ಸಿನ್!! ೧೯೮೮ರಲ್ಲಿ ಮಲೇರಿಯಾದ ಸೋಂಕು ತೀವ್ರವಾಗಿರುವ ಸ್ಥಳಗಳಲ್ಲಿ ಸ್ವಯಂಸೇವಕರ ಮೇಲೆ ಈ ವ್ಯಾಕ್ಸಿನ್ನನ್ನು ಪ್ರಯೋಗಿಸಿದಾಗ ಕಂಡುಬಂದ ಪರಿಣಾಮ ತುಂಬಾ ತೃಪ್ತಿಕರವಾಗಿತ್ತು. ಮಲೇರಿಯಾ ವ್ಯಾಕ್ಸಿನ್ ಹಾಕಿಸಿಕೊಂಡ

ವಯಸ್ಕರಲ್ಲಿ ಶೇಕಡಾ ೪೦ರಷ್ಟು ಮಕ್ಕಳಲ್ಲಿ ಶೇಕಡಾ ೭೭ರಷ್ಟು ಜನ ಆರೋಗ್ಯಕ್ಕೆ ಪ್ರತಿಬಂಧಕ ಶಕ್ತಿಯನ್ನು ಪಡೆದಿದ್ದರು.

ಆದರೆ ಬೇಸರದ ಮಾತೆಂದರೆ ೧೯೫೩ರವರೆಗೂ ರೋಗ ನಿರೋಧ ಶಾಸ್ತ್ರದ ವಿಜ್ಞಾನಿಗಳು ಪೆಟರ್ರೋಯೋರ ಈ ಸಂಶೋಧನೆಯನ್ನು ಗಂಭೀರವಾಗಿ ಪರಿಗಣಿಸಲೇ ಇಲ್ಲ. ೧೯೫೩ರಲ್ಲಿ ಸುಪ್ರಸಿದ್ಧ ವೈದ್ಯಕೀಯ ಪತ್ರಿಕೆಯಾದ "ದಿ ಲಾನ್ಸೆಟ್"ನಲ್ಲಿ



ಅವರು ತಮ್ಮ ಸಂಶೋಧನಾ ವಿವರಗಳನ್ನು ಪ್ರಕಟಿಸಿದ ಮೇಲೆ ಪ್ರಪಂಚವು ಕಣ್ತೆರೆದು ಅವರ ಸಂಶೋಧನೆಯನ್ನು ಶ್ಲಾಘಿಸಿತು.

ಪೆಟರ್ರೋಯೊ ತಮ್ಮ ಸಂಶೋಧನೆಯ ಸ್ವಾಮ್ಯಾಧಿಕಾರವನ್ನು ವಿಶ್ವ ಆರೋಗ್ಯ ಸಂಸ್ಥೆಗೆ ಕೊಟ್ಟರೇ ಹೊರತು ಖಾಸಗಿ ಔಷಧ ತಯಾರಕರು ಆ ವ್ಯಾಕ್ಸಿನ್ ತಯಾರಿಕೆಯ ಹಕ್ಕಿಗಾಗಿ ಕೋಟಿಗಟ್ಟಲೆ ಡಾಲರ್‌ನ್ನು ನೀಡುತ್ತೇವೆಂದರೂ ಒಪ್ಪಲಿಲ್ಲ. ಅದು ಅವರ ಹಿರಿಯತನವನ್ನು ಎತ್ತಿ ತೋರಿಸುತ್ತದೆ.

ಕಳೆದ ಅಕ್ಟೋಬರ್ ಕೊನೆಯ ವಾರದಲ್ಲಿ ಜರ್ಮನಿಯ GLRO ಎಂಬ ಸಂಸ್ಥೆಯು ಅವರನ್ನು ಸನ್ಮಾನಿಸಿ ಪ್ರಸಿದ್ಧವಾದ "ರಾಬರ್ಟ್ ಕೋಚ್" ಪ್ರಶಸ್ತಿಯನ್ನು ನೀಡಿದಾಗ ಅವರು "ನನ್ನ ಸಂಶೋಧನೆಯ ಪರಿಣಾಮ ಮತ್ತು ಫಲಗಳು ಈ ಪ್ರಪಂಚಕ್ಕೆ ನನ್ನ ತಾಯ್ನಾಡಾದ ಕೊಲಂಬಿಯಾ ದೇಶದ ಕೊಡುಗೆ" ಎಂದರು.

ನಿಜವಾದ ದೇಶಾಭಿಮಾನವೆನ್ನುವುದು ಇದಕ್ಕೇ.

●●●

## ಇಲ್ಲಿದೆ ನಾಯಿಗಳ ಸ್ವರ್ಗ

ನಮ್ಮಲ್ಲಿ 'ನಾಯಿಪಾಡು' ಎಂದರೆ ಬಹಳ ಕೀಳು ಜೀವನ ಎಂದರ್ಥ. ಆದರೆ ಅಮೇರಿಕದಲ್ಲಿ ನಾಯಿಯಾಗಿ -ಅದರಲ್ಲೂ ಒಳ್ಳೆಯ ಜಾತಿಯ ನಾಯಿಯಾಗಿ- ಹುಟ್ಟುವುದು ಮತ್ತು ಒಳ್ಳೆ ಮನೆ ಸೇರುವುದು (ನಮ್ಮಲ್ಲಿ ಹೆಣ್ಣುಮಕ್ಕಳು ಒಳ್ಳೆಯ ಗಂಡನ ಮನೆ ಸೇರುವಹಾಗೆ) ಬಹಳ ಅದೃಷ್ಟಕರ. ಅವರು ಅದರ ವಿಷಯದಲ್ಲಿ ತೋರಿಸುವ ಪ್ರೀತಿ, ಮಾಡುವ ಆರೈಕೆಗಳನ್ನು ಗಮನಿಸಿದರೆ ಮಕ್ಕಳ ವಿಷಯದಲ್ಲಿ ಸಹ ಅವರು ಅಷ್ಟು ನಿಗಾ ವಹಿಸುವುದಿಲ್ಲವೇನೋ ಎನಿಸುತ್ತದೆ. ಅವುಗಳಿಗಾಗಿ ಅವರು ಪ್ರತ್ಯೇಕವಾದ ಮಲಗುವ ಸ್ಥಳ, ಆಹಾರ, ಹಾಲು, ಬಿಸ್ಕತ್ತು ಹಾಗೂ ಮಾಂಸವನ್ನು ಒದಗಿಸುತ್ತಾರೆ. ಅವುಗಳನ್ನು ಎತ್ತಿಕೊಂಡು ಮುದ್ದಿಸುವುದನ್ನು ನೋಡಿದರೆ ಯಾವ ಮಗುವಿಗಾದರೂ ಅಸೂಯೆಯಾಗದೆ ಇರದು.

ಅಲ್ಲಿ ನಾಯಿಗಳ ಆರೈಕೆ, ಉಸ್ತುವಾರಿ ಹಾಗೂ ಟ್ರೇನಿಂಗ್‌ಗಳಿಗೆ ಪ್ರತ್ಯೇಕ ವ್ಯವಸ್ಥೆಯಿದೆ. ಮನೆಯ ಜನ ಬೇರೆ ಊರಿಗೆ ಹೋದಾಗ ಆ ಅವಧಿಯಲ್ಲಿ ಅವುಗಳನ್ನು ನೋಡಿಕೊಳ್ಳಲು ಹೋಟೆಲು, ಕೆನೆಲ್‌ಗಳೂ ಇವೆ. ಎಷ್ಟೋ ಜನ ಅಮೇರಿಕನ್ನರು ನಾಯಿಗಳಿಗೆ ಜೀವವಿಮೆ ಕೂಡ ಮಾಡಿಸುವುದಿದೆ. ಕೆಲವು ಸಂಸ್ಥೆಗಳಲ್ಲಿ ಅವು 'ಸದಸ್ಯ'ರಾದರೆ ಕಡಿಮೆ ಬೆಲೆಯಲ್ಲಿ ಆಹಾರ, ಔಷಧಿಗಳೂ ದೊರೆಯುತ್ತವೆ.

ಒಮ್ಮೆ ಒಬ್ಬ ಡಾಕ್ಟರು ನಾಯಿಯನ್ನು ಕಾರಿನಲ್ಲಿಯೆ ಬಿಟ್ಟು, ಎಂಜಿನ್ ನಿಲ್ಲಿಸದೆ, ಏರ್ ಕಂಡೀಶನ್ ಇರುವಂತೆ ವ್ಯವಸ್ಥೆಮಾಡಿ, ಬೀಗಹಾಕಿಕೊಂಡು ಏನೋ ಸಾಮಾನು ಕೊಳ್ಳಲು ಒಂದು ಅಂಗಡಿಗೆ ಹೊರಟ. ಅಷ್ಟರಲ್ಲಿ ಅಲ್ಲಿದ್ದ ಒಬ್ಬಾತ ಅವರನ್ನು ಕರೆದು, "ನೀವು ಪ್ರಾಣಿಹಿಂಸೆ ಮಾಡುತ್ತಿದ್ದೀರಿ. ಅದಕ್ಕಾಗಿ ಪೊಲೀಸರಿಗೆ ತಿಳಿಸಬೇಕಾಗುತ್ತದೆ," ಎಂದು ಹೆದರಿಸಿದ. ಡಾಕ್ಟರು ಏನೋ ಸಬೂಬು ಹೇಳಿ ಪಾರಾದ.

ಇಂದು ಇಲ್ಲಿ ಎಂತಹ ಪರಿಸ್ಥಿತಿ ಬಂದಿದೆಯೆಂದರೆ ಗಂಡ ಅಥವಾ ಹೆಂಡತಿ ಮನೆಯಲ್ಲಿಯೆ ಇರಬೇಕಾಗುತ್ತದೆ. ಇಬ್ಬರೂ ಬಹಳ ಹೊತ್ತು ಮನೆ ಬಿಟ್ಟು ಹೋಗುವಹಾಗಿಲ್ಲ. ಮನೆಯ ಜನರೆಲ್ಲ ಸೇರಿ ಬೇರೆ ಊರಿಗೆ ಹೋಗಲು ತೊಂದರೆ. ನಾಯಿಗೇನಾದರೂ ಕಾಯಿಲೆ ಬಂದರೆ ಯಜಮಾನನ ಅವಸ್ಥೆ ನೋಡುವಹಾಗಿಲ್ಲ. "ಅದಕ್ಕೆ ಹುಷಾರಿಲ್ಲ, ಆದ್ದರಿಂದ ನಾನು ಬರಲು ಆಗದು," ಎಂದು ಹೇಳುತ್ತಾರೆ. ಇದನ್ನೆಲ್ಲ ನೋಡಿದರೆ ಅನ್ನಿಸುತ್ತದೆ ಅಮೇರಿಕದಲ್ಲಿ ನಾಯಿಯ ಜನ್ಮವೇ ಶ್ರೇಷ್ಠ ಎಂದು.

- ಎಸ್.ಸಿ. ಶಿವನಂಜಪ್ಪ

ದಶಕಗಳ ಹಿಂದೆ ಹಂಪಿಯಲ್ಲಿ ಜರುಗಿದ ಪುರಂದರದಾಸರ ಆರಾಧನಾ ಉತ್ಸವದಂದು ತುಂಗ ಭದ್ರೆಯ ತಟದಲ್ಲಿ ಕುಳಿತು ದಾಸರ ಪದಗಳನ್ನು ಭಕ್ತಿಪರವಶತೆಯಿಂದ ಹಾಡಿ ಶ್ರೋತೃಗಳನ್ನು ವಿಠಲನ ಸಾನ್ನಿಧ್ಯದತ್ತ ಸೆಳೆದವರು ರುದ್ರಪಟ್ಣದ ಶ್ರೀಕಂಠನ್. ಅವರು ನಡೆದು ಬಂದ ದಾರಿ ಸುದೀರ್ಘವಾದದ್ದು. ಪರಿಣಾಮವಾಗಿ ಅವರ ಶಿಷ್ಯ ವೃಂದವಿಂದು ನಾಡಿನಾದ್ಯಂತ ಹರಡಿಕೊಂಡಿದೆ. ಮದ್ರಾಸ್ ಸಂಗೀತ ಅಕಾಡೆಮಿಯ ಪ್ರತಿಷ್ಠಿತ ಉಪಾಧಿ 'ಸಂಗೀತ ಕಲಾನಿಧಿ' ಹೊಸವರ್ಷ ಕಾಲಿಡುವ ಕಳೆದ ಜನವರಿ ೧ರಂದು ಅವರಿಗೆ ಸಂದಿತು. ಈ ಅಪೂರ್ವ ಗೌರವಕ್ಕೆ ಪಾತ್ರರಾದ್ದರಿಂದ ಅವರು ಮದ್ರಾಸಿನಲ್ಲಿ ನೆರವೇರಿದ ವಾರ್ಷಿಕ ಸಂಗೀತ ಸಮ್ಮೇಳನದ ಅಧ್ಯಕ್ಷತೆ ವಹಿಸುವಂತಾಯಿತು. ಈ ಸನ್ಮಾನವನ್ನು ಪಡೆದ ಪ್ರಪ್ರಥಮ ದಾಕ್ಷಿಣಾತ್ಯ ಶೈಲಿಯ ಕನ್ನಡ ಸಂಗೀತಗಾರರವರು. ಆದರೆ

> "ಕರ್ನಾಟಕ ದಾಸಕೂಟದ ಸಾಂಪ್ರದಾಯಿಕ ರಚನೆಗಳನ್ನು ಕಾಪಾಡುವಲ್ಲಿ ಶ್ರೀಕಂಠನ್ ಅವರ ಕಾಣಿಕೆ ಹಿರಿದು."
>
> - ರಾಮನಾಥ ಜೋಶಿ



## ಸಂಗೀತ ಕಲಾನಿಧಿ

# ಆರ್. ಕೆ. ಶ್ರೀಕಂಠನ್

ಅವರು ತಮ್ಮ ಜೀವನದ ೭೫ನೆಯ ವಯಸ್ಸಿನತನಕ ಕರ್ನಾಟಕ ಸಂಗೀತದ ಈ ಪುರಸ್ಕಾರಕ್ಕಾಗಿ ಕಾಯ ಬೇಕಾದದ್ದು ಮಾತ್ರ ಸಂತಸದ ವಿಷಯವಲ್ಲ.

ಹಾಸನ ಜಿಲ್ಲೆಯ ರುದ್ರಪಟ್ಟದಲ್ಲಿ ೧೯೨೦ ಜನವರಿಯಲ್ಲಿ ಶ್ರೀಕಂಠನ್ ಜನ್ಮವೆತ್ತಿದಾಗ ಮನೆಯ ಉದ್ದಗಲಕ್ಕೆಲ್ಲ ಗಾನಸೌರಭ ಸೂಸುತ್ತಿತ್ತು. ಅವರ ತಂದೆ ಕೃಷ್ಣಶಾಸ್ತ್ರಿಗಳು ಸಂಗೀತ ಕೋವಿದರೂ, ಕನ್ನಡ-ಸಂಸ್ಕೃತಗಳಲ್ಲಿ ಪ್ರಾವೀಣ್ಯವಿದ್ದವರೂ ಆಗಿದ್ದರು. ತಾಯಿ ಸಣ್ಣಕ್ಕ ಒಳ್ಳೆಯ ಹಾಡುಗಾರ್ತಿ. ಅಣ್ಣ ವೆಂಕಟರಾಮಶಾಸ್ತ್ರಿ ಪಿಟೀಲುವಾದಕ ಟಿ. ಚೌಡಯ್ಯನವರ ಶಿಷ್ಯರೆಂದ ಮೇಲೆ ಕೇಳಬೇಕೆ? ಒಟ್ಟಿನಲ್ಲಿ ಹೇಳುವುದಾದರೆ ಶ್ರೀಕಂಠನ್ ಪರಿವಾರದ ಸಂಗೀತಗಾರರ ಬಳಗ ಎಷ್ಟು ದೊಡ್ಡದಿತ್ತೆಂದರೆ ಕೇವಲ ಮನೆ ಮಂದಿಯಿಂದಲೇ ಗಾನಮೇಳವನ್ನು ರಚಿಸಬಹುದಿತ್ತು! ಅವರ ಮೂವರೂ ಸಹೋದರರು ಸಂಗೀತ ಕಲಾವಿದರಾಗಿದ್ದರಿಂದ ಶ್ರೀಕಂಠನ್ ಸಹಜವಾಗಿ ಅದೇ ಕ್ಷೇತ್ರಕ್ಕೆ ಪದಾರ್ಪಣ ಮಾಡುವಂತಾಯಿತು. ಮಹಾನ್ ವಾಗ್ಗೇಯಕಾರ ತ್ಯಾಗರಾಜರ ಶಿಷ್ಯ ಪರಂಪರೆಯವರದು. ಈ ಐತಿಹ್ಯದ ಸರಪಣಿಯಲ್ಲಿ ಪ್ರಸಿದ್ಧ ವಾಗ್ಗೇಯಕಾರ ಮೈಸೂರು ಸದಾಶಿವರಾಯರು ಮತ್ತು ವೀಣಾ ಸುಬ್ಬಣ್ಣ ಪ್ರಮುಖ ಕೊಂಡಿಗಳು. ಇಂತಹ ಭವ್ಯ ಹಿನ್ನೆಲೆಯಿದ್ದೂ ಶ್ರೀಕಂಠನ್ ಸ್ವಪ್ರಯತ್ನದಿಂದಲೇ ಮುಂದೆ ಬರಬೇಕಾದ ಪರಿಸ್ಥಿತಿ ಒದಗಿದ್ದು ವಿಧಿಯ ಆಟ. ಅಣ್ಣ ವೆಂಕಟರಾಮ ಶಾಸ್ತ್ರಿ ಪಿಟೀಲು ಸಂಗತಿಗಾರರಾಗಿ ಮದ್ರಾಸನ್ನು ನೆಲೆ ಮಾಡಿಕೊಂಡಿದ್ದರು. ಅಣ್ಣನ ಮದ್ರಾಸ್ ವಾಸ್ತವ್ಯ ಶ್ರೀಕಂಠನ್ ಅವರಿಗೆ ಕರ್ನಾಟಕ ಸಂಗೀತದ ಭದ್ರವಾದ ಆ ಕೋಟೆಗೆ ಮೇಲಿಂದ ಮೇಲೆ ಹೋಗಿ ಬರುವುದಕ್ಕೆ ಅನುವು ಮಾಡಿಕೊಟ್ಟಿತು. ಈ ಸುಯೋಗ ಕೈಗೂಡಿ ಬಂದದ್ದರಿಂದ ಹಿರಿಯ ಗಾಯಕರ ಬಹಳಷ್ಟು ರಚನೆಗಳನ್ನು ಕಲೆ ಹಾಕುವುದಕ್ಕೆ ಶ್ರೀಕಂಠನ್ ಅವರಿಗೆ ಸಾಧ್ಯವಾಯಿತು. ಆ ಜ್ಯೇಷ್ಠ ವಿದ್ವಾಂಸರ ಹಾಡುಗಳನ್ನು ಕೇಳುತ್ತಿದ್ದಂತೆ ಅವರು ಅದಕ್ಕೆ ಸ್ವರಪ್ರಸ್ತಾರ (notation) ರೂಪದಲ್ಲಿ ಪರಿವರ್ತಿಸಿ ಅಂಟಿಸಿಕೊಳ್ಳುತ್ತಿದ್ದರು. ಈ ಬಗೆಯ ಶಿಷ್ಯವೃತ್ತಿಯಿಂದಾಗಿ ಅಸಂಖ್ಯ ಗೀತೆಗಳನ್ನು ಅಭ್ಯಸಿಸಿ ಗುರುಹಿರಿಯರ ಸಹವಾಸ ಲಾಭ ಮತ್ತೊಮ್ಮೆ ದೊರೆತಾಗ ಅವನ್ನು ಹಾಡಿ ತೋರಿಸಿ ಅವರ ಮೆಚ್ಚುಗೆಯನ್ನು ಗಳಿಸುವಂತಾಯಿತು.

ಸಂಗೀತದ ಸಾಧಕರಾಗಿದ್ದುಕೊಂಡೇ ಶ್ರೀಕಂಠನ್ ಮೈಸೂರು ವಿಶ್ವವಿದ್ಯಾಲಯದಲ್ಲಿ ತಮ್ಮ ಓದನ್ನು ಮುಂದುವರಿಸಿ ಪದವೀಧರರಾದರು. ಕಾಲೇಜಿನಲ್ಲಿ ವಿಶೇಷ ಸಂದರ್ಭಗಳಲ್ಲಿ ಅವರು ಹಾಡಬೇಕಾಗುತ್ತಿತ್ತು. ಅಂತಹ ಕಿರುಗೋಷ್ಠಿಗಳಲ್ಲಿ ಭಾಗವಹಿಸಿದಾಗಲೆಲ್ಲ ಆತ್ಮವಿಶ್ವಾಸ ಹೆಚ್ಚಿ ಹಾಡುಗಾರಿಕೆಯಲ್ಲಿ ಪರಿಪಕ್ವವಾಗುವುದಕ್ಕೆ ಸಹಾಯವಾಗುತ್ತಿತ್ತು.

ಆ ದಿನಗಳಲ್ಲಿ ಮೈಸೂರಿನ ಆಸ್ಥಾನದಲ್ಲಿ ಮಹಾರಾಜರಿಂದ ಗೌರವ ಸನ್ಮಾನಗಳನ್ನು ಪಡೆಯಲು ಕಲಾವಿದರು ದೇಶದ ಮೂಲೆ ಮೂಲೆಗಳಿಂದ ಬಂದು ಮುಗಿಬೀಳುತ್ತಿದ್ದರು. ಆಗಾಗ ಹೆಸರಾಂತ ವೈಣಿಕ ಸುಬ್ಬಣ್ಣನವರಲ್ಲಿ ಕಚೇರಿಗಳು ಏರ್ಪಡುತ್ತಿದ್ದವು. ಆದರೆ ದೌರ್ಭಾಗ್ಯದ ಮಾತೆಂದರೆ ಇವೆಲ್ಲ ಅವಕಾಶಗಳು ಹೊರಗಿನ ರಾಜ್ಯಗಳಿಂದ ಬಂದವರಿಗೇ ಮೀಸಲಿದ್ದಂತೆ! ಸ್ಥಳೀಯ ಕಲಾವಿದರಿಗೆ ಹಿತ್ತಲಗಿಡ ಮದ್ದಲ್ಲವೆಂಬಂತೆ ಪ್ರೋತ್ಸಾಹ ಕ್ವಚಿತ್ತಾಗಿಯಷ್ಟೇ ಲಭಿಸುತ್ತಿತ್ತು. ಅರಮನೆಯ ಧರ್ಮಾರ್ಥದ ಗಾಯನದಿಂದ ಮೈಯುಂಡ ರಸಿಕರು ಕಾಸು ಬಿಚ್ಚುತ್ತಿರಲಿಲ್ಲ. ತಮಗೆ ಸಿಕ್ಕ ಅಪರೂಪದ ಸಂದರ್ಭಗಳಲ್ಲಿ ಸ್ಥಳೀಯ ಕಲಾವಿದರು ಸಾಂಕೇತಿಕ ಸಂಭಾವನೆಯಿಂದ ತೃಪ್ತರಾಗಬೇಕಾಗಿತ್ತು. ಇಲ್ಲವೆ ಅವಾಸ್ತವ ಪ್ರಶಂಸೆಯಿಂದ ಹಿಗ್ಗಿಕೊಳ್ಳಬೇಕಾಗಿತ್ತು. ಹೀಗಾಗಿ ಸಂಗೀತಕ್ಕೇ ಬಾಳನ್ನು ಮುಡುಪಿಟ್ಟವರಿಗೆ ಇನ್ನುಳಿದ ಮಾರ್ಗವೆಂದರೆ ಪಾಠ ಹೇಳುವುದು. ಅದರಲ್ಲಿ ಪರಿಶ್ರಮಕ್ಕೆ ತಕ್ಕಂತೆ ಆದಾಯವೆಲ್ಲಿಂದ ಬಂದೀತು?

ಆರಂಭದ ದಿನಗಳಲ್ಲಿ ಶ್ರೀಕಂಠನ್ ತಮ್ಮ ಎಲ್ಲ ಕಾರ್ಯಕ್ರಮಗಳಿಂದ ಸಂಭಾವನೆಯನ್ನು ನಿರೀಕ್ಷಿಸುತ್ತಿರಲಿಲ್ಲ. ಸುದೈವವಶಾತ್ ಅವರಿಗೆ ಮುಂದೆ ಆಲ್ ಇಂಡಿಯಾ ರೇಡಿಯೋದಲ್ಲಿ ಸೇರ್ಪಡೆಯಾದ ಮೈಸೂರು ಆಕಾಶವಾಣಿಯಲ್ಲಿ ಉದ್ಯೋಗ ಸಿಕ್ಕಿತು. ಕಾಲಕ್ರಮೇಣ ಅವರು ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಾಗ ಅವರ ಭವ್ಯ ಭವಿಷ್ಯಕ್ಕೆ ನಾಂದಿಯನ್ನು ಹಾಡಿತು.

ತಮ್ಮ ಗಾನವೃತ್ತಿಯಲ್ಲಿ ಅವರು ಧರ್ಮಾರ್ಥದ ಕಾರ್ಯಕ್ರಮಕ್ಕೆ ಮೊದಮೊದಲು ಒಪ್ಪಿಕೊಂಡರು. ಈ ಕಾರ್ಯಕ್ರಮಗಳಿಂದಾಗಿ ಅವರಿಗೆ ಅನುಭವ

ಹೆಚ್ಚುತ್ತಿತ್ತು. ಆಶಾಕಿರಣವೆಂಬಂತೆ ಕಿರಿಯ ವಯಸ್ಸಿನಲ್ಲಿಯೇ, ಅಂದರೆ ೧೯೫೨ರಷ್ಟು ಹಿಂದೆಯೆ 'ಗಾನಭಾಸ್ಕರ' ಪ್ರಶಸ್ತಿ ಅವರನ್ನು ಹುಡುಕಿಕೊಂಡು ಬಂತು. ಈ ಗೌರವವು ಉಚ್ಚಮಟ್ಟದ ಕರ್ನಾಟಕ ಗಾಯಕರಾದ ಟೈಗರ್ ವರದಾಚಾರ್ಯರ ಹಸ್ತದಲ್ಲಿ ಕೊಡಲ್ಪಟ್ಟಿತು. ಇಂತಹ ಇನ್ನೊಂದು ಪ್ರಶಸ್ತಿಗಾಗಿ ಅವರು ಇಪ್ಪತ್ತು ವರ್ಷಗಳ ಕಾಲ ಕಾಯಬೇಕಾಯಿತು. ಅವರಿಗೆ ಲಭಿಸಿದ ಪ್ರಶಸ್ತಿಗಳಲ್ಲಿ ಮುಖ್ಯವಾದವುಗಳೆಂದರೆ ಶ್ರೀ ಪಾರ್ಥಸಾರಥಿ ಸಭೆ ಹಾಗೂ ಸಂಗೀತ ಪ್ರೇಮಿಗಳ ಗಾನ ಸಭೆ, ಬೆಂಗಳೂರು ಇವುಗಳ 'ಕರ್ನಾಟಕ ಸಂಗೀತರತ್ನ', ಸಂಗೀತ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿ, ತಿರುವನಂತಪುರದ 'ಗಾಯಕ ಶಿಖಾಮಣಿ' ಬಿರುದು, ರಾಷ್ಟ್ರೀಯ ಮಟ್ಟದ ಟಿ. ಚೌಡಯ್ಯ ಪುರಸ್ಕಾರ ಹಾಗೂ ಕರ್ನಾಟಕ ಸರ್ಕಾರದ ಕರ್ನಾಟಕ ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿ.

ಶ್ರೀಕಂಠನ್ ಅವರ ವೈಶಿಷ್ಟ್ಯವೆಂದರೆ ಮುಂಚಿತವಾಗಿ ಅವರು ಗಾಯನದ ಚೌಕಟ್ಟನ್ನು ಹಾಕಿಕೊಂಡರೂ ಅದಕ್ಕೇ ಅಂಟಿಕೊಳ್ಳದಂಥ ಮನೋಧರ್ಮ; ಸಮೃದ್ಧವಾದ ಕಂಠದ ಕಸುವುಳ್ಳ ಹಾಡುಗಾರಿಕೆ, ಶ್ರುತಿ-ಲಯ ಶುದ್ಧಿ, ಅಪಾರ ಕೃತಿಗಳ ಸಂಗ್ರಹ, ಪ್ರಮಾಣಬದ್ಧ ಆಲಾಪನೆ, ತೂಕ ದಪ್ಪದಂತಹ ಗಮಕ ಮತ್ತು ಕೀಳು ಅಭಿರುಚಿಯವರನ್ನು ಮೆಚ್ಚಿಸುವ ಗೀಳಿಗೆ ಬೀಳದಿರುವುದು. ಇನ್ನೊಂದು ಹಿರಿಮೆಯೆಂದರೆ ಕಚೇರಿಯಲ್ಲಿ ಪುರಂದರದಾಸರಂಥ ಒಬ್ಬರೇ ಒಬ್ಬ ಗೀತಕಾರರ ಗೀತಗಳನ್ನು ಉದ್ದಕ್ಕೂ ಹಾಡುವುದು. ದಾಸರಪದಗಳನ್ನು ಕರ್ನಾಟಕ ಶೈಲಿಯಲ್ಲಿ ಹಾಡುವುದರ ಬಗೆಗೆ ಅವರು ಒತ್ತುಕೊಡುತ್ತಾರೆ. ಸಂಗೀತ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಅಪಾರ ಯಶಸ್ಸನ್ನು ಪಡೆದು ತಮ್ಮ ಅಪೂರ್ವ ಪ್ರತಿಭೆಯಿಂದ ಜನಮಾನಸದ ಮನ್ನಣೆ ಗಳಿಸಿದ ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆಂದು ಪರಿಗಣಿಸಲ್ಪಡುತ್ತಿರುವಾಗ ಅವರ ಹಾಡುಗಳನ್ನು ಇನ್ನೊಂದು ಪದ್ಧತಿಯಲ್ಲಿ ಹಾಡುವುದರ ಔಚಿತ್ಯವನ್ನು ಶ್ರೀಕಂಠನ್ ಪ್ರಶ್ನಿಸುತ್ತಾರೆ. ಹರಿದಾಸರ ಕೀರ್ತನೆಗಳಲ್ಲದೆ ಬಸವೇಶ್ವರ, ಅಕ್ಕಮಹಾದೇವಿ, ಅಲ್ಲಮಪ್ರಭುಗಳ ವಚನಗಳಿಗೂ ರಾಗವನ್ನು ಹೊಂದಿಸಿ ಅವರು ಸಭೆಗಳಲ್ಲಿ ಹಾಡುತ್ತಾರೆ. ಮಾಸ್ತಿಯವರ 'ಬಿನ್ನಹ'ದಿಂದ ಮೊದಲ್ಗೊಂಡು ಬೇಂದ್ರೆಯವರ ಕವನಗಳವರೆಗೆ ಅನೇಕ ಕವನಗಳಿಗೆ ಅವರು ರಾಗವನ್ನು ಕೂಡಿಸಿದ್ದಾರೆ. ಅವರ ಸಂಗೀತ ರೂಪಕಗಳು ಆಕಾಶವಾಣಿಯಿಂದ ಹೊರಹೊಮ್ಮಿವೆ.

"ಕರ್ನಾಟಕ ದಾಸಕೂಟದ ಸಾಂಪ್ರದಾಯಿಕ ರಚನೆಗಳನ್ನು ಕಾಪಾಡುವಲ್ಲಿ ಶ್ರೀಕಂಠನ್ ಅವರ ಕಾಣಿಕೆ ಹಿರಿದು" ಎಂದು ಶ್ರೇಷ್ಠ ವೀಣಾವಾದಕ

ಮೈಸೂರು ದೊರೆಸ್ವಾಮಿ ಅಯ್ಯಂಗಾರರು ನಿರ್ಮತ್ಸರವಾಗಿ ನುಡಿಯುತ್ತಾರೆ.

ಡಾ. ನರಸಿಂಹಯ್ಯ ಬೆಂಗಳೂರು ವಿಶ್ವವಿದ್ಯಾಲಯದ ವೈಸ್ ಚಾನ್ಸಲರ್ ಆಗಿದ್ದ ಕಾಲ. ಸ್ನಾತಕೋತ್ತರ ಸಂಗೀತ ವರ್ಗವನ್ನು ಆರಂಭಿಸುವುದಾಗಿ ಅವರು ನಿಶ್ಚಯಿಸಿದರು. ವಿಶ್ವವಿದ್ಯಾಲಯದ ಸಲಹಾ ಮಂಡಳಿಯು ಶ್ರೀಕಂಠನ್ ಅವರು ಸಂಗೀತಗಾರರಷ್ಟೇ ಅಲ್ಲದೆ ಪದವೀಧರರೂ ಆಗಿರುವುದರಿಂದ ಅವರು ಅತ್ಯಂತ ಅರ್ಹ ವ್ಯಕ್ತಿಯೆಂದು ಸೂಚಿಸಿತು. ಆದರೆ ಅಧಿಕಾರಶಾಹಿಯ ಅಡೆತಡೆಗಳಿಂದಾಗಿ ಇದು ಕೈಗೂಡಲಿಲ್ಲ, ಶ್ರೀಕಂಠನ್ ಈ ಕುರಿತು ಅನ್ಯರಂತೆ ತಲೆಕೆಡಿಸಿಕೊಳ್ಳಲಿಲ್ಲ. ವಿಶ್ವವಿದ್ಯಾಲಯಕ್ಕೇ ಇದರಿಂದ ನಷ್ಟವಾಯಿತು.

ಶ್ರೀಕಂಠನ್ ಹಲವು ಬಾರಿ ವಿದೇಶಗಳಲ್ಲಿ ಕರ್ನಾಟಕ ಸಂಗೀತದ ಕಚೇರಿಗಳನ್ನು ನಡೆಸಿದ್ದಲ್ಲದೆ ಕೆಲವು ಕಾಲ ನ್ಯೂಯಾರ್ಕ್ ಯುನಿವರ್ಸಿಟಿಯ ಪೌರಸ್ತ್ಯ ವಿಭಾಗದ ಸಂದರ್ಶಕ ಪ್ರಾಚಾರ್ಯರಾಗಿಯೂ ದುಡಿದದ್ದುಂಟು. ಬೆಂಗಳೂರಿನ ನಾಗರಿಕರು ಶಾಸ್ತ್ರೀಯ ಸಂಗೀತ ಹಾಗೂ ಪಾಪ್ ನಡುವಿನ ಅಂತರವನ್ನು ತಿಳಿದಿರಬೇಕೆನ್ನುತ್ತಾರೆ ಶ್ರೀಕಂಠನ್. ಈ ಸಂಗೀತ ಕಲಾನಿಧಿಯ ಗಾಯನವನ್ನು ಕೇಳುತ್ತಲೇ ಇರುತ್ತೇವಲ್ಲ ಎಂದು ಅನ್ಯ ರಾಜ್ಯಗಳ ಎರಡನೆಯ ದರ್ಜೆಯ ಕಲಾವಿದರನ್ನು ಮೆಚ್ಚುವ ರಸಿಕರಿಗೂ ನಮ್ಮಲ್ಲಿ ಕೊರತೆಯಿಲ್ಲ. ಅದನ್ನು ಕೇಳಿದಾಗ "ಅತಿಥಿ ಸತ್ಕಾರಕ್ಕೆ ಹೆಸರಾದ ಕನ್ನಡಿಗರಿಗೆ ಇದು ಸಹಜವೇ" ಎಂದು ಶ್ರೀಕಂಠನ್ ನಗುತ್ತಾರೆ. 

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೋ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# 'ನಾನು ಸರಕಾರದ ವಿರುದ್ಧ ಹೋರಾಡಿದೆ'

- ಹೋಬರ್ಡ್ ಬರ್ಡ್

ಪ್ರಸ್ತುತ ಪಡಿಸಿದವರು: ಶ್ರೀಕಾಂತ ಮಳಗಿ

'ಸಾನ್ ಜುವಾನ್ ನ್ಯೂಜ್' ಪ್ರಾರಂಭಿಸಿ ಇನ್ನೂ ಒಂದೆರಡು ವಾರಗಳಾಗಿದ್ದವೋ ಇಲ್ಲವೋ, ಒಂದು ದಿನ ಹರಕು ಬಟ್ಟೆ ಧರಿಸಿದ ಇಬ್ಬರು ಹೆದರುತ್ತಾ ಹೆದರುತ್ತಾ ನನ್ನ ಬಳಿ ಬಂದು, "ಹೋಬರ್ಡ್ ಬರ್ಡ್ ಇದ್ದಾರೆಯೇ?" ಎಂದು ಕೇಳಿದರು.

"ನಾನೇ ಹೋಬರ್ಡ್ ಬರ್ಡ್. ಏನು ಬೇಕಾಗಿತ್ತು?" ಎಂದೆ.

"ರಾಷ್ಟ್ರಾಧ್ಯಕ್ಷರಾದ ಮುಂಡೋಜ್ ರಿವೆರಾ ನನ್ನ ತಮ್ಮನನ್ನು ಜೈಲಿನಲ್ಲಿ ಹಾಕಿದ್ದಾರೆ," ಎಂದ ಅವರಲ್ಲೊಬ್ಬ.

"ಏನು ಮಾಡಿದ್ದನಾತ?" ನಾನು ಪ್ರಶ್ನಿಸಿದೆ.

"ಗೊತ್ತಿಲ್ಲ. ಅದನ್ನು ಯಾರೂ ಬಾಯಿಬಿಡುತ್ತಿಲ್ಲ - ಜೈಲಿನ ಅಧಿಕಾರಿಗಳು ಕೂಡ," ಎಂದನವ ಉದ್ವಿಗ್ನನಾಗಿ.

"ಸರಿ. ಇಂಥಾದ್ದನ್ನೆಲ್ಲಾ ನನಗೆ ತಡೆದುಕೊಳ್ಳಲಿಕ್ಕಾಗುವುದಿಲ್ಲ. ಆ ಬಗ್ಗೆ ಏನು ಮಾಡಬೇಕೆಂಬುದನ್ನು ಯೋಚಿಸುವಾ, ಆದರೆ ನೀವೇನೂ ಚಿಂತಿಸಬೇಡಿ." ಎಂದು ಹೇಳಿ ನಾನು ಅವರನ್ನು ಮರಳಿ ಕಳಿಸಿದೆ.

ಸ್ಪಾನಿಷ್-ಅಮೆರಿಕನ್ ಯುದ್ಧ ಆದೇಆಗ ಮುಗಿದಿತ್ತು. ಪ್ಯೂರ್ಟೋರಿಕೋ ಸ್ಪೇನಿನ ದಬ್ಬಾಳಿಕೆಯಿಂದ ಮುಕ್ತವಾಗಿ ಸ್ವತಂತ್ರವಾಗಿರುತ್ತದೆಂದು ನಾನಲ್ಲಿಗೆ ಹೋದರೆ ವಸ್ತುಸ್ಥಿತಿ ಬೇರೆಯೆ ಆಗಿತ್ತು. ಸ್ಪೇನಿನ ಆಡಳಿತ ಅಲ್ಲಿರಲಿಲ್ಲ ನಿಜ, ಆದರೆ ಆಡಳಿತದ ಪ್ರತಿಯೊಂದು ಘಟ್ಟದಲ್ಲಿಯೂ ಸ್ಪೇನಿನ ಜನರೇ ತುಂಬಿಕೊಂಡಿದ್ದರು. ಮತ್ತು ಇಂಥಾ ಜನರನ್ನು ಒಳಗೊಂಡ ಕೈಗೊಂಬೆ ಸರಕಾರವನ್ನು ಅಲ್ಲಿಟ್ಟುಕೊಳ್ಳುವುದರಲ್ಲಿಯೆ ತನ್ನ ಹಿತಾಸಕ್ತಿ ಅಡಗಿದೆಯೆಂದು ಅಮೇರಿಕ ಭಾವಿಸಿದಂತಿತ್ತು.

ನನಗಾಗ ಬರಿ ಇಪ್ಪತ್ತೈದು ವರ್ಷ. ಲಾ ಕಾಲೇಜನ್ನು ಮುಗಿಸಿದವನೇ ಸೀದಾ ಪ್ಯೂರ್ಟೋರಿಕೋಕ್ಕೇ ಬಂದಿದ್ದೆ. ಅನ್ಯಾಯವನ್ನೆಂದೂ ಸಹಿಸಬಾರದು, ಅನ್ಯಾಯ ಎಲ್ಲಿ ನಡೆದರೂ ಸರಿ, ಯಾರಿಂದ ನಡೆದರೂ ಸರಿ, ಅದನ್ನು ಸದೆಬಡಿದು ಅನ್ಯಾಯಕ್ಕೊಳಗಾದವರಿಗೆ ನ್ಯಾಯ ದೊರಕಿಸಲೇಬೇಕು ಎಂಬ ವಿಚಾರವನ್ನು ತಲೆತುಂಬಾ ತುಂಬಿಕೊಂಡಿದ್ದೆ. ಮುಂಡೋಜ್ ರಿವೆರಾ ಪ್ಯೂರ್ಟೋರಿಕೋದವರಾದರೂ ಅಂದಿನ ಪರಿಸ್ಥಿತಿಯಲ್ಲಿ ಆಗ ಅಲ್ಲಿ ಜಾರಿಯಲ್ಲಿದ್ದ ಸ್ಪಾನಿಷ್ ಕಾಯದೆಗಳ ಪ್ರಕಾರವೇ ನಡೆಯಬೇಕಾಗಿತ್ತು. ಆದರೆ ಬಂಧನಕ್ಕೊಳಗಾದವನಿಗೂ ಬಂಧನದ ಕಾರಣವನ್ನೇ ಹೇಳುವುದಿಲ್ಲ ಎಂದರೆ? ಛೇ! ಛೇ! ಇಂಥದಕ್ಕೆಲ್ಲ ಅವಕಾಶ ಕೊಡಬಾರದು ಎಂದುಕೊಂಡು ಸೀದಾ ರಾಷ್ಟ್ರಪತಿ ಭವನಕ್ಕೇ ಹೋಗಿ, ಮುಂಡೋಜರನ್ನು ಭೇಟಿಯಾಗಿ, "ಸ್ಯಾಂಟಿಯಾಗೋ ಇಗ್ಲೇಶಿಯಾಸ್‌ನನ್ನು ಬಂಧಿಸಿದ್ದೇಕೆ?" ಎಂದು ಕೇಳಿದಾಗ ಅವರು "ಅಂಥಾ ಅಪಾಯಕರ ವ್ಯಕ್ತಿಯನ್ನು ಜೈಲಿನಲ್ಲಿಡುವುದೇ ಒಳ್ಳೆಯದು," ಎಂದರಾದರೂ ಎಷ್ಟು ಸುತ್ತಿಬಳಸಿ ಕೇಳಿದರೂ ಕಾರಣವನ್ನು ಹೇಳಲೇ ಇಲ್ಲ.

ಸೀದಾ ಆಫೀಸಿಗೆ ಬಂದವನೇ ಒಂದು ಹಾಳೆಯ ಮೇಲೆ ಪೆನ್ಸಿಲ್ಲಿನಿಂದ ಹೇಬಿಯಸ್ ಕಾರ್ಪಸ್ ರಿಟ್

ಗೀಚಿ ಅಲ್ಲಿನ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಲ್ಲಿಗೆ ಹೋದೆ. ಮಧ್ಯ ವಯಸ್ಸು ದಾಟಿದ ಮನುಷ್ಯ. ಕಲ್ಲಿಮೀಸೆ ಬಿಳಿಯಾಗಿತ್ತು. ನೋಡಲು ತುಂಬಾ ಓದಿಕೊಂಡಂತೆ ಕಾಣುತ್ತಿದ್ದರು. ಅರ್ಜಿಯನ್ನೋದಿ ಒಂದು ಕ್ಷಣ ಕಣ್ಣು ಮುಚ್ಚಿ ಏನನ್ನೋ ಧ್ಯಾನಿಸಿದವರಂತೆ ಮಾಡಿ, "ಮಿಸ್ಟರ್ ಬರ್ಡ್, ಹೇಬಿಯಸ್ ಕಾರ್ಪಸ್ ರಿಟ್‌ಗೆ ಸಹಿಹಾಕದಿದ್ದರೆ ನ್ಯಾಯಾಧೀಶರನ್ನು ಶಿಕ್ಷಿಸಬೇಕು; ದೊರೆಯೂ ಹೀಗೆ ವರ್ತಿಸಿದರೆ ಆ ದೊರೆಯ ತಲೆಯನ್ನೇ ಕಡಿಯಬೇಕು ಎಂದು ನೀವು ನಿಮ್ಮ ಪೇಪರಿನಲ್ಲಿ ಬರೆದಹಾಗಿತ್ತಲ್ಲ, ಹೌದೆ?" ಎಂದರು.

"ಎಸ್ ಯುವರ್ ಆನರ್," ಎಂದೆ.

"ಹಾಗಾದರೆ ನಾನು ಸಹಿ ಹಾಕುತ್ತೇನೆ," ಎಂದವರೆ ಸಹಿ ಮಾಡಿದರು. ನಮ್ಮಲ್ಲಾದರೆ ಇದು ಸುದ್ದಿಯೇ ಆಗುವುದಿಲ್ಲ. ಆದರೆ ಇಡೀ ಪ್ಯೂರ್ಟೋರಿಕೋದಲ್ಲಿ ಯಾವ ನ್ಯಾಯಾಧೀಶನೂ ಆ ವರೆಗೆ ಇಂತಹ ಆಜ್ಞೆ ಹೊರಡಿಸಿದ್ದಿಲ್ಲವಾದ್ದರಿಂದ ದೇಶದ ತುಂಬಾ ಇದರ ಸುದ್ದಿಯೇ ಸುದ್ದಿ.

ಸರಕಾರ ನಿರ್ವಾಹವಿಲ್ಲದೆ ಸ್ಯಾಂಟಿಯಾಗೋ ಇಗ್ಲೇಶಿಯಾಸ್‌ನನ್ನು ಬಿಡುಗಡೆ ಮಾಡಲೇಬೇಕಾಯಿತು. ಶ್ರಮಿಕರಿಗಾಗಿ ಕೂಲಿ ಹೆಚ್ಚಿಸಲು ಪ್ರಯತ್ನಿಸುತ್ತಿದ್ದುದರಿಂದ ಆತನನ್ನು ಬಂಧಿಸಲಾಗಿತ್ತೆಂಬ ಸುದ್ದಿಯೂ ಅವನ ಬಿಡುಗಡೆಯೊಂದಿಗೇ ಹೊರಬಿತ್ತು. "ಹೌದು, ನಾನು ಅದನ್ನೇ ಮಾಡುತ್ತಿದ್ದೆ. ಇನ್ನು ಒಂದಲ್ಲ ನೂರು ಸಲ ಬಂಧಿಸಿದರೂ ನಾನು ಹಾಗೆಯೇ ಮಾಡುವವ," ಎಂದು ಇಗ್ಲೇಶಿಯಾಸ್ ಹೇಳಿದ.

ಮುಂದೆ ಆತ ಕಾರ್ಮಿಕರಿಗಾಗಿ ಬಹುವಾಗಿ ಶ್ರಮಿಸಿ ಅವರ ಜೀವನಮಟ್ಟ ಸುಧಾರಿಸಲು ಕಾರಣನಾದ. ನಂತರದ ಕಾಲದಲ್ಲಿ ಅವನ ನಿಃಸ್ವಾರ್ಥ ಸೇವೆಗಾಗಿ ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳು ಅವನನ್ನು ಹುಡುಕಿಕೊಂಡು ಬಂದವೆನ್ನುವ ಮಾತು ಬೇರೆ. ಆದರೆ ಅಂದು ದೊರಕಿದ ಜಯ ಅದೇ ಆಗ ಜನ್ಮತಾಳಿದ ನನ್ನ ಪತ್ರಿಕೆಗೂ ದೊರೆತ ಮೊದಲ ಜಯ ಎನ್ನುವುದು ಬಹುಶಃ ಯಾರ ಗಮನಕ್ಕೂ ಆಗ ಬರಲೇ ಇಲ್ಲ.

ಅಂದಿನ ದಿನಗಳಲ್ಲಿ ಪೇಪರ್ ಹೊರಡಿಸುವುದು ಅಷ್ಟು ಸುಲಭವಾಗಿರಲಿಲ್ಲ. ಹೊರಗಿನಿಂದ ತಾಜಾ ಸುದ್ದಿಗಳು ಸಕಾಲದಲ್ಲಿ ಬಂದು ಮುಟ್ಟುತ್ತಿದ್ದಿಲ್ಲ. ಕೇಬಲ್ ಮೂಲಕ ನ್ಯೂಯಾರ್ಕಿನಿಂದ ಸುದ್ದಿಯನ್ನು ತರಿಸಿಕೊಳ್ಳಬೇಕೆಂದರೆ ಪ್ರತಿ ಶಬ್ದಕ್ಕೆ ಸರಿಸುಮಾರು ಒಂದೂವರೆ ಡಾಲರಿನಷ್ಟು ಖರ್ಚು ಬರುತ್ತಿತ್ತು. ಅದು ಬೇಡವೆಂದರೆ ಸ್ವಲ್ಪ ಹಳೆಯದಾದರೂ ಸರಿ, ಹತ್ತಿರದ ಸೇಂಟ್ ಥಾಮಸ್ ದ್ವೀಪದಿಂದ ತರಿಸಿಕೊಳ್ಳಬೇಕು. ಅದಕ್ಕಾದರೂ ಪ್ರತಿಶಬ್ದಕ್ಕೆ ಏನಿಲ್ಲೆಂದರೂ ಮೂವತ್ತೈದು ಸೆಂಟುಗಳನ್ನು ತೆತ್ತಬೇಕು. ಇಷ್ಟು ವೆಚ್ಚವನ್ನು ಭರಿಸುವ ಶಕ್ತಿ ನನಗಾಗಲಿ ಅಲ್ಲಿನ ಇತರ ಹದಿಮೂರು ಪತ್ರಿಕೆಗಳಿಗಾಗಲಿ ಇರಲಿಲ್ಲ.

ನಾವಿರುತ್ತಿದ್ದಲ್ಲಿಂದ ಸೇಂಟ್ ಥಾಮಸ್ ನಲ್ವತ್ತು ಮೈಲು ದೂರವಿದೆ. ಅಲ್ಲಿನ 'ವೆಸ್ಟ್ ಇಂಡಿಯನ್ ಕೇಬಲ್ ಕಂಪನಿ'ಗೆ ದಿನಾಲೂ 'ಲಂಡನ್ ಟೈಮ್ಸ್'ನಿಂದ ಮುನ್ನೂರು ಶಬ್ದಗಳ ಸುದ್ದಿಸಂಗ್ರಹ ಬರುತ್ತಿತ್ತು. ಅದನ್ನು ಅಲ್ಲಿ ಯಾರು ಬೇಕಾದರೂ ಪುಕ್ಕಟೆಯಾಗಿ ಓದಬಹುದಾಗಿತ್ತು. ಆದರೆ ತಕ್ಷಣ ತಲಪುವಹಾಗೆ ಸುದ್ದಿಯನ್ನು ನಮ್ಮ ಆಫೀಸಿಗೆ ರವಾನಿಸುವುದು ಹೇಗೆ? ಎಂಬ ಪ್ರಶ್ನೆ ಮುಂದೆ ಬಂತು.

ಅಂಥಾ ಸಮಯದಲ್ಲಿ ಅಮೇರಿಕದ ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದ ಹಿತೈಷಿಯೊಬ್ಬ ನೆರವಿಗೆ ಬಂದು ಹೀಲಿಯೋಗ್ರಾಫುಗಳನ್ನು ದಾನವಾಗಿ ಕೊಟ್ಟ. ಒಂದನ್ನು ಸೇಂಟ್ ಥಾಮಸಿನ ಪರ್ವತಾಗ್ರದ ಮೇಲೂ ಇನ್ನೊಂದನ್ನು ಹದಿನಾಲ್ಕು ಮೈಲು ದೂರವಿರುವ ಕ್ಯುಲೆಬ್ರಾ ನಡುಗಡ್ಡೆಯಲ್ಲೂ ಸ್ಥಾಪಿಸಿದೆವು. ಕ್ಯುಲೆಬ್ರಾದಿಂದ ಹನ್ನೆರಡು ಮೈಲು ದೂರದಲ್ಲಿ ವೀಕ್ವೆ. ವೀಕ್ವೆಯಿಂದ ನಾವಿರುತ್ತಿದ್ದ ಸ್ಯಾನ್ ಜುವಾನ್ ದೂರವೇನೂ ಇರಲಿಲ್ಲ. ವೀಕ್ವೆಯಲ್ಲೂ ಒಂದು ಹೀಲಿಯೋಗ್ರಾಫನ್ನು ಸ್ಥಾಪಿಸಿ ಅಲ್ಲಿಗೆ ಬಂದು ತಲುಪುವ ಸುದ್ದಿಗಳನ್ನು ಟೆಲಿಗ್ರಾಫಿನ ಮೂಲಕ ತರಿಸಿಕೊಳ್ಳಲು ನಿಶ್ಚಯಿಸಿದೆವು. ಕೇಬಲ್ ಕಂಪನಿಗೆ ಬರುತ್ತಿದ್ದ ಸುದ್ದಿಯನ್ನು ಮೋರ್ಸ್ ಸಂಕೇತದ ಮೂಲಕ ಪರ್ವತಾಗ್ರದಲ್ಲಿದ್ದ ಹೀಲಿಯೋಗ್ರಾಫಿಗೂ ಅಲ್ಲಿಂದ ಕ್ಯುಲೆಬ್ರಾಕ್ಕೂ ಕ್ಯುಲೆಬ್ರಾದಿಂದ ವೀಕ್ವೆಗೂ ತಲುಪಿ ಅಲ್ಲಿಂದ ಟೆಲಿಗ್ರಾಫ್ ಮೂಲಕ ನಮಗೆ ದಿನಾಲು ಸುದ್ದಿಗಳು ತಲುಪತೊಡಗಿದವು.

ಲಂಡನ್, ನ್ಯೂಯಾರ್ಕ್ ಹಾಗೂ ದೂರದ

ಟೋಕಿಯೋದ ಸಹ ಸುದ್ದಿಗಳು ಆಗಿಂದಾಗ ಪ್ರಕಟವಾಗತೊಡಗಿದಾಗ ಜನರಿಗೆ ಆಶ್ಚರ್ಯವೇ ಆಶ್ಚರ್ಯ. ಪತ್ರಿಕೆಯ ಪ್ರಸಾರ ದಿನದಿನಕ್ಕೂ ಏರ ತೊಡಗಿತು. ಪ್ರತಿಸ್ಪರ್ಧಿ ಪತ್ರಿಕೆಗಳ ಪ್ರಸಾರ ಇಳಿಯತೊಡಗಿತು. ಅಷ್ಟು ದೂರದ ಸುದ್ದಿಗಳು ಇಷ್ಟು ಬೇಗ ತಲುಪಲು ಸಾಧ್ಯವೇ ಇಲ್ಲ. ಸುದ್ದಿಗಳೆಲ್ಲ ಹಸೀ ಸುಳ್ಳು. ಬರೆದದ್ದೆಲ್ಲ ಎಷ್ಟುಮಟ್ಟಿಗೆ ಸರಿಯಾಗಿವೆಯೆನ್ನುವುದನ್ನು ತಡವಾಗಿಯಾದರೂ ಪ್ಯೂರ್ಟೋರಿಕೋ ತಲುಪುವ ಅಮೇರಿಕನ್ ಪೇಪರುಗಳನ್ನೋದಿ ನಿರ್ಧರಿಸಬೇಕು ಎಂದು ಉಳಿದ ಪತ್ರಿಕೆಗಳು ಹುಯಿಲೆಬ್ಬಿಸಿದವು. ಜನರಿಗೂ ಸಂಶಯ ಬಂದು ಅಮೇರಿಕನ್ ಪೇಪರುಗಳೊಡನೆ ಹೋಲಿಸಿ ನೋಡಿದಾಗ ನಮ್ಮ ಪತ್ರಿಕೆಯಲ್ಲಿ ಬಂದದ್ದು ನಿಜವೆಂಬುದು ದೃಢಪಟ್ಟಿತು.

ಪತ್ರಿಕೆಯ ಪ್ರಸಾರ ದಿನೆ ದಿನೆ ಏರುತ್ತಿದ್ದುದರಿಂದ ದೇಶೀ ಸುದ್ದಿಗಳಿಗೇನೂ ಕೊರತೆಯಿರಲಿಲ್ಲ. ರಾಜಕಾರಣಿಗಳೂ ತಮ್ಮದೇ ಆದ ಉದ್ದೇಶಗಳಿಗಾಗಿ 'ಒಳಗಿನ' ಬಿಸಿಬಿಸಿ ಸುದ್ದಿಗಳನ್ನು ಒದಗಿಸುತ್ತಿದ್ದರು.

ಒಂದು ದಿನ ಅತೃಪ್ತ ರಾಜಕಾರಣಿಯೊಬ್ಬ ಬಂದು ಆ ನಗರದ ಮೇಯರ್ ಅಪರಾಧೀ ಹಿನ್ನೆಲೆಯುಳ್ಳ ಹನ್ನೆರಡು ಜನ ಗೂಂಡಾಗಳನ್ನು ಸಾಕಿದ್ದಾನೆಂದೂ ಅವರಿಗಾಗಿ ಪ್ರತಿತಿಂಗಳೂ ಮಹಾನಗರಸಭೆಯಿಂದ ಸಂಬಳವನ್ನು ಮನೆಯವರೆಗೆ ಒಯ್ದು ಮುಟ್ಟಿಸುತ್ತಿದ್ದುದಾಗಿಯೂ ಪುರಾವೆಸಹಿತ ಸುದ್ದಿಕೊಟ್ಟ. ಈ ಸುದ್ದಿಯನ್ನು ಹೊತ್ತ ಪತ್ರಿಕೆಯ ಪ್ರತಿಗಳು ಪೇಟೆಯಲ್ಲಿ ಮಾರಾಟವಾಗುತ್ತಿದ್ದಂತೆಯೇ ಪೇದೆಯೊಬ್ಬ ವಾರಂಟ್ ಸಹಿತವಾಗಿ ನನ್ನನ್ನು ಬಂಧಿಸಲು ಬಂದ. ಆಗಿಂದಾಗ್ಗೆ ಒಂದು ಹೇಬಿಯಸ್ ಕಾರ್ಪಸ್ ರಿಟ್ ಗೀಚಿ, ಜಾಮೀನುಕೊಟ್ಟು ಪಾರಾದೆ. ಆಪಾದನೆ ನಿಜವಿದ್ದರೂ ಸಾರ್ವಜನಿಕ ಸ್ಥಾನಗಳಲ್ಲಿರುವವರ ಬಗ್ಗೆ ಆ ಕುರಿತು ಬರೆದರೆ ಅವರನ್ನು ಬಂಧಿಸಬಹುದೆಂಬ ಕಾನೂನು ಇರುವುದು ಗೊತ್ತಾದದ್ದು ಆಗಲೆ. ಈ ಕುರಿತು ವಿವರವಾದ ವರದಿಯನ್ನು ಪತ್ರಿಕೆಯಲ್ಲಿ ಪ್ರಕಟಿಸಿದಾಗ ಪ್ಯೂರ್ಟೋರಿಕೋದ ತುಂಬ ಗೊಂದಲವೆದ್ದಿತು. ಸಾರ್ವಜನಿಕರಿಂದ ಬಂದ ಒತ್ತಡವನ್ನು ತಡೆಯಲಾಗದೆ ಸರಕಾರ ವಿಚಾರಣಾ ಆಯೋಗವನ್ನು ನಿಯಮಿಸಬೇಕಾಯಿತು. ಕೊನೆಗೆ ಆ ಮೇಯರ್



"ನೀನು ಹೇಳಿದಂತೆ 'ಅಸೆಂಬ್ಲಿ'ಯ ಆಟ ಆಡೋದೇನೋ ಸರಿ.. ಆದ್ರೆ ಸ್ಪೀಕರ್ ಆಗೋಕೆ ಒಬ್ರೂ ತಯಾರಿಲ್ಲ.."

ನಿರ್ವಾಹವಿಲ್ಲದೆ ತನ್ನ ಸ್ಥಾನಕ್ಕೆ ರಾಜೀನಾಮೆಕೊಟ್ಟ.

ಪ್ಯೂರ್ಟೋರಿಕೋದಲ್ಲಿದ್ದಾಗ ಒಟ್ಟು ೭೨ ಸಲ ನನ್ನನ್ನು ಬಂಧಿಸಲಾಯಿತು. ೭೨ ಸಲವೂ ನಾನು ಕಾನೂನಿನ ಹಿಡಿತದಿಂದ ಪಾರಾದೆ. ನನ್ನನ್ನು ಯಾವಾಗ ಬಂಧಿಸಲಾಗುವುದೆಂಬುದು ಗೊತ್ತಿಲ್ಲದ್ದರಿಂದ ಡ್ರಾಯರಿನ ತುಂಬಾ ಹೇಬಿಯಸ್ ಕಾರ್ಪಸ್ ಅರ್ಜಿಗಳನ್ನು ಬರೆದಿಟ್ಟಿರುತ್ತಿದ್ದೆ. ಅಂತಹ ಪ್ರಸಂಗದಲ್ಲಿ ನನ್ನ ಹೆಂಡತಿ ಸಹಾಯಕ್ಕೆ ಬರುತ್ತಿದ್ದಳು.

ಅಂದಹಾಗೆ ನನ್ನ ಹೆಂಡತಿಯ ವಿಷಯ ಸ್ವಲ್ಪ ಹೇಳಲೇಬೇಕು. ಮದುವೆಯಾದಾಗ ಇಡಾಗೆ ಬರಿ ೧೯ ವರ್ಷ. ಪ್ಯೂರ್ಟೋರಿಕೋಕ್ಕೆ ಬಂದ ಕೆಲವೇ ತಿಂಗಳಲ್ಲಿ ಸ್ಪಾನಿಷ್ ಕಲಿತಳು. ಅನೇಕ ಸ್ತ್ರೀ ಸಂಘಟನೆಗಳನ್ನು ಸಂಘಟಿಸಿದಳು. ಅವಳು ಹಾಡುತ್ತಿದ್ದ 'ಪೀನಟ್ ವೆಂಡರ್'ಆಗ ಬಹು ಜನಪ್ರಿಯವಾಗಿತ್ತು. ಒಂದು ದಿನ ಸ್ಯಾನ್‌ಜುವಾನಿನ ಬೀದಿಗಳಲ್ಲಿ ಇಬ್ಬರು ಖದೀಮರು ಒಬ್ಬರಿಗೊಬ್ಬರು ಗುಂಡು ಹಾರಿಸುವುದರಲ್ಲಿ ನಿರತರಾಗಿದ್ದಾಗ ಇಡಾ ಬರುವುದನ್ನು ನೋಡಿ ಅದನ್ನು ನಿಲ್ಲಿಸಿದರಂತೆ. ಆಕೆ ಸಾಕಷ್ಟು ದೂರ ಹೋಗುವವರೆಗೂ ಗುಂಡನ್ನು ಹಾರಿಸಲಿಲ್ಲವಂತೆ. ಈ ಸುದ್ದಿ ನನ್ನ ಆಫೀಸನ್ನು ತಲುಪಿದಾಗ, "ದೇವರೆ, ಎಂಥಾ ಒಳ್ಳೆಯ ಬುದ್ಧಿ ಅವರಿಗೆ

ಕೊಟ್ಟೆಯಪ್ಪಾ," ಎಂದು ಉದ್ಗರಿಸಿದೆ. ಹತ್ತಿರದಲ್ಲೇ ಇದ್ದ ಸ್ಥಳೀಯನೊಬ್ಬ, "ಒಳ್ಳೇ ಬುದ್ಧಿಯಿಂದಲ್ಲ, ತಮ್ಮ ಪಿಸ್ತೂಲನ್ನು ಕಸಿದುಕೊಂಡು ತಮಗೇ ಗುಂಡುಹಾಕಿದರೇನು ಗತಿ! ಎಂದು ಆ ಖದೀಮರು ಸುಮ್ಮನೆ ನಿಂತಿದ್ದಾರು" ಎಂದು ಹಾಸ್ಯ ಚಟಾಕಿ ಹಾರಿಸಿದ.

ಸುದ್ದಿಯನ್ನು ಪ್ರಕಟಿಸುವಾಗ ನಾನೆಂದೂ ಅಂಜಲಿಲ್ಲ, ಅಳುಕಲಿಲ್ಲ. ಅಲ್ಲಿದ್ದ ಅಮೇರಿಕದ ಸೈನ್ಯಕ್ಕೆ ಸಾರಾಯಿಯನ್ನು ಕದ್ದು ಸರಬರಾಜು ಮಾಡಲಾಗುತ್ತಿದೆಯೆಂದು ಸುದ್ದಿ ಬಂದಾಗ ಆ ಬಗ್ಗೆ ತನಿಖೆ ನಡೆಸಿ ವಿವರವಾಗಿ ಪತ್ರಿಕೆಯಲ್ಲಿ ಪ್ರಕಟಿಸಿದೆ. ಟ್ಯಾಕ್ಸ್ ಡಿಪಾರ್ಟ್‌ಮೆಂಟಿನಲ್ಲಿ ವ್ಯಾಪಕ ಭ್ರಷ್ಟಾಚಾರ ನಡೆಯುತ್ತಿದ್ದಾಗ ಅದನ್ನೂ ಹೊರಗೆಳೆದೆ. ಇದೆಲ್ಲದರಿಂದಾಗಿ ಪತ್ರಿಕೆಯ ಪ್ರಸಾರ ದಿನದಿನಕ್ಕೂ ಬೆಳೆಯುತ್ತಿತ್ತು. ಅದರೊಂದಿಗೆ ಶತ್ರುಗಳ ಸಂಖ್ಯೆಯೂ ಏರುತ್ತಿತ್ತು. ಒಂದು ದಿನವಂತೂ ನನ್ನ ದೇಶದವನೇ ಆದ ವಿಸ್‌ಕಾನ್‌ಸಿನ್ನಿನ ತರುಣನೊಬ್ಬ, "ಸುಮ್ಮನೆ ಪೇಪರು ಬಂದುಮಾಡಿ ಬೇರೆ ಕಡೆ ಹೋಗುತ್ತೀಯೋ ಅಥವಾ ನಿನ್ನ ಕಥೆ ಮುಗಿಸಬೇಕೋ," ಎನ್ನುವ ಮಟ್ಟಕ್ಕೂ ಹೋದ.

ಆದರೆ ಎಲ್ಲರೂ ಅವನ ಹಾಗೆ ಬಿಸಿನೆತ್ತರಿನವರಾಗಿರಲಿಲ್ಲ. ಅಲ್ಲಿನ ನಗರವೊಂದರ ಮೇಯರನ ದುಷ್ಕೃತ್ಯಗಳನ್ನೆಲ್ಲಾ ನಾನು ದೊಡ್ಡದಾಗಿ ಪ್ರಕಟಿಸುತ್ತಿದ್ದಾಗ ಒಂದು ದಿನ ಆತ ತಾನಿರುತ್ತಿದ್ದ ನಡುಗಡ್ಡೆಯಿಂದಲೆ, "ಪ್ರಕಟಿಸುವುದನ್ನು ಈಗಿಂದೀಗಲೇ ನಿಲ್ಲಿಸಿ. ಇಷ್ಟರಲ್ಲೆ ಹಣದೊಂದಿಗೆ ಬರುತ್ತೇನೆ," ಎಂದು ತಂತಿಕೊಟ್ಟ. ಅದನ್ನೂ ನಾವು ಯಥಾವತ್ತಾಗಿ ಪತ್ರಿಕೆಯಲ್ಲಿ ಪ್ರಕಟಿಸಿದೆವು.

ಮರುದಿನವೇ ಆತ, "ಮೀಸ್ಟರ್ ಬೀರ್ಡ್, ಮೀಸ್ಟರ್ ಬೀರ್ಡ್, ನನ್ನ ಬಗ್ಗೆ ತಪ್ಪಾಗಿ ತಿಳಿದಿದ್ದೀರಿ. ಮೀಸ್ಟರ್ ಬೀರ್ಡ್, ನೀವು ಕೇಳಿದಷ್ಟು ಕೊಡುವಷ್ಟು ಹಣ ನನ್ನ ಬಳಿ ಇದೆ,"ಎನ್ನುತ್ತಾ ಓಡೋಡಿ ಬಂದ. ಜನರಿಗೆ ಇದ್ದುದನ್ನು ಇದ್ದಹಾಗೆ ತಿಳಿಸಲಿಕ್ಕೆ ಪತ್ರಿಕೆ ಹೊರಡಿಸುತ್ತೇವೆಯೇ ಹೊರತು ಅಡ್ಡದಾರಿಯಿಂದ ಹಣಮಾಡಲಿಕ್ಕಲ್ಲ ಎನ್ನುವುದನ್ನು ಅವನಿಗೆ ಮನಗಾಣಿಸಬೇಕಾದರೆ ಸಾಕುಸಾಕಾಗಿಹೋಯಿತು.

ಹಣವನ್ನು ಕೊಳ್ಳೆಹೊಡೆಯುವುದರಲ್ಲಿ ಪ್ಯೋರ್ಟೋರಿಕೋದ ರಾಜಕಾರಣಿಗಳಷ್ಟೇ ಅಲ್ಲ, ಅಮೆರಿಕದ ಅಧಿಕಾರಿಗಳೂ ಶಾಮೀಲಾಗಿದ್ದರು. ಹೀಗಾಗಿ ಆಡಳಿತದ ವೆಚ್ಚ ಮೂರುಪಟ್ಟು ಏರಿತು. ಮೊದಲೆ ಬಡವಾಗಿದ್ದ ಪ್ಯೋರ್ಟೋರಿಕೋದ ಜನರು ತುತ್ತು ಅನ್ನಕ್ಕೂ ಪರದಾಡುವಂತಾಯಿತು. ಅಮೇರಿಕದ ಸರಕಾರ ನಿಯಮಿಸಿದ್ದ ಒಬ್ಬ ಗವರ್ನರನಂತೂ ಅಂದಿನ ಅಗ್ಗದ ಕಾಲದಲ್ಲೇ ೮೦೦೦ ಡಾಲರುಗಳಷ್ಟು ಸಂಬಳ ಪಡೆಯುತ್ತಿದ್ದ. ಇದಲ್ಲದೆ ಸ್ವಂತದ ವೆಚ್ಚಕ್ಕಾಗಿ ವರ್ಷಕ್ಕೆ ಹನ್ನೆರಡು ಸಾವಿರದ ಫಂಡ್ ಬೇರೆ. ಇದೂ ಸಾಲದೆಂಬಂತೆ ಆಕಸ್ಮಿಕ ವೆಚ್ಚಗಳಿಗಾಗಿ ವರ್ಷಕ್ಕೆ ೭೫,೦೦೦ ಡಾಲರುಗಳ ವ್ಯವಸ್ಥೆಯೂ ಅವನಿಗಿತ್ತು. ಆ ಹಣವನ್ನು ಹೇಗೆ ಖರ್ಚುಮಾಡಲಾಗುತ್ತಿದೆಯೆಂಬ ಬಗ್ಗೆ ಯಾರಿಗೂ ಆತ ಸಮಜಾಯಿಷಿ ನೀಡಬೇಕಾಗಿರಲಿಲ್ಲ.

ದೇಶದಲ್ಲಿ ಲಕ್ಷಾಂತರ ಬಡವರು ಹೊಟ್ಟೆಗಿಲ್ಲದೆ ಒದ್ದಾಡುತ್ತಿದ್ದಾಗ ಚಿಕ್ಕಪುಟ್ಟ ಕೆಲಸಮಾಡುವ ಅಮೇರಿಕನ್ ಅಧಿಕಾರಿಗಳಿಗೂ ಸರಕಾರದ ವೆಚ್ಚದಲ್ಲಿ ಬಂಗಲೆಗಳನ್ನು ಒದಗಿಸಲಾಗುತ್ತಿತ್ತು. ಅವರಲ್ಲಿ ಅನೇಕರ ಕೆಲಸ ಸರಕಾರಕ್ಕೆ ಅಗತ್ಯವಾದ ವಸ್ತುಗಳನ್ನು ಕೊಳ್ಳುವುದಾಗಿತ್ತು. ಇತ್ತ ಸರಕಾರದಿಂದ ವೇತನವೂ ಸರಿ, ಅತ್ತ ಕಂಪನಿಗಳಿಂದ ಕಮೀಶನ್ನೂ ಸರಿ ಎಂಬ ರೀತಿಯಲ್ಲವರು ವ್ಯವಹರಿಸುತ್ತಿದ್ದರು. ಒಮ್ಮೆ ಅಮೇರಿಕನ್ನನೊಬ್ಬ ವಿದ್ಯಾ ಇಲಾಖೆಯ ಮುಖ್ಯಸ್ಥನಾಗಿ ನೇಮಕಗೊಂಡ. ಆತ ಮಾಡಿದ ಮೊದಲ ಕೆಲಸವೆಂದರೆ ತಾನೇ ಬರೆದ ಪುಸ್ತಕಗಳನ್ನು ಬೇಕಾಬಿಟ್ಟಿಯಾಗಿ ಕೊಂಡು ಶಾಲೆಗಳಿಗೆಲ್ಲಾ ಪುಕ್ಕಟ್ಟೆಯಾಗಿ ಹಂಚಿದ್ದು. ಎರಡನೆಯ ಕಂತಾಗಿ ಮತ್ತಷ್ಟು ಪುಸ್ತಕಗಳನ್ನು ಹಂಚಿದಾಗ ಶಾಲೆಗಳಲ್ಲಿ ಅವುಗಳನ್ನಿಡಲು ಅಷ್ಟೇ ಅಲ್ಲ, ಬಾಲಕರಿಗೆ ಕೂಡಲು ಸ್ಥಳವಿಲ್ಲ ಎಂಬ ತಕರಾರು ಅನೇಕ ಕಡೆಗಳಿಂದ ಬಂತು.

ಭ್ರಷ್ಟಾಚಾರದ ವಿರುದ್ಧ ನಮ್ಮ ಸಮರ ಮುಂದುವರಿದೇ ಇತ್ತು. ಒಂದು ದಿನ ನಾವು ವ್ಯವಹರಿಸುತ್ತಿದ್ದ ಬ್ಯಾಂಕ್ ಮ್ಯಾನೇಜರ್ ಊಟಕ್ಕೆ ಕರೆದ. ಎಂದೂ ಕರೆಯದವನು ಇಂದು ಕರೆಯುತ್ತಿದ್ದಾನೆಂದರೆ ಏನೋ ವಿಶೇಷ ಇರಲೇಬೇಕು ಅಂದುಕೊಳ್ಳುತ್ತಾ ನಾನಲ್ಲಿಗೆ ಹೋದೆ. ಊಟ ಮಾಡುವಾಗ ಆ ಮಾತು ಈ ಮಾತು ಆಡುತ್ತಾ ಪ್ರಾಸಂಗಿಕವೆಂಬಂತೆ ಬ್ಯಾಂಕ್ ಮ್ಯಾನೇಜರ್, "ಮಿ ಬರ್ಡ್. ನೀವು

ನಮ್ಮ ಬ್ಯಾಂಕಿನಿಂದ ಆರು ಸಾವಿರದಷ್ಟು ಓವರ್ ಡ್ರಾಫ್ಟ್ ತೆಗೆದಿದ್ದೀರಿ," ಅಂದ. "ಹೌದು. ಅದೇನೂ ದೊಡ್ಡಮೊತ್ತವಲ್ಲ, ತೀರಿಸುತ್ತೇನೆ ಬಿಡಿ," ಅಂದೆ. "ನೀವು ತೀರಿಸುವುದಿಲ್ಲ ಎಂದಲ್ಲ, ನಾನು ಹೇಳುವುದು. ಸರಕಾರದಿಂದ ನಮಗೆ ದೊಡ್ಡ ಪ್ರಮಾಣದಲ್ಲಿ ಹಣ ಬರಬೇಕಾಗಿದೆ. ಆ ಹಣ ಬಾರದಿದ್ದರೆ ಬ್ಯಾಂಕು ನಡೆಸುವುದೇ ಕಷ್ಟ. ನೀವು ಸರಕಾರದ ವಿರುದ್ಧ ಪ್ರಕಟಿಸುವುದನ್ನು ಬಿಡುತ್ತೇನೆಂದು ಬರೆದುಕೊಟ್ಟಲ್ಲಿ ಹಣ ಕೊಡುವುದಾಗಿ ಸರಕಾರದವರು ಹೇಳುತ್ತಿದ್ದಾರೆ. ಅವರು ಹಣ ಕೊಡದಿದ್ದರೆ ನಾವು ನಿಮ್ಮ ಯಂತ್ರೋಪಕರಣಗಳನ್ನು ಅನಿವಾರ್ಯವಾಗಿ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ," ಅಂದ. ಪರಿಸ್ಥಿತಿ ಅರ್ಥವಾಯಿತು. ಅವನ ಸಲಹೆಯನ್ನು ಒಪ್ಪಿಕೊಳ್ಳುವುದೆಂದರೆ ಅಪ್ರಿಯ ಸತ್ಯಗಳನ್ನು ಪ್ರಕಟಿಸುವುದನ್ನು ತಕ್ಷಣ ನಿಲ್ಲಿಸುವುದೆಂದಾಗಿತ್ತು. "ಇಲ್ಲ ರಾಯರೆ, ಅದು ಮಾತ್ರ ಸಾಧ್ಯವಿಲ್ಲ" ಎನ್ನುತ್ತಾ ಅರ್ಧಕ್ಕೇ ಊಟ ಬಿಟ್ಟೆದ್ದೆ.

ನಾನು ಆಫೀಸಿಗೆ ಬರುವಷ್ಟರಲ್ಲೇ ಬ್ಯಾಂಕಿನಿಂದ ಅಧಿಕಾರಿಯೊಬ್ಬ ಬಂದು ಯಂತ್ರೋಪಕರಣಗಳನ್ನು ಮುಟ್ಟುಗೋಲು ಹಾಕಿಕೊಂಡ. ಈಗ ಅವು ಇಲ್ಲದೆ ಪತ್ರಿಕೆಯನ್ನು ಪ್ರಕಟಿಸುವುದಾದರೂ ಹೇಗೆ? ಎಂಬ ಪ್ರಶ್ನೆಬಂತು. ನಾನು ಅಂದು ನಡೆದುದ್ದನ್ನೆಲ್ಲ ವಿವರವಾಗಿ ಬರೆದು ಬೇರೆ ಪ್ರೆಸ್ಸಿನಲ್ಲಿ ಹ್ಯಾಂಡ್‌ಬಿಲ್ ಆಕಾರದಲ್ಲಿ ಛಾಪಿಸಿ ಮಾರಿದೆ. ಬಿಸಿದೋಸೆಗಳಂತೆ ಅವೆಲ್ಲ ಮಾರಿಹೋದವು. ಪತ್ರಿಕೆಯ ಸ್ಥಿತಿಗಾಗಿ ಮರುಗಿದ ಅನೇಕರು ಕೈಲಾದಷ್ಟು ಹಣಕೊಟ್ಟರು. ಅದನ್ನೆಲ್ಲ ಕೂಡಿಸಿ, ಸಾಲ ತೀರಿಸಿ, ಯಂತ್ರೋಪಕರಣಗಳನ್ನು ಬ್ಯಾಂಕಿನ ಹಿಡಿತದಿಂದ ಬಿಡಿಸಿಕೊಂಡೆ. 'ಸ್ಯಾನ್ ಜುವಾನ್ ನ್ಯೂಜ್' ಮತ್ತೆ ಪ್ರಕಟವಾಗತೊಡಗಿತು.

ಸರಕಾರದ ವಕ್ರದೃಷ್ಟಿಯೀಗ ನನ್ನ ಬಗ್ಗೆ ಇನ್ನಷ್ಟು ವಕ್ರವಾಗಿತ್ತು. ಸಾಲದ್ದಕ್ಕೆ ನ್ಯಾಯಾಂಗ ಸಹ ಸರಕಾರದ ಆಳವಿನಲ್ಲೆ ಬಂದಿತ್ತು. ಪತ್ರಿಕೆಯಲ್ಲಿ ಪ್ರಕಟವಾದ ಒಂದು ವರದಿಯನ್ನು ಉಲ್ಲೇಖಿಸಿ ಸಾರ್ವಜನಿಕ ಸ್ಥಾನಗಳಲ್ಲಿರುವವರನ್ನಾಗಲಿ ಸರಕಾರಿ ಅಧಿಕಾರಿಗಳನ್ನಾಗಲಿ ಟೀಕಿಸುವ ಪ್ರವೃತ್ತಿ ಹೀಗೆಯೇ ಮುಂದುವರೆದರೆ ಜೈಲಿಗೆ ಸೇರಿಸಬೇಕಾಗುತ್ತದೆಂಬ ಪತ್ರ ನ್ಯಾಯಾಲಯದಿಂದ ಬಂತು.

ಇಂತಹ ಕಾರಣಗಳಿಂದಾಗಿ ಜೈಲಿಗೆ ಹೋದವರನ್ನು ಅಲ್ಲಿಯೆ ಹೊಡೆದು ಕೊಲ್ಲುತ್ತಿದ್ದುದು ಹಿಂದೆಯೇ ನನಗೆ ಗೊತ್ತಾಗಿತ್ತು. ಈ ಕೊಲ್ಲುವ ಕೆಲಸಕ್ಕಾಗಿಯೆ ಬಾಡಿಗೆ ಹಂತಕರನ್ನು ಸರಕಾರ ನಿಯಮಿಸಿಕೊಂಡಿದ್ದೂ ನನಗೆ ಗೊತ್ತಿತ್ತು. ಈ ಪತ್ರ ಬಂದ ಕೆಲ ದಿನಗಳಲ್ಲೆ ನನ್ನನ್ನು ಗೂಂಡಾಗಳಿಂದ ಹೊಡೆಸಲಾಯಿತು. ಪ್ರಾಣಕ್ಕೆ ಹೆದರಿಕೆಯನ್ನೂ ಒಡ್ಡಲಾಯಿತು. ಯಾರಿಗೇ ಆದರೂ ಜೀವಭಯ ಎನ್ನುವುದು ಇದ್ದೇಇದೆ ನೋಡಿ, ನಾನು ಯಂತ್ರೋಪಕರಣಗಳನ್ನೆಲ್ಲ ಕೈಗೆ ಬಂದ ಬೆಲೆಗೆ ಮಾರಿ ಮತ್ತೆ ತಾಯ್ನಾಡಾದ ಅಮೇರಿಕಕ್ಕೆ ಹಿಂದಿರುಗಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದೆ. ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ನಾನು ಕಟ್ಟಿಕೊಂಡಿದ್ದ ಆಶಾ ಸೌಧ ಕುಸಿದುಹೋಗಿತ್ತು. ಇನ್ನು ಎಂದೆಂದೂ ಪ್ಯೂರ್ಟೋರಿಕೋದತ್ತ ತಲೆಯಿಟ್ಟು ಕೂಡ ಮಲಗಬಾರದೆಂದು ನಿಶ್ಚಯಿಸಿದೆ.

ಇದಾಗಿ ಐವತ್ತು ವರ್ಷಗಳೇ ಸರಿದುಹೋದವು. ಇನ್ನೇನು ಸಾವು ಇಷ್ಟು ಸಮೀಪವಾಗಿವಾಗಿದೆ, ಅಂತಹುದರಲ್ಲಿ ನಾನೇಕೆ ಆ ದೇಶದ ವಿರುದ್ಧ ಹಗೆಸಾಧಿಸಬೇಕು? ಇಷ್ಟಕ್ಕೂ ಆ ಜನರಾದರೂ ನನಗೇನು ಮಾಡಿದ್ದಾರೆ? ಹಿಂದೆ ಬ್ಯಾಂಕು ಆಸ್ತಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡಾಗ ಅದನ್ನು ಬಿಡಿಸಿಕೊಟ್ಟಿರಲಿಲ್ಲವೆ? ಹೊಟ್ಟೆಗಿಲ್ಲದ ಬಡವರು ಸಹ ಪುಡಿಗಾಸನ್ನು ಕೂಡಿಸಿಕೊಟ್ಟು ಪತ್ರಿಕೆ ನಡೆಯಲು ಸಹಾಯಮಾಡಿರಲಿಲ್ಲವೆ? ಎಂದುಕೊಂಡು ಪ್ಯೂರ್ಟೋರಿಕೋಕ್ಕೆ ಹೋದೆ.

ಈಗ ಸ್ಯಾನ್ ಜುವಾನ್ ಮೊದಲಿನ ಸ್ಯಾನ್ ಜುವಾನ್ ಆಗಿರಲಿಲ್ಲ. ಅಲ್ಲಿ ಬಡತನವಿತ್ತೆನ್ನುವುದನ್ನು ಕಲ್ಪಿಸಲು ಕೂಡ ಸಾಧ್ಯವಿರಲಿಲ್ಲ. ಎಲ್ಲೆಲ್ಲೂ ಭವ್ಯ ಸದನಗಳು ತಲೆಯೆತ್ತಿದ್ದವು.

ಸಮೃದ್ಧಿಯೆನ್ನುವುದು ತಾನೇತಾನಾಗಿ ಮೆರೆಯುತ್ತಿತ್ತು. ಜನರ ಮುಖದ ಮೇಲೆ ಆತ್ಮವಿಶ್ವಾಸ ತುಂಬಿತುಳುಕುತ್ತಿತ್ತು. "ಏನಪ್ಪಾ, ಯಾವುದಾದರೂ ಒಳ್ಳೆಯ ಹೋಟೆಲಿಗೆ ಕರೆದುಕೊಂಡು ಹೋಗುತ್ತೀಯಾ?" ಎಂದು ಅಲ್ಲಿಯೆ ನಿಂತಿದ್ದ ಟ್ಯಾಕ್ಸಿಡ್ರೈವರನನ್ನು ಕೇಳಿದೆ. ಅವನು ಅದನ್ನೇ ನಿರೀಕ್ಷಿಸುತ್ತಿದ್ದನೋ ಏನೋ, ಹೂಂಗುಟ್ಟಿ ಉತ್ಕೃಷ್ಟವಾದ ಹೋಟೆಲಿಗೇ ನನ್ನನ್ನು ಕರೆದುಕೊಂಡು ಹೋದ.

ಒಳಗೆ ಕಾಲಿಟ್ಟಿದ್ದೇನೊ ಇಲ್ಲವೋ, "ಬನ್ನಿ ಬನ್ನಿ ಮಿ. ಬರ್ಡ್, ನಿಮಗಾಗಿ ರೂಮು ಸಿದ್ಧವಾಗಿದೆ," ಎಂದಳು ರಿಸೆಪ್ಷನಿಸ್ಟ್. ರೂಮನ್ನು ರಿಸರ್ವ್ ಮಾಡಿಸುವ ಮಾತಂತೂ ದೂರವುಳಿಯಿತು. ಈ ಹೋಟೆಲಿನ ಹೆಸರೂ ನನಗೆ ಗೊತ್ತಿದ್ದಿಲ್ಲ. ಅಂತ ಹುದರಲ್ಲಿ ನನ್ನ ಹೆಸರಾಗಲಿ ನಾನು ಬರುವ ವಿಷಯವಾಗಲಿ ಇವಳಿಗೆ ಹೇಗೆ ಗೊತ್ತಾಯಿತು? ಎಂದು ಆಶ್ಚರ್ಯಪಡುತ್ತಾ ರೂಮಿಗೆ ಹೋದೆ. ಆದರೆ ಇದಕ್ಕಿಂತ ಆಶ್ಚರ್ಯದ ಘಟನೆ ನಂತರ ಸ್ವಲ್ಪ ಸಮಯದಲ್ಲೆ ಸಂಭವಿಸಿತು. ಟೆಲಿಫೋನಿನ ಗಂಟೆ ಒಂದೇ ಸಮನೆ ಬಾರಿಸತೊಡಗಿದಾಗ ರಿಸೀವರನ್ನು ಕೈಗೆತ್ತಿಕೊಂಡೆ. ಅಚೆ ಬದಿಯಿಂದ ಗವರ್ನರನ ಸಹಾಯಕ ಮಾತಾಡುತ್ತಿದ್ದ. ಹೋಟೇಲಿನ ಹೊರಗೆ ನನಗಾಗಿ ಒಂದು ಕಾರನ್ನು ಒದಗಿಸಲಾಗಿಯೆಂದು ತಿಳಿಸಿ, ಅನುಕೂಲವಾದಾಗ ಗವರ್ನರರನ್ನು ಭೇಟಿ ಯಾಗಬೇಕೆಂದೂ ಅದಕ್ಕಾಗಿ ಅವರು ಕಾಯುತ್ತಿ ದ್ದಾರೆಂದೂ ಹೇಳಿದ.

ನಾನು ಗವರ್ನರರನ್ನು ಭೇಟಿಯಾಗುವುದು? ಗವರ್ನರರು ನನಗಾಗಿ ಕಾಯುವುದು? ನನ್ನ ಹೆಸರು ಅಮೇರಿಕದಲ್ಲೇ ಸಾಕಷ್ಟು ಜನರಿಗೆ ಗೊತ್ತಿಲ್ಲ. ಈ ಗವರ್ನರರಿಗೇನು ಗೊತ್ತಿದ್ದೀತು? ಇಷ್ಟಕ್ಕೂ ನನ್ನಂ ಥವನನ್ನು ಅವರೇಕೆ ಕರೆಯಬೇಕು? ಬಹುಶಃ ಅವರ ಆಪ್ತ ಸಹಾಯಕ ನನ್ನನ್ನು ಮತ್ತಾರೆಂದೋ ತಪ್ಪಾಗಿ ಭಾವಿಸಿ ಫೋನ್ ಮಾಡಿರಬೇಕು. ಆದರೆ ಆತ ಅಷ್ಟು ಹೇಳಿದ ಮೇಲೆ ಹೋಗದೆ ಇರುವುದೂ ತಪ್ಪಾಗುತ್ತದಲ್ಲ ಎಂದುಕೊಂಡು ಮರುದಿನವೆ ಗವ ರ್ನರರ ನಿವಾಸಕ್ಕೆ ಹೋದೆ.

ಮುಂಡೋಜ್ ರಿವೆರಾನ ಮಗನೇ ಆತ ನಾಗಿದ್ದ. ಪ್ಯೂರ್ಟೋರಿಕೋದ ಅಂದಿನ ಸ್ಥಿತಿ, ಇಂದಿನ ಹಂತಕ್ಕೆ ತಲುಪಲು ಪಡಬೇಕಾದ ಕಷ್ಟ ಬಂದ ವಿಘ್ನಗಳು ಮುಂತಾಗಿ ತುಂಬಾ ಮಾತಾ ಡಿದ. ಹಳೆಗಾಲದ ನೆನಪುಗಳನ್ನು ಮೆಲಕುಹಾಕುವು ದರಲ್ಲೇ ರಾತ್ರಿ ಕಳೆಯಿತು. ಹೌದು, ಐವತ್ತು ವರ್ಷಗಳ ಹಿಂದೆ ನಾನು ಹಾಗೂ ಇಡಾ ಕಂಡ ಕನಸು ನನಸಾಗಿತ್ತು. ದೇಶದ ಜನರಲ್ಲಿ ಆತ್ಮಾಭಿ ಮಾನ ತುಂಬಿ ತುಳುಕುತ್ತಿತ್ತು.

ನಾನು ಪ್ಯೂರ್ಟೋರಿಕೋದಲ್ಲಿ ಹತ್ತು ದಿನ ಇದ್ದೆ. ಆ ಹತ್ತು ದಿನಗಳಲ್ಲಿ ಒಬ್ಬ ರಾಷ್ಟ್ರೀಯ ಯೋಧನಂತೆಯೆ ನನ್ನನ್ನು ನಡೆಸಿಕೊಳ್ಳಲಾಯಿತು. ಅಲ್ಲಿನ ಅತ್ಯಧಿಕ ಪ್ರಸಾರದ 'ಎಲ್ ಮುಂಡೋ' ಅಂತೂ ನನಗೆ ಸ್ವಾಗತಕೋರಿ ವಿಶೇಷ ಸಂಪಾದ ಕೀಯವನ್ನೇ ಪ್ರಕಟಿಸಿತು.

ಐವತ್ತು ವರ್ಷಗಳೆಂದರೆ ಚಿಕ್ಕ ಅವಧಿಯೇನಲ್ಲ. ಈ ಅವಧಿಯಲ್ಲಿ ನನಗಾಗದವರೂ ಕಾಲನ ಹಿಡಿತಕ್ಕೆ ಸಿಕ್ಕು ಕಣ್ಮರೆಯಾಗಿದ್ದರು. ನನ್ನ ಮಿತ್ರರೂ ಕಣ್ಮರೆಯಾಗಿದ್ದರು. ಆದರೆ ಅಲ್ಲಿನ ಜನ ಮಾತ್ರ ನನ್ನನ್ನು ಮರೆತಿರಲಿಲ್ಲ. ಒಮ್ಮೆ ಒಂದು ಹೋಟೆಲಿಗೆ ಹೋದಾಗ ಅದುಹೇಗೆ ನನ್ನನ್ನು ಗುರುತಿಸಿದರೋ ಏನೋ, ನಾನು ಬರುತ್ತಲೇ ಚಹಕುಡಿಯುವುದನ್ನು ಅರ್ಧಕ್ಕೆ ಬಿಟ್ಟು, ಎದ್ದು ನಿಂತು ನನ್ನನ್ನು ಸ್ವಾಗತಿಸಿ ದರು.

ನಾನು ಹೊರಡುವ ದಿನ ಬಂತು. ನನ್ನನ್ನು ಬೀಳ್ಕೊಡಲು ಗವರ್ನರರು ತಾಯಿಯನ್ನು ಕರೆದು ಕೊಂಡು ಬಂದಿದ್ದರು. ಇನ್ನೇನು ಹಡಗು ಹೊರ ಡುತ್ತಿದೆ, ಎನ್ನುವಾಗ ಬ್ಯಾಂಡಿನ ನಿನಾದ ಕೇಳಿಬರತೊಡಗಿತು. ಎಲ್ಲೋ ಹಾಡನ್ನು ಕೇಳಿದಹಾ ಗಿತ್ತು. ಇನ್ನೊಮ್ಮೆ ನೆನಪಿಸಿಕೊಂಡೆ. ಹೌದು ಅದೇ ಹಾಡು, 'ದಿ ಪಿನಟ್ ವೆಂಡರ್.' ನನ್ನ ಪ್ರೀತಿಯ ಇಡಾ ಹಾಡುತ್ತಿದ್ದ ಹಾಡು. ಅವಳಿಗೆ ಪಂಚಪ್ರಾಣ ವಾಗಿದ್ದ ಹಾಡು. ಆ ವೇಳೆಗೆ ಇಡಾ ತೀರಿಕೊಂಡೇ ಎಷ್ಟೋ ವರ್ಷಗಳಾಗಿದ್ದವು. ಆದರೂ ಅಲ್ಲಿನ ಜನ ಅವಳನ್ನು ಮರೆತಿರಲಿಲ್ಲ. ಮನಸ್ಸನ್ನು ಎಷ್ಟು ಗಟ್ಟಿಯಾಗಿ ಹಿಡಿದರೂ ನನ್ನ ಕಣ್ಣಿನಿಂದ ನೀರು ಒಸರುವುದು ನಿಲ್ಲಲಿಲ್ಲ. ✪

---

## ಭಾರತದ ಮೊದಲ ಅಂಚೆ ಕಚೇರಿ

ಈಸ್ಟ್ ಇಂಡಿಯಾ ಕಂಪನಿ ೧೭೨೭ರಲ್ಲಿ ಭಾರತದಲ್ಲಿ ಮೊದಲನೆಯ ಪೋಸ್ಟ್ ಆಫೀಸ್ ಸ್ಥಾಪಿಸಿತು. ಅದು ಕಲಕತ್ತೆಯಲ್ಲಿ ಬ್ರಿಟಿಶರು ವಾಸಿಸುವ ಸ್ಥಳದಲ್ಲಿತ್ತು. ಅನಂತರ ಆ ಅಂಚೆಕಚೇರಿಯನ್ನು ಹಳೆಯ ಕೋರ್ಟ್‌ಹೌಸ್ ರಸ್ತೆಗೆ ಸ್ಥಳಾಂತರಿಸಲಾಯಿತು. ಹೀಗೆ ಇಡಿ ದೇಶದಲ್ಲಿ ಮೊದಲ ಪೋಸ್ಟ್ ಆಫೀಸನ್ನು ಪಡೆದ ಕೀರ್ತಿ ಕಲಕತ್ತಾ ನಗರದ್ದು.

ಸಂಗ್ರಹ: ಡಿ. ಗುಂಡೂರಾವ್




ವಿದ್ಯಾರ್ಥಿ ಅಂಕಣ

# ಕ್ಷಣಾರ್ಧದಲ್ಲಿ ಶತಮಾನದ ಕ್ಯಾಲೆಂಡರ್

- ಮಾಲತಿ ಕಮಲಾಕ್ಷ, ಕಳನಾಡು.

ಇಪ್ಪತ್ತನೇ ಶತಮಾನವನ್ನು ಆಧಾರವಾಗಿಟ್ಟುಕೊಂಡು ಅದರ ಹಿಂದಿನ ಹಾಗೂ ಮುಂದಿನ ಯಾವುದೇ ಶತಮಾನದ ಯಾವುದೇ ವರ್ಷದಲ್ಲಿ ಯಾವ ತಾರೀಖು, ಯಾವ ವಾರದಂದು ಬರುತ್ತದೆ ಎಂದು ತಿಳಿದುಕೊಳ್ಳಬಯಸುವಿರಾ? ಇಲ್ಲಿದೆ ಸುಲಭ ಉಪಾಯ.

ಮೊದಲಿಗೆ-

೧) ನಿಮಗೆ ಬೇಕಾದ ವರ್ಷದ ಕೊನೆಯ ಎರಡು ಸಂಖ್ಯೆ ತೆಗೆದುಕೊಳ್ಳಿ.

೨) ಈ ಸಂಖ್ಯೆಯನ್ನು ನಾಲ್ಕರಿಂದ ಭಾಗಿಸಿ. ಸಿಗುವ ಸಂಖ್ಯೆ ಶೇಷ ಸಂಖ್ಯೆಯಿದ್ದರೆ ಬಿಟ್ಟು ಬಿಡಿ.

೩) ಬೇಕಾದ ತಿಂಗಳ ಕೋಡ್ ಸಂಖ್ಯೆ (ಅಧಿಕ ವರ್ಷವಾಗಿದ್ದಲ್ಲಿ ಜನವರಿ ಮತ್ತು ಫೆಬ್ರವರಿಗಳಿಗೆ ಆವರಣದಲ್ಲಿ ಕೊಟ್ಟ ಸಂಖ್ಯೆಯನ್ನು ತೆಗೆದುಕೊಳ್ಳಿರಿ)

೪) ಬೇಕಾದ ತಾರೀಖು.

೫) ಮೇಲಿನ ನಾಲ್ಕೂ ಸಂಖ್ಯೆಗಳನ್ನು ಕೂಡಿಸಿ ಏಳರಿಂದ ಭಾಗಿಸಿ. ಶೇಷವಾಗಿ ಬರುವ ಸಂಖ್ಯೆ ವಾರವನ್ನು ಸೂಚಿಸುತ್ತದೆ.

೧ ಬಂದಲ್ಲಿ ಆದಿತ್ಯವಾರ, ೨ ಬಂದಲ್ಲಿ ಸೋಮವಾರ, ೩ ಬಂದಲ್ಲಿ ಮಂಗಳವಾರ, ೪ ಬಂದಲ್ಲಿ ಬುಧವಾರ ಹೀಗೆ ಕ್ರಮವಾಗಿ ೬ ಬಂದಲ್ಲಿ ಶುಕ್ರವಾರ, ಸೊನ್ನೆಯಾದಲ್ಲಿ ಶನಿವಾರ.

ತಿಂಗಳುಗಳ ಕೋಡ್ ಸಂಖ್ಯೆ: ಜನವರಿ-೧ (೦), ಫೆಬ್ರವರಿ- ೪ (೩), ಮಾರ್ಚ್ ೪, ಏಪ್ರಿಲ್-೦, ಮೇ-೨, ಜೂನ್-೫, ಜುಲೈ-೦, ಆಗಸ್ಟ್-೩, ಸೆಪ್ಟೆಂಬರ್-೬, ಅಕ್ಟೋಬರ್-೧, ನವೆಂಬರ್-೪, ಡಿಸೆಂಬರ್-೬.

ಈಗ ೧೯೫೬ರ ನವೆಂಬರ್ ೧ನೇ ತಾರೀಖು ಯಾವ ವಾರವಾಗಿತ್ತೆಂದು ನೋಡೋಣ.

# ಜ್ಞಾನನಿಧಿ

| | |
|---|---|
| ಬೇಕಾದ ವರ್ಷದ ಕೊನೆಯ ಎರಡು ಸಂಖ್ಯೆ | ೫೬ |
| ೪ ರಿಂದ ಭಾಗಿಸಿದಾಗ ೫೬/೪ = | ೧೪ |
| ನವೆಂಬರ್‌ನ ಕೋಡ್ ಸಂಖ್ಯೆ | ೪ |
| ತಾರೀಖು | ೧ |
| ಒಟ್ಟು | ೭೫ |

ಇದನ್ನು ೭ ರಿಂದ ಭಾಗಿಸಿದಾಗ ಶೇಷ ೫ ದೊರೆಯುತ್ತದೆ. ವಾರದ ಐದನೇ ದಿನ ಗುರುವಾರ. ಆದ್ದರಿಂದ ನವೆಂಬರ್ ಒಂದು ಗುರುವಾರ.

ಇನ್ನು ನಮ್ಮ ಇಪ್ಪತ್ತನೇ ಶತಮಾನವನ್ನು ಆಧರಿಸಿ ಹಿಂದಿನ ಶತಮಾನಗಳ ಹಾಗೂ ಮುಂದಿನ ಶತಮಾನಗಳ ಯಾವುದೇ ವರ್ಷಧ ಕ್ಯಾಲೆಂಡರನ್ನು ಹೇಗೆ ಹುಡುಕಬಹುದೆಂದು ನೋಡೋಣ.

ಮೇಲಿನಂತೆ ಐದು ಹಂತಗಳಲ್ಲಿ ಸಿಕ್ಕಿದ ಒಟ್ಟು ಮೊತ್ತಕ್ಕೆ ಕೆಳಗೆ ಕೊಟ್ಟ ಸಂಖ್ಯೆಯನ್ನು ಸೇರಿಸಿ ನಂತರ ಏಳರಿಂದ ಭಾಗಿಸಿರಿ. ಆಗ ಸಿಗುವ ಶೇಷ ಸಂಖ್ಯೆ ವಾರವನ್ನು ಸೂಚಿಸುತ್ತದೆ.

ಕೂಡಿಸಿರಿ:

೧೯ನೇ ಶತಮಾನ (೧೮೦೦-೧೮೯೯) + ೨
೧೮ನೇ ಶತಮಾನ (೧೭೦೦-೧೭೯೯) + [illegible]
೧೭ನೇ ಶತಮಾನ (೧೬೦೦-೧೬೯೯) + ೬
೧೬ನೇ ಶತಮಾನದ ೧೫೧೦-೧೫೮೨ ರಿಂದ ೩೧೧೨-೧೫೯೯ರವರೆಗೆ + ೦

ಕಳೆಯಿರಿ

೨೧ನೇ ಶತಮಾನ (೨೦೦೦-೨೦೯೯) -೧
೨೨ನೇ ಶತಮಾನ (೨೧೦೦-೨೧೯೯) -೩
೨೩ನೇ ಶತಮಾನ (೨೨೦೦-೨೨೯೯) -೫
೨೪ನೇ ಶತಮಾನ (೨೩೦೦-೨೩೯೯) -೦

ಉದಾಹರಣೆಗಾಗಿ ಗಾಂಧೀಜಿಯ ಹುಟ್ಟು ದಿನ ೧೮೬೯ ಅಕ್ಟೋಬರ್ ೨ ಯಾವ ವಾರವಾಗಿತ್ತೆಂದು ನೋಡುವಾ.

| | |
|---|---|
| ಜನನ ವರ್ಷದ ಕೊನೆಯ ಎರಡು ಸಂಖ್ಯೆ | ೬೯ |
| ೪ ರಿಂದ ಭಾಗಿಸಿದಾಗ ೬೯/೪ = | ೧೭ (ಶೇಷ ಬಿಟ್ಟುಬಿಡಿ) |
| ಅಕ್ಟೋಬರ್ ತಿಂಗಳ ಕೋಡ್ ಸಂಖ್ಯೆ | ೧ |
| ತಾರೀಖು | ೨ |
| ಒಟ್ಟು | ೮೯ |
| ಇದಕ್ಕೆ ೧೯ನೇ ಶತಮಾನದ ಕೋಡ್ ಸಂಖ್ಯೆಯನ್ನು ಸೇರಿಸಿದಾಗ | ೮೯ + ೨ = ೯೦ |
| ಈ ಸಂಖ್ಯೆಯನ್ನು ೭ ರಿಂದ ಭಾಗಿಸಿದಾಗ | ೯೧/೭ = ೧೩ ಶೇಷ = 0 |

ಶನಿವಾರದಂದು ಆಯಿತು ಎಂದು ಕಂಡುಬರುತ್ತದೆ.

ಹೇಗಿದೆ ಸುಲಭದ ಲೆಕ್ಕ? ☆

## ನಿಮಗೆ ತಿಳಿದಿರಲಿ

೧. ನಮ್ಮ ದೇಹದ ರಕ್ತ ೨೪ ಗಂಟೆಗಳಲ್ಲಿ ೧೬,೦೦೦ ಕಿಲೋ ಮೀಟರಿನಷ್ಟು ಸಂಚರಿಸುತ್ತದೆ.

೨. ಕಟ್ಲ್ ಮೀನಿಗೆ ಮೂರು ಹೃದಯಗಳಿವೆ.

೩. 'ಕಂಗಾರು ಇಲಿ'ಯು ತನ್ನ ಬದುಕಿನಲ್ಲಿ ಒಂದು ಬಾರಿಯೂ ನೀರು ಕುಡಿಯುವುದಿಲ್ಲ.

೪. ಒಬ್ಬ ಮನುಷ್ಯ ೨೪ ಗಂಟೆಗಳಲ್ಲಿ ೨೧,೬೦೦ ಸಲ ಉಸಿರಾಡುತ್ತಾನೆ.

೫. ಇಡೀ ಜಗತ್ತಿನಲ್ಲಿ ೪,೯೬೪ ವಿಧದ ಭಾಷೆಗಳನ್ನಾಡುವ ಜನರಿದ್ದಾರೆ.

೬. ಯೂರೋಪಿನಲ್ಲಿ ದಿನವೊಂದಕ್ಕೆ ೫೦ ಲೀಟರ್ ಹಾಲು ಕೊಡುವ ದನದ ತಳಿ ಇದೆ.

ಎ. ಗೋವಿಂದ ಭಟ್
ಮೂಡುಬಿದರೆ

## ಜ್ಞಾನನಿಧಿ

# ಶತಕೌರವರ ನಾಮ ಪರಿಚಯ

**ಯಾ**ರಾದರೂ ಪಾಂಡವರೆಷ್ಟು ಜನ? ಎಂದು ಕೇಳಿದರೆ ಕೂಡಲೇ ಹೇಳಬಹುದು. ಹಾಗೆಯೆ ಕೌರವರೆಷ್ಟು ಜನ? ಎಂದು ಕೇಳಿದರೆ! ನೂರಾ ಒಂದು ಎಂದಷ್ಟೇ ಹೇಳಬಹುದು. ಯಾರು ಯಾರು? ಎಂದು ಕೇಳಿದರೆ ಹೇಳುವುದು ಕಷ್ಟ. ಏಕೆಂದರೆ ಕೌರವರಲ್ಲಿ ದುರ್ಯೋಧನ ಮತ್ತು ದುಶ್ಶಾಸನರಷ್ಟೇ ನಮಗೆ ಪರಿಚಿತರು. ಉಳಿದ ಕೌರವರ ಹೆಸರುಗಳು ಇಲ್ಲಿವೆ.

೧. ದುರ್ಯೋಧನ ೨. ದುಶ್ಶಾಸನ ೩. ದುಸ್ಸಹ ೪. ದುಶ್ಶಳ ೫. ಜಲಸಂಧ ೬. ಸಮ ೭. ಸಹ ೮. ವಿಂದ ೯. ಅನುವಿಂದ ೧೦. ದುರ್ಧರ್ಷ ೧೧. ಸುಬಾಹು ೧೨. ದುಷ್ಪ್ರಧರ್ಷಣ ೧೩. ದುರ್ಮುಖ ೧೪. ದುರ್ಮರ್ಷಣ ೧೫. ದುಷ್ಕರ್ಣ. ೧೬. ಕರ್ಣ ೧೭. ವಿವಿಂಶತ ೧೮. ವಿಕರ್ಣ ೧೯. ಶಲ ೨೦. ಸತ್ವ ೨೧. ಸುಲೋಚನ ೨೨. ಚಿತ್ರ ೨೩ ಉಪಚಿತ್ರ ೨೪. ಚಿತ್ರಾಕ್ಷ ೨೫. ಶರಾಸನ ೨೬. ಚಾರುಮಿತ್ರ ೨೭. ದುರ್ಮದ ೨೮. ದುರ್ವಿಗಾಹ ೨೯. ವಿಕಟಾಸನ ೩೦. ವಿವಿತ್ಸು ೩೧. ಊರ್ಣನಾಭ ೩೨. ದುರ್ದರ್ಶನ ೩೩. ನಂದ ೩೪. ಉಪನಂದ ೩೫. ಚಿತ್ರಬಾಣ ೩೬. ಚಿತ್ರವರ್ಮ ೩೭. ಸುವರ್ಮ ೩೮. ಸುನಾಭ ೩೯. ದುರ್ವಿಯೋಚನ ೪೦. ಅಯೋಬಾಹು ೪೧. ಮಹಾಬಾಹು ೪೨. ಚಿತ್ರಾಂಗ ೪೩. ಚಿತ್ರಕುಂಡಲ ೪೪. ಭೀಮವೇಗ ೪೫. ಭೀಮಬಳ ೪೬. ಬಳಾಕಿ ೪೭. ಬಲವರ್ಧನ ೪೮. ನಿಷಂಗಿ ೪೯. ಉಗ್ರಾಯುಧ ೫೦. ಸುಷೇಣ ೫೧. ಕುದಧಾರ ೫೨. ಮಹೋದರ ೫೩. ದೃಢವರ್ಮ ೫೪. ದೃಢಪಾಶಿ ೫೫. ಸೋಮಕೀರ್ತಿ ೫೬. ಚಿತ್ರಾಯುಧ ೫೭. ಅನುಧರ ೫೮. ಉಗ್ರಸೇನ ೫೯. ಸೇನಾನಿ ೬೦. ದುಷ್ಪರಾಜಯ ೬೧. ಅಪರಾಜಿತ ೬೨ ಕುಂಡಶಾಯಿ ೬೩. ವಿಶಾಲಾಕ್ಷ ೬೪. ವೃಂಧಾರಕ ೬೫. ದೃಢಸಂಧ ೬೬. ಜರಾಸಂಧ ೬೭. ಸದಃಸುವಾಕ ೬೮. ಸತ್ಯಸಂಧ ೬೯. ಉಗ್ರಾಶಯ ೭೦. ದುರಾಧರ ೭೧ ದೃಢಹಸ್ತ ೭೨. ಸುಹಸ್ತ ೭೩. ಸುವರ್ಚಸ ೭೪. ವಾತವೇಗ ೭೫. ಬಹ್ವಾಶಿ ೭೬. ಆದಿತ್ಯಕೇತ ೭೭. ಅಗ್ರಯಾಯಿ ೭೮. ಕವಚಿ ೭೯. ನಾಗದತ್ತ ೮೦. ಕಥನ ೮೧. ಕುಂಡಿ ೮೨. ಕುಂಡಧರ ೮೩. ಭೀಮರಥ ೮೪. ವೀರಬಾಹು ೮೫. ಅಲೋಲುಪ ೮೬. ಅಭಯನಾಮ ೮೭. ರೌದ್ರಕರ್ಮ ೮೮. ದೃಢರಥ ೮೯. ಅನಾಧೃಶ್ಯ ೯೦. ಕುಂಡಭೇದಿ ೯೧. ವಿರಾವಿ ೯೨. ಪ್ರಮಾದ ೯೩. ಪ್ರಮಾದಿ ೯೪. ದೀರ್ಘರೋಮ ೯೫. ವೀರ್ಯವಾನ ೯೬. ದೀರ್ಘಬಾಹು ೯೭. ವ್ಯೂಢೋರ ೯೮. ಕನಕಧ್ವಜ ೯೯. ಕುಂಡಾಶಿ ೧೦೦. ವಿರಜ.

ಈ ಶತಕೌರವರ ಏಕೈಕ ತಂಗಿಯ ಹೆಸರು ದುಃಶಿಲಾ.

- ದ.ರಾ. ಪುರೋಹಿತ

### ತಾಜ್‌ಮಹಲ್

೧೮೩೦ರಲ್ಲಿ ವಿಶ್ವದ ಅದ್ಭುತಗಳಲ್ಲಿ ಒಂದಾದ ತಾಜ್‌ಮಹಲನ್ನು ಹಿಂದಿನ ಶತಮಾನದಲ್ಲೇ ಒಬ್ಬ ಬ್ರಿಟಿಶ್ ವರ್ತಕನಿಗೆ ಮಾರಲಾಯಿತು. ಆತ ಅದರ ಒಂದೊಂದೇ ಭಾಗವನ್ನು ಕಳಚಿ ಇಂಗ್ಲೆಂಡಿಗೆ ಒಯ್ದು ಅಲ್ಲಿ ಮಹಲ್ ಪುನರ್ನಿರ್ಮಿಸಲು ಯೋಚಿಸಿದ್ದ. ಅದಕ್ಕಾಗಿ ಯಂತ್ರಗಳೂ ಬಂದವು. ಆದರೆ ಬ್ರಿಟಿಶ್ ವರ್ತಕರಿಗೆ ಯೋಜನೆ ಲಾಭದಾಯಕವಲ್ಲವೆನಿಸಿದ್ದರಿಂದ ಆ ಕೆಲಸವನ್ನು ಕಾರ್ಯಗತಗೊಳಿಸಲಿಲ್ಲ. ತಾಜ್‌ಮಹಲ್ ಭಾರತದಲ್ಲಿಯೇ ಉಳಿಯಿತು.

- ವಿಜಯ ನ. ಪೂಜಾರಿ

## ಜ್ಞಾನನಿಧಿ

# ಅನ್ಯಗ್ರಹಗಳಲ್ಲಿ ಜ್ವಾಲಾಮುಖಿಗಳು !

ನಿಸರ್ಗದ ರುದ್ರ ಭೀಕರ ಜ್ವಾಲಾಮುಖಿಯ ಪ್ರಕೋಪ ಕೇವಲ ಪೃಥ್ವಿಗೆ ಸೀಮಿತವಾಗಿಲ್ಲ. ಬಾಹ್ಯಾಕಾಶದಲ್ಲಿ ಮಿನುಗುವ ಮೋಹಕ ತಾರೆಗಳ ಒಡಲಲ್ಲಿ ಕೂಡ ಲಾವಾರಸವನ್ನು ಕಾರುವ ದೈತ್ಯ ಜ್ವಾಲಾಮುಖಿಗಳಿವೆ. ಸೌರವ್ಯೂಹದ ಭೀಮಕಾಯವಾದ ಗುರುಗ್ರಹದ ಚಂದ್ರನಲ್ಲೂ ಜ್ವಾಲಾಮುಖಿಗಳು ವಾಯೇಜರ್ ವ್ಯೋಮ ನೌಕೆಯ ಕಣ್ಣಿಗೆ ಕಂಡಿವೆ. ಗುರುಗ್ರಹದ ಚಂದ್ರರಲ್ಲಿ ಇಯೋ, ಯುರೋಪ್, ಗ್ಯಾನಿಮೇಡ ಮತ್ತು ಕ್ಯಾಲಿಸ್ಟೋ ಎಂಬವು ಅತ್ಯಂತ ದೊಡ್ಡವು. ಅವುಗಳಲ್ಲಿ ಗುರುಗ್ರಹವನ್ನು ತೀರ ಹತ್ತಿರದಿಂದ ಪ್ರದಕ್ಷಿಣೆ ಹಾಕುವ ಇಯೋ ನಮ್ಮ ಚಂದ್ರನ ಗಾತ್ರಕ್ಕೆ ಸಮನಾಗಿದೆ. ಕ್ರಿ.ಶ. ೧೯೭೭ರ ಸಪ್ಟಂಬರ್ ಐದರಂದು ವಾಯೇಜರ್ ವ್ಯೋಮ ನೌಕೆಯು ಈ ಗ್ರಹವನ್ನು ವೀಕ್ಷಿಸಿದಾಗ ಇದರಲ್ಲಿನ ಎಂಟು ಜ್ವಾಲಾಮುಖಿಗಳು ಲಾವಾರಸವನ್ನು ಕಾರುತ್ತಿದ್ದವು. ವಾತಾವರಣವಿರದ ಈ ಗ್ರಹಗಳಲ್ಲಿ ಅದರ ಆಂತರಿಕ ತಾಪದಿಂದ ನೀರು ಬಾಷ್ಪವಾಗಿ ಹೊರಹೋಗಿದೆ. ಇಲ್ಲಿರುವುದೆಲ್ಲವೂ ಜ್ವಾಲಾಮುಖಿಯಿಂದ ಹೊರಹೊಮ್ಮಿದ ಗಂಧಕದ ಡೈ ಆಕ್ಸೈಡ್ ಅನಿಲ. ಇಂದಿಗೂ ಇಯೋ ಚಂದ್ರಮನಲ್ಲಿ ಜ್ವಾಲಾಮುಖಿಗಳು ಜೀವಂತವಾಗಿವೆ.

### ಶಾಪವಲ್ಲ ವರ !

೧೯೮೦ರಲ್ಲಿ ಅಮೇರಿಕದ ವಾಷಿಂಗ್‌ಟನ್ ರಾಜ್ಯದಲ್ಲಿರುವ 'ಮೌಂಟ್ ಸೇಂಟ್ ಹೆಲನ್' ಅಗ್ನಿಪರ್ವತ ಬೂದಿ ಉಗುಳಿದಾಗ ಆ ರಾಜ್ಯದ ಪೂರ್ವಭಾಗದಲ್ಲಿರುವ ಭೂಮಿಯ ಮೇಲೆ ಪ್ರತಿ ಚದರ ಮೀಟರಿನ ಮೇಲೆ ಸರಾಸರಿಯಾಗಿ ಮೂವತ್ತು ಕಿಲೋದಷ್ಟು ಬೂದಿ ಕುಳಿತಿತು. ಇದರಿಂದಾಗಿ ಲಕ್ಷಾಂತರ ಡಾಲರಿನಷ್ಟು ಬೆಳೆಗೆ ನಷ್ಟವಾಗುವುದೆಂದು ವ್ಯವಸಾಯ ವಿಜ್ಞಾನಿಗಳು ಆತಂಕಪಟ್ಟರು. ಆದರೆ ಆ ಬೂದಿಗೆ ಕೀಟನಾಶಕ ಗುಣವಿದ್ದುದರಿಂದ ಹಿಂದಿನ ವರ್ಷಕ್ಕಿಂತ ಆ ವರ್ಷ ಹೆಚ್ಚಿನ ಬೆಳೆಯೇ ಬಂತು. ವಾಸ್ತವವಾಗಿ ಪ್ರಕೃತಿ ಅವರಿಗೆ ಮುನಿದಿರಲಿಲ್ಲ, ಒಲಿದಿದ್ದಳು.

- ಹೆಚ್.ಎಸ್.ಎನ್.

### ಸೂರ್ಯನಿಗೂ ಶನಿಯಂಥ ಬಳೆಗಳು !

ಭಾರತೀಯ ವಿಜ್ಞಾನಿಗಳ ಪ್ರಕಾರ ಶನಿಯ ಸುತ್ತಲೂ ಇರುವಂಥ ಬಳೆಗಳು ಅಥವಾ ವಲಯಗಳು ಸೂರ್ಯನ ಸುತ್ತಲೂ ಇವೆ ಎಂಬ ಮಾತು ಈಗ ಪುಷ್ಟಿ ಪಡೆದಿದೆ. ಕಳೆದ ಅಕ್ಟೋಬರ್ ೨೪ರಂದು ಉಂಟಾದ ಸೂರ್ಯಗ್ರಹಣದ ಸಮಯದಲ್ಲಿ ಭಾರತೀಯ ಖಗೋಳ ಶಾಸ್ತ್ರಜ್ಞರು ಆಧುನಿಕ ಟೆಲೆಕ್ಯಾಮರಾಗಳಿಂದ ಸೆರೆಹಿಡಿದ ಸೂರ್ಯವಲಯಗಳ ಛಾಯಾಚಿತ್ರಗಳು ಇದಕ್ಕೆ ಪುರಾವೆ ಒದಗಿಸುತ್ತವೆ.

ಇದಕ್ಕೂ ಮುನ್ನ ಅಮೆರಿಕದ ಅತಿಶಕ್ತಿಶಾಲಿ ದುರ್ಬೀನುಗಳು ಮತ್ತು ಅಂತರಿಕ್ಷದಲ್ಲಿ ಸ್ಥಾಪಿತಗೊಂಡ 'ಹಬ್ಬಲ್' ಆಸ್ಟ್ರೊಟೆಲಿಸ್ಕೋಪ್‌ಗಳಿಂದ ಸೂರ್ಯನ ಪ್ರಭಾಮಂಡಲದೊಂದಿಗೆ ಒಂದು ವಲಯವೂ ಇದೆ ಎಂಬುದನ್ನು ತೋರಿಸಿಕೊಟ್ಟಿದ್ದವು.

# ಜ್ಞಾನನಿಧಿ

ಭಾರತೀಯರಿಂದ ಬೆಳ್ಳಿಚುಕ್ಕಿಯೆನ್ನಿಸಿಕೊಂಡ ಶುಕ್ರಗ್ರಹದಲ್ಲಿ ಕೂಡ ಜ್ವಾಲಾಮುಖಿಗಳಿವೆ. ಜಾನಪದ ಕಥೆಯ ಮಾಂತ್ರಿಕನಿಂದ ಶಿಲೆಯಾಗಿ ಮಾರ್ಪಟ್ಟ ರಾಜಕುಮಾರಿಯಂತೆ, ರೋಮನ್ನರ ಈ ಸೌಂದರ್ಯ ದೇವತೆ (ಶುಕ್ರಗ್ರಹ) ಶಿಲಾಸ್ತರದ ಒರಟು ಮೈಯಿಂದ ಕೂಡಿದೆ. ಜ್ವಾಲಾಮುಖಿಯ ಬಾಯಿಯಿಂದ ಬಂದ ಲಾವಾರಸ ಶುಕ್ರಗ್ರಹದ ಮೈಮೇಲೆ ಶಿಲಾಸ್ತರದ ಹಾಸುಗೆಗಳನ್ನು ಪೇರಿಸಿದೆ. ಆದರೆ ಇದರ ಯಾವ ಭಾಗದಲ್ಲಿ ಜ್ವಾಲಾಮುಖಿಯಿತ್ತೆನ್ನುವುದು ಇಂದಿಗೂ ನಿಗೂಢ.

ಮಂಗಳಗ್ರಹದಲ್ಲಿ ಜ್ವಾಲಾಮುಖಿಗಳಿವೆ. ಇಡೀ ಸೌರವ್ಯೂಹದಲ್ಲಿ ಮಂಗಳಗ್ರಹದಲ್ಲಿರುವ ಜ್ವಾಲಾಮುಖಿಯೇ ಅತ್ಯಂತ ದೊಡ್ಡದು. ೨೫ ಕಿ.ಮೀ. ಎತ್ತರದ, ೬೦೦ ಕಿ.ಮೀ. ಅಗಲ ಪಾದದ ಇದನ್ನು ಒಲಿಂಪಸ್ ಮಾನ್ಸ್ ಎಂದು ಕರೆಯುತ್ತಾರೆ. ಇದರ ಬಾಯಿಯೊಳಗೆ ಇಣುಕಿ ನೋಡಬೇಕೆಂದರೆ ಮೂರು ಎವರೆಸ್ಟ್ ಶಿಖರಗಳನ್ನು ಒಂದರ ಮೇಲೆ ಒಂದರಂತೆ ಇಟ್ಟು ಏಣಿಯನ್ನು ಮಾಡಬೇಕಾಗುತ್ತದೆ. ಇದೆಲ್ಲ ಸೌರವ್ಯೂಹದಲ್ಲಿನ ಜ್ವಾಲಾಮುಖಿಯ ಒಂದಂಶದ ನೋಟ. ನಮ್ಮ ಕ್ಷೀರ ಪಥದಲ್ಲಿ ಸುಮಾರು ೨೦೦,೦೦೦,೦೦೦,೦೦೦ಗಳಿಗೂ ಮಿಕ್ಕಿ ನಕ್ಷತ್ರಗಳಿವೆ. ಇದರಲ್ಲಿ ಸೌರವ್ಯೂಹದ ಅಧಿಪತಿ ಸೂರ್ಯ ಕೇವಲ ಒಂದು ನಕ್ಷತ್ರ ಮಾತ್ರ. ಒಂದು ಅಂದಾಜಿನಂತೆ ಬ್ರಹ್ಮಾಂಡದಲ್ಲಿ ಕ್ಷೀರಪಥಗಳ ಸಂಖ್ಯೆಯೇ ೧೦೦,೦೦೦,೦೦೦,೦೦೦. ಇನ್ನು ಜ್ವಾಲಾಮುಖಿಗಳು?

– ವೆಂಕಟಗಿರಿ ಕುಲಕರ್ಣಿ

## ನಿಸರ್ಗ ಚಿಕಿತ್ಸೆಯೆಂದರೇನು?

ಔಷಧ ತೆಗೆದುಕೊಳ್ಳದೆ ರೋಗ ವಾಸಿಯಾಗುತ್ತದೆಯೇ? ಹೌದು, ವಾಸಿಯಾಗುತ್ತದೆ. ಆಯುರ್ವೇದ, ಅಲೋಪತಿ, ಹೋಮಿಯೋಪತಿ ಮುಂತಾದ ಚಿಕಿತ್ಸಾ ಪದ್ಧತಿಗಳಿರುವಂತೆ ಪ್ರಕೃತಿ ಚಿಕಿತ್ಸೆ ಎಂಬ ವೈದ್ಯ ಪದ್ಧತಿಯ ಪ್ರಕಾರ ಔಷಧ ಸೇವನೆಯಿಲ್ಲದೆ ರೋಗ ವಾಸಿಯಾಗುವ ಕ್ರಮವುಂಟು. ನಿಸರ್ಗದಲ್ಲಿ ಧಾರಾಳವಾಗಿ ದೊರಕುವ ನೀರು, ಮಣ್ಣು ಸೂರ್ಯನ ಬೆಳಕು ಮುಂತಾದುವನ್ನು ಬಳಸಿಕೊಂಡು ಹಾಗೂ ಸತ್ವಭರಿತವಾದ ತರಕಾರಿ, ಸೊಪ್ಪು, ಎಲೆಗಳು ಮುಂತಾದುವನ್ನು ಪರಿಣಿತರಾದ ಪ್ರಕೃತಿ ಚಿಕಿತ್ಸಕರ ಮಾರ್ಗದರ್ಶನದಂತೆ ತೆಗೆದುಕೊಂಡು ರೋಗವನ್ನು ಗುಣಪಡಿಸಿಕೊಳ್ಳಬಹುದು. ಈ ಪದ್ಧತಿಯಲ್ಲಿ ನಾವು ತೆಗೆದುಕೊಳ್ಳುವ ಆಹಾರವೇ ಔಷಧ. ಇಲ್ಲಿ ಹೆಚ್ಚು ಕಡಿಮೆ ವೈದ್ಯರೂ ನಾವೇ, ಚಿಕಿತ್ಸಕರೂ ನಾವೇ.

ಬೆಲ್ಲವನ್ನು ಉಪಯೋಗಿಸಿ ಶುಂಠಿ ಕಾಫಿ, ಮೆಂತ್ಯದ ಪುಡಿಯ ಕಾಫಿ ಮತ್ತು ತುಳಸಿಯ ಕಾಫಿಯನ್ನು ತಯಾರು ಮಾಡಬಹುದು. ತಾವರೆ ಹೂವು ಅಥವಾ ಗುಲಾಬಿ ಹೂವು ಅಥವಾ ಇವುಗಳ ಮಿಶ್ರಣದ ಪುಡಿಯನ್ನು ಟೀ ಪುಡಿಗೆ ಬದಲಾಗಿ ಉಪಯೋಗಿಸಬಹುದು. ತಾವರೆ ಹೂವಿನಿಂದ ತಯಾರಾದ ಚಹಾ ಅಂಗಡಿಗಳಲ್ಲಿ ಮಾರುವ ಚಹಾ ಪುಡಿಗಿಂತ ರುಚಿಕರವಾಗಿರುತ್ತದೆ; ಹೃದಯರೋಗಿಗಳಿಗೆ ತಾವರೆ ಹೂವಿನ ಚಹ ಬಹಳ ಒಳ್ಳೆಯದು.

ಪ್ರಕೃತಿ ಚಿಕಿತ್ಸಾ ಕ್ರಮ ಸರಳವಾದ ಸುರಕ್ಷಿತವಾದ ವೈದ್ಯಕೀಯ ಕ್ರಮ. ಹಣ ಖರ್ಚು ಮಾಡುವ ಪ್ರಮೇಯವೇ ಇಲ್ಲದೆ ಸುಲಭವಾಗಿ ಗುಣ ಹೊಂದಬಹುದು. ಬೆಂಗಳೂರಿನಲ್ಲೊಂದು, ಮೈಸೂರಿನಲ್ಲೊಂದು ಪ್ರಕೃತಿ ಚಿಕಿತ್ಸಾ ಕೇಂದ್ರಗಳಿವೆ.

ಸಂಗ್ರಹ: ಡಿ. ಗುಂಡೂರಾವ್

## ಜ್ಞಾನನಿಧಿ

### ಅಪೂರ್ವ ಅಸ್ಥಿಪಂಜರ

ಐರ್ಲೆಂಡಿನ ಚಾರ್ಲ್ಸ್ ಬಿರ್ನೆ ಎಂಬಾತ ವಿಕಾರಾಕೃತಿಯ ಕರಾಳ ಸ್ವರೂಪದ ಬಹು ಎತ್ತರದ ವ್ಯಕ್ತಿಯಾಗಿದ್ದ. ಅವನ ಮರಣದ ನಂತರ ಅವನ ಅಸ್ಥಿಪಂಜರದ ರಚನೆಯನ್ನು ಅಭ್ಯಸಿಸುವುದಕ್ಕಾಗಿ ಅವನ ಕಳೇಬರವನ್ನು ಪಡೆಯಲು ಲಂಡನ್ನಿನ ಪ್ರಖ್ಯಾತ ಸರ್ಜನ್ ಜಾನ್ ಹಂಟರ್ ಮೊದಲೆ ಹೊಂಚುಹಾಕಿದ್ದ.

ಇದನ್ನು ಅರಿತಿದ್ದ ಜಾರ್ಜ್ ಬಿರ್ನೆ ತನ್ನ ಮರಣಾನಂತರ ತನ್ನ ದೇಹವು ಯಾರಿಗೂ ಸಿಕ್ಕದಂತೆ ಅದನ್ನು ಭಾರವಾದ ಸೀಸದ ಪೆಟ್ಟಿಗೆಯೊಳಗೆ ಹಾಕಿ ಸಮುದ್ರದೊಳಗೆ ಎಸೆಯಲು ವ್ಯವಸ್ಥೆಗಳನ್ನೆಲ್ಲ ಏರ್ಪಡಿಸಿ ಉತ್ತರಕ್ರಿಯೆಗಳು ಮುಗಿಯುವವರೆಗೂ ಕಳೇಬರವನ್ನು ಕಾಯಲು ಬಲವಾದ ಪಹರೆಯಾಳುಗಳನ್ನೂ ಗೊತ್ತುಮಾಡಿ ಅವರಿಗೆ ಕೊಡಲು ಸಂಬಳದ ವ್ಯವಸ್ಥೆಯನ್ನೂ ತಾನು ಬದುಕಿದ್ದಾಗಲೇ ಮಾಡಿದ್ದ. ಸತ್ತ ಮೇಲೆ ಆ ಕಳೇಬರವನ್ನು ಸೀಸದ ಪೆಟ್ಟಿಗೆಯೊಳಗೆ ಹಾಕಿ ಸಮುದ್ರದೊಳಗೆ ಎಸೆಯುವ ಏರ್ಪಾಡುಗಳು ನಡೆಯುತ್ತಿದ್ದಾಗ ಜಾನ್ ಹಂಟರ್ ಪಹರೆಯವರಿಗೆ ಸಾವಿರ ಪೌಂಡ್‌ಗಳನ್ನು ಲಂಚವಾಗಿ ಕೊಟ್ಟು, ಚಾರ್ಲ್ಸ್ ಬಿರ್ನೆಯ ಶವದಾನಿಯನ್ನು ಅಪಹರಿಸಿ, ಮಧ್ಯರಾತ್ರಿಯಲ್ಲಿ ಅದನ್ನು ಕುದುರೆಗಾಡಿಯಲ್ಲಿ ಸಾಗಿಸಿಕೊಂಡು ಹೋಗಿ ಬಹು ಮಹತ್ವದ ವೈದ್ಯಕೀಯ ಸಂಶೋಧನೆಯನ್ನು ನಡೆಸಿದ.

ಅದರಿಂದ ಅಸ್ಥಿಪಂಜರ ರಚನೆಯ ಬಗೆಗೆ ಹಲವಾರು ಮಹತ್ವದ ಸಂಗತಿಗಳು ಬೆಳಕಿಗೆ ಬಂದವು. ಈ ರಾಕ್ಷಸ ಗಾತ್ರದ ಎಲುಬಿನ ಗೂಡು ವೈದ್ಯ ಜಗತ್ತಿನಲ್ಲಿಯೇ ಅದ್ಭುತವಾದುದೆಂದು ಪರಿಗಣಿಸಲ್ಪಟ್ಟಿದೆ.

ಇಂದಿಗೂ ಅದನ್ನು ಲಂಡನ್ನಿನ 'ರಾಯಲ್ ಕಾಲೇಜ್ ಆಫ್ ಸರ್ಜನ್ಸ್' ಸಂಸ್ಥೆಯಲ್ಲಿ ಕಾಣಬಹುದು.

-'ಗೌರಿ ಅಭಿ'

### ಅಕ್ಯುಮೀಟರ್ ಗೊತ್ತೆ ?

ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಏರಿದಷ್ಟೂ ಹೃದಯಘಾತವಾಗುವ ಸಂಭವ ಜಾಸ್ತಿ. ಹೃದಯ ರೋಗಿಗಳಂತೂ ಕೊಲೆಸ್ಟರಾಲ್ ಹೆಚ್ಚಾಗದ ಹಾಗೆ ಯಾವಾಗಲೂ ನಿಗಾವಹಿಸ ಬೇಕು. ಅದಕ್ಕಾಗಿ ರೋಗನಿದಾನಶಾಸ್ತ್ರಜ್ಞರಿಂದ ಮೇಲಿಂದ ಮೇಲೆ ಪರೀಕ್ಷಿಸಿಕೊಳ್ಳಬೇಕು, ಹಣವನ್ನೂ ಸಮಯವನ್ನು ವ್ಯಯಿಸಬೇಕು.

ಅಮೇರಿಕತದ ಡೆಮ್. ಟ್ರ್ಯಾಕ್ ಕಂಪನಿಯವರ ಸಂಶೋಧನೆಯಿಂದಾಗಿ ಈಗ ಹೆಚ್ಚು ಹಣವನ್ನು ಸಮಯವನ್ನೂ ವ್ಯಯಿಸುವ ಕಾರಣವಿಲ್ಲ, ಜೇಬಿನಲ್ಲಿಡಬಹುದಾದಷ್ಟು ಚಿಕ್ಕದಾದ ಕ್ಯಾಸೆಟ್ಟಿನ ಆಕಾರದ ಸಾಧನದಲ್ಲಿ ನಿಶ್ಚಿತ ಸ್ಥಾನದಲ್ಲಿ ಎರಡು ಮೂರು ಹನಿ ರಕ್ತವನ್ನು ಬಿಟ್ಟರಾಯಿತು. ಹತ್ತು ಹನ್ನೆರಡು ನಿಮಿಷಗಳಲ್ಲಿ ಸಾಧನದಲ್ಲಿ ಅಳವಡಿಸಲಾದ ಥರ್ಮಾಮೀಟರಿನಂತಹ ಸೂಚಕದ ಮೇಲೆ ಕೊಲೆಸ್ಟರಾಲ್ ಎಷ್ಟಿದೆಯೆನ್ನುವುದನ್ನು ತೋರಿಸುವ ಸಂಖ್ಯೆ ಮೂಡಿಬರುತ್ತದೆ.

'ಅಕ್ಯುಮೀಟರ್' ಎಂದು ಕರೆಯಲಾಗುವ ಈ ಸಾಧನದ ಬೆಲೆಯೂ ಬಹಳವಿಲ್ಲ, ಬರಿ ಐನೂರು ರೂಪಾಯಿಗಳು ಮಾತ್ರ. ಯೂರೋಪಿನ ದೇಶಗಳಲ್ಲಿಂದು ಧಾರಾಳವಾಗಿ ಇದು ಲಭ್ಯ. ಭಾರತದಲ್ಲಿಯೂ ಅದು ದೊರೆಯುವ ಕಾಲ ಸದ್ಯದಲ್ಲೆ ಬರಬಹುದು.

ಸ್ವಾರಸ್ಯದ ವಿಷಯವೆಂದರೆ ಈ ಸಾಧನವನ್ನು ನಿರ್ಮಿಸಿದ ಅಮೇರಿಕಾದ ಸಂಸ್ಥೆಯ ಅಧ್ಯಕ್ಷರು ಭಾರತೀಯರೇ ಆದ ಡಾ. ಪ್ರೀತಿಪಾಲ ಸಿಂಗ್ ಅವರು.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.**

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಶಬ್ದವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

---

೧. **ಅನ್ಯಕರ್ತೃಕ**
(ಅ) ಬೇರೊಬ್ಬರಿಂದ ಮಾಡಲ್ಪಟ್ಟ
(ಆ) ವಿರೋಧ ಮಾಡುವ
(ಇ) ತಪ್ಪು ಮಾಡುವ
(ಈ) ಒಬ್ಬನನ್ನೇ ನಂಬಿದ

೨. **ಅಸ್ವಸ್ತಿಕರ**
(ಅ) ನಾಶ ಮಾಡುವ
(ಆ) ರೋಗಜನಕ
(ಇ) ನೆಲೆಗೆಟ್ಟ
(ಈ) ಅಮಂಗಲಕರ

೩. **ಅನುಶಯ**
(ಅ) ಅಪ್ಪಣೆ
(ಆ) ಪಶ್ಚಾತ್ತಾಪ
(ಇ) ಹತ್ತಿರ ಮಲಗುವುದು
(ಈ) ಬೆಂಬಲ

೪. **ಅನುರಣನ**
(ಅ) ಕರುಣೆ
(ಆ) ಯುದ್ಧದಲ್ಲಿ ಬೆನ್ನಟ್ಟುವುದು
(ಇ) ಗಂಟೆಯ ಪ್ರತಿಧ್ವನಿಗಳು
(ಈ) ಎತ್ತರ

೫. **ನ್ಯೂನಾಧಿಕ**
(ಅ) ಸತ್ಯ
(ಆ) ಹೊಸ ಸಂಗತಿ
(ಇ) ಹೆಚ್ಚು ಕಡಿಮೆ
(ಈ) ಮಿತಿ ಮೀರಿದ

೬. **ಆಮುತ್ರ**
(ಅ) ಪರಲೋಕದಲ್ಲಿ
(ಆ) ವಿಕಾರವಿಲ್ಲದ
(ಇ) ವೈಷ್ಣವನಲ್ಲದ
(ಈ) ಬ್ರಹ್ಮಚಾರಿ

೭. **ಅಸಕಳಿ**
(ಅ) ಬಳಲು
(ಆ) ಕೈಮೀರಿ ಹೋಗು
(ಇ) ಸ್ವಲ್ಪ
(ಈ) ಲಗುಬಗೆ

೮. **ಅಸವಳಿ**
(ಅ) ಕೈಮೀರಿ ಹೋಗು
(ಆ) ಒಂದು ಆಭರಣ
(ಇ) ಮಾನಗೇಡು
(ಈ) ಬಳಲು

೯. **ಮಿತುಷ್ಟಿ**
(ಅ) ಅಸಂತೋಷ
(ಆ) ಸಮಾಧಾನ
(ಇ) ವಿಶೇಷವಾದ
(ಈ) ಕೇಡು

೧೦. **ನಿಗಮನ**
(ಅ) ಹೊರಟು ಹೋಗುವುದು
(ಆ) ತರ್ಕದಿಂದ ಹೊರಡಿಸುವ ನಿಷ್ಕರ್ಷೆ
(ಇ) ಇದ್ದಲ್ಲೇ ಇರುವುದು
(ಈ) ತಿಳಿವಳಿಕೆ

೧೧. **ನಿರಾಸ**
(ಅ) ನಿರ್ಣಯ
(ಆ) ಬಂಡಮಾಳ
(ಇ) ಸುಳ್ಳೆಂದು ಸಿದ್ಧಪಡಿಸುವುದು
(ಈ) ಪರದೇಶಗಮನ

೧೨. **ಸಂಲಗ್ನ**
(ಅ) ಹಗುರವಾದ
(ಆ) ನಿರ್ಬಲ
(ಇ) ಪೆಟ್ಟುತಿಂದ
(ಈ) ತಗಲಿದ

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. ಅನ್ಯಕರ್ತೃಕ:

(ಅ) ಬೇರೊಬ್ಬರಿಂದ ಮಾಡಲ್ಪಟ್ಟ, ಬೇರೊಬ್ಬನು ಕರ್ತೃವಾಗಿರುವ. ಉದಾ: ಕಾಳಿದಾಸನದೆಂದು ಭಾವಿಸಲ್ಪಟ್ಟ ಈ ಕಾವ್ಯ ಅನ್ಯ ಕರ್ತೃಕವಾಗಿ ಕಾಣಿಸುತ್ತದೆ (ಸಂ. ಅನ್ಯ = ಬೇರೊಬ್ಬರು, ಕರ್ತೃಕ = ಕರ್ತೃವಾಗಿರುವ)

೨. ಅಸ್ವಸ್ತಿಕರ

(ಈ) ಅಮಂಗಳಕರ, ಅಶುಭಕರ, ಹಿತವನ್ನುಂಟು ಮಾಡದ, ಒಳ್ಳೆಯದಲ್ಲದ. ಉದಾ: ಯುದ್ಧವು ಎರಡೂ ಪಕ್ಷಗಳಿಗೆ ಅಸ್ವಸ್ತಿಕರವಾದದ್ದು. (ಸಂ. ಅ = ಅಲ್ಲ, ಸ್ವಸ್ತಿಕರ = ಮಂಗಳಕರ)

೩. ಅನುಶಯ:

(ಅ) ಪಶ್ಚಾತ್ತಾಪ, ಅನುತಾಪ, ಆಗಿಹೋದದ್ದಕ್ಕಾಗಿ ದುಃಖ (ಸಂ.)

೪. ಅನುರಣನ:

(ಇ) ಗಂಟೆಗಳ ಅಥವಾ ಗೆಜ್ಜೆಗಳ ಪ್ರತಿಧ್ವನಿಗಳು ಹೊರಡುವುದು, ನಾದದ ಗುಂಜನ, ಧ್ವನಿತಾರ್ಥ (ಸಂ. ಅನು =ಅನುಸರಿಸಿ, ರಣನ = ನಾದ ಮಾಡುವಿಕೆ)

೫. ನ್ಯೂನಾಧಿಕ:

(ಇ) ಹೆಚ್ಚು ಕಡಿಮೆ, ಉದಾ: ಲೆಕ್ಕದಲ್ಲಿ ನ್ಯೂನಾಧಿಕವಾಗದಂತೆ ನೋಡಿಕೊಳ್ಳಬೇಕು. (ಸಂ. ನ್ಯೂನ = ಕಡಿಮೆ, ಅಧಿಕ = ಹೆಚ್ಚು)

೬. ಅಮುತ್ರ:

(ಅ) ಪರಲೋಕದಲ್ಲಿ, ಆ ಲೋಕದಲ್ಲಿ, ಉದಾ: ಅಮುತ್ರ ಸುಖಪ್ರಾಪ್ತಿಗಾಗಿ ಕಷ್ಟಪಡುತ್ತಾನೆ. (ಸಂ. ಅಮುತ್ರ = ಅಲ್ಲಿ)

೭. ಅಸಕಳಿ:

(ಅ) ಕೈಮೀರಿ ಹೋಗು, ಮಿತಿಮೀರಿ ಹೋಗು, ಮಿಂಚಿ ಹೋಗು, ಅತಿಕ್ರಮಿಸು (ಕನ್ನಡ).

೮. ಅಸವಳಿ:

(ಈ) ಬಳಲು, ಬೇಸರಪಡು, ತೀರ ದಣಿದು ಹೋಗು, ಸಾಯು (ಸಂ. ಅಸು + ಕನ್ನಡ ಅಳಿ ?)

೯. ವಿತುಷ್ಟಿ:

(ಅ) ಅಸಂತೋಷ, ಅಸಮಾಧಾನ. ಉದಾ: ದಬ್ಬಾಳಿಕೆಯಿಂದ ದೇಶದಲ್ಲಿ ವಿತುಷ್ಟಿ ಬೆಳೆಯಿತು. (ಸಂ. ವಿ = ಇಲ್ಲ, ತುಷ್ಟಿ = ಸಂತೋಷ)

೧೦. ನಿಗಮನ:

(ಅ) ತರ್ಕದಿಂದ ಹೊರಡಿಸುವ ನಿಷ್ಕರ್ಷೆ, ವೇದಗಳಿಂದ ಆಧಾರ ಕೊಡುವುದು (ಸಂ.)

೧೧. ನಿರಾಸ:

(ಇ) ಸುಳ್ಳೆಂದು ಸಿದ್ಧಪಡಿಸುವುದು, ಹೊರತಳ್ಳುವುದು. ಉದಾ: ಅವನ ವಾದಗಳನ್ನು ನಿರಾಸಗೊಳಿಸಲಾಯಿತು (ಸಂ.)

೧೨. ಸಂಲಗ್ನ:

(ಈ) ತಗಲಿದ, ಅಂಟಿಕೊಂಡ. ಉದಾ: ಅವರಿಬ್ಬರ ಹೊಲಗಳು ಸಂಲಗ್ನವಾಗಿವೆ. (ಸಂ. ಸಂ = ಚೆನ್ನಾಗಿ, ಲಗ್ನ = ತಗಲಿಕೊಂಡ)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

೬-೮ ಸರಿಯಿದ್ದರೆ .......ಸಾಧಾರಣ

೯-೧೦ -,,- .......ಉತ್ತಮ

೧೧-೧೨ -,,- .......ಅತ್ಯುತ್ತಮ

# ಭಿಕ್ಷುಕೋಪಾಖ್ಯಾನ



**ಬಲಿ, ಕರ್ಣ, ಶಿಬಿಗಳು ಇರುವಷ್ಟು ಕಾಲವೂ ಬೇಡುವವರು ಇರುತ್ತಾರೆ. ಆದರೆ ದುಃಖದ ವಿಷಯವೆಂದರೆ ಕೇಳುವ ಶೈಲಿಯಲ್ಲಿ ಶತಮಾನಗಳ ಕಾಲದಿಂದಲೂ ಪರಿವರ್ತನೆಯಾಗದಿರುವುದು.**

-ಸೂರಿ ಹಾರ್ದಳ್ಳಿ

ಅನೇಕಾನೇಕ ಪಿ.ಎಚ್.ಡಿ.ಗಳನ್ನು ಮಾಡಿರಬಹುದು, ತಮ್ಮ ಹೆಸರಿನ ಮುಂದೆ ನೂರಾರು ಬಿರುದು-ಬಾವಲಿಗಳನ್ನು ಸೇರಿಸಿಕೊಂಡಿರಬಹುದು, ಆದರೆ ಆ ಪ್ರತಿಭೆಗಳೆಲ್ಲಕ್ಕಿಂತ ಒಂದು ಕೈ ಮೇಲೆ ಭಿಕ್ಷೆ ಬೇಡುವ ಕಲೆ ಎಂಬುದು ನನ್ನ ಅಭಿಪ್ರಾಯ. ವಿದ್ಯೆ ಅನ್ನುವುದು ಈಗಿನ ಕಾಲದ ಕಾಸಿಗೆ ವಿಕ್ರಯವಾಗುವ ವಸ್ತುವಾಗಿ ಪರಿವರ್ತನೆಗೊಂಡಿದೆ; ಕಾಸಿಗೆರಡರ ಹಾಗೆ ಅರ್ಹತಾಪತ್ರ ಅಥವಾ ಪದವಿಪತ್ರಗಳನ್ನು ಹೊಂದಿರುವವರು ಸಿಗಬಹುದು. ಆದರೆ ಭಿಕ್ಷಾಟನೆಯ ಕಲೆಯನ್ನು ಮಾತ್ರ ಸ್ವತಃ ಶ್ರಮವಹಿಸಿ ಕಲಿಯಬೇಕು.

ಸ್ವತಃ ಶ್ರಮ ಎಂದು ಯಾಕೆ ಹೇಳಿದೆನೆಂದರೆ, ಅದನ್ನು ಕಲಿಸಲು ನಮ್ಮಲ್ಲಿ ವಿಶ್ವವಿದ್ಯಾಲಯಗಳಿಲ್ಲ, ಪಾಠಶಾಲೆಗಳೂ ಇಲ್ಲ. ಆ ಸರ್ಟಿಫಿಕೇಟುಗಳನ್ನು ಮಾನ್ಯಮಾಡಿ ಕೆಲಸಕೊಡುವವರೂ ನಮ್ಮ ಮಹಾನ್ ದೇಶದಲ್ಲಿ ಇಲ್ಲ. ಇದು ನೈಪುಣ್ಯದಿಂದ ಕಲಿಯಬೇಕಾದ ವಿದ್ಯೆ. ಸಾಕಷ್ಟು ಪರಿಶ್ರಮ, ಜಾಣ್ಮೆ ಸಮಯಪ್ರಜ್ಞೆ ಇದಕ್ಕೆ ಬೇಕು. ಇಷ್ಟೆಲ್ಲಾ ಇದ್ದರೂ ನಮ್ಮ 'ನಾಗರಿಕ'ರೆನಿಸಿಕೊಂಡ ಜನ ಅದನ್ನು ತುಚ್ಛವಾಗಿ ಕಾಣುತ್ತಾರಲ್ಲ ಎಂಬುದು ನನ್ನ ನೋವು.

ಒಂದು ಅರ್ಥದಲ್ಲಿ ಹೇಳುವುದಾದರೆ ನಾವೆಲ್ಲ ಒಂದು ರೀತಿಯಲ್ಲಿ ಭಿಕ್ಷುಕರೇ. ದೇವರ ವರ ಬೇಡುವ ಭಕ್ತ, ಲಂಚಕ್ಕಾಗಿ ಕೈಯೊಡ್ಡುವ ನೌಕರ, ಸಹಾಯಕ್ಕಾಗಿ ಯಾಚಿಸುವ ಸಂಸ್ಥೆಗಳು, ಎಲ್ಲಕ್ಕಿಂತ ಮುಖ್ಯವಾಗಿ ವಿದೇಶೀ ಸಾಲಕ್ಕಾಗಿ, ನೆರವಿಗಾಗಿ ಕೈ ಚಾಚುವ ನಮ್ಮ ಸರಕಾರ, ಎಲ್ಲರೂ ಮಾಡುವುದು ಭಿಕ್ಷಾಟನೆಯ ವಿವಿಧ ಮುಖಗಳನ್ನಷ್ಟೇ. ಹೀಗಿದ್ದಾಗ ಬೀದಿಯಲೆದು ಬೇಡುವವರನ್ನಷ್ಟೇ ಯಾಕೆ ನಿಕೃಷ್ಟವಾಗಿ ನೋಡುವುದು? ಅಂದಹಾಗೆ ಸ್ವಲ್ಪ ಈ ಬೀದಿ ಭಿಕ್ಷುಕರ ಬಗ್ಗೆ ಹೇಳುವೆ:

ಮೊದಲು ಭಿಕ್ಷೆಬೇಡಲು ಸರಿಯಾದ ಸ್ಥಳವನ್ನು ಆರಿಸಿಕೊಳ್ಳಬೇಕು. ಜನ ಸಂದಣಿ ಹೆಚ್ಚು ಇರುವ ಜಾಗ, ಪಾಪ ನಿವೇದನೆಗೆ ನಿಗದಿಗೊಂಡ ಜಾಗ, ಅತಿ ಉತ್ಸಾಹದಿಂದ ಜನ ಪಾಲ್ಗೊಳ್ಳುವ ಜಾಗ, ಅಷ್ಟೇ ಅಲ್ಲ, ಆಯಾ ಸಂದರ್ಭಕ್ಕೆ ಸರಿಯಾಗಿ ವೇಷ-ಭೂಷಣಗಳನ್ನು ಹೊಂದಿರಬೇಕು. ಸರಳವಾಗಿ ಹೇಳಬೇಕೆಂದರೆ ಮಂಗಳವಾರ ಅಮ್ಮನವರ ಗುಡಿಯ ಮುಂದೆ ಮೈತುಂಬಾ ವಿಭೂತಿ ಬಳಿದುಕೊಂಡು, ಕಾಷಾಯ ಬಟ್ಟೆ ಧರಿಸಿಕೊಂಡು, ಕೈಯಲ್ಲಿ ಒಂದು ತ್ರಿಶೂಲವೋ, ಇನ್ನೇನನ್ನೋ ಹಿಡಿದುಕೊಂಡು ಕುಳಿತರೆ ಬೇಡ ಬೇಡ ಎಂದರೂ ಒಳ್ಳೆಯ ಸಂಪಾದನೆ. ಎದುರುಗಡೆ ಕುಂಕುಮಭರಿತ ಲಿಂಬೆ ಹಣ್ಣು, ಮಂಡಲ, ಕೆಂಪು ವಸ್ತ್ರವೂ ಇದ್ದರೆ ಮತ್ತಷ್ಟು ಪರಿಣಾಮಕಾರಿಯಾಗಿರುತ್ತದೆ.

ಶುಕ್ರವಾರ ಮಸೀದಿಯ ಮುಂದೆ ಕುಳಿತುಕೊಳ್ಳುವುದು ಜಾಣತನ. ಭಾನುವಾರ ಚರ್ಚ್, ಗುರುವಾರ ರಾಯರ ಮಠದ ಎದುರು ಒಳ್ಳೆಯ ಬಿಸಿನೆಸ್. ಮದುವೆ ಮನೆಗಳ ಎದುರು ಕುಳಿತರೆ ಕೈ ಖಾಲಿ; ಆದರೆ ಬಾರ್‌ಗಳಿಂದ ಹೊರಬರುವ ಜನರಲ್ಲಿ ಕೆಲವರು ತುಂಬಾ ಧಾರಾಳಿಯಾಗಿರುತ್ತಾರೆ.

ಜನರ ಕರುಳನ್ನು ಕಿವಿಚುವ ಕಲೆ ಕರಗತವಾಗಿರಬೇಕು. ಉದಾಹರಣೆಗೆ ಮೈ-ಕೈಗಳನ್ನೆಲ್ಲಾ ಚುಚ್ಚಿಕೊಂಡು, ನಾಲಿಗೆ ಸೀಳಿಕೊಂಡು, ಬೆನ್ನಿನ ಚರ್ಮಕ್ಕೆ ಹಗ್ಗ ಕಟ್ಟಿಕೊಂಡು ಅದೇನನ್ನೋ ಎಳೆಯುವುದು. ಇಂತಹ ಕಠಿಣ ಕಲೆಗಳನ್ನು ಮಾಡುವ ಗುಂಡಿಗೆ ಎಲ್ಲರಿಗೂ ಇರುವುದಿಲ್ಲ. ಕುರುಡ, ಕುಂಟ, ಕೈಯಿಲ್ಲದವ, ರೋಗಿ ಮುಂತಾದ ಸಾಮಾನ್ಯ ಕಲಾವಿದರನ್ನು ಜನ ಕ್ಯಾರೇ ಅನ್ನುವುದಿಲ್ಲ. ಅನೇಕ ಇಂತಹ ನಟವರೇಣ್ಯರು ಇಂದು ಕುರುಡರಾಗಿ, ನಾಳೆ ಕಿವುಡರಾಗಿ, ನಾಡಿದ್ದು ಮೂಗರಾಗಿ ನಟಿಸುವುದಿದೆ. ಆದರೆ ಕುರುಡರಾಗಿರುವುದು ಬಲು ಕಷ್ಟ. ಈಗಿನ ಜನರನ್ನು ನಂಬಲಿಕ್ಕಾಗುವುದಿಲ್ಲ. ಎದುರು ಇರುವ ಕಾಸನ್ನೇ ಎತ್ತಿಕೊಂಡು ಹೋಗುವುದೂ ಇದೆ.

ಕೆಲ ಒಳ್ಳೆಯ ಜೋಕುಗಳು ಕುರುಡ ತಿರುಪೆಯವರ ಬಗ್ಗೆ ಇವೆ. ಒಬ್ಬ, "ಅಮ್ಮಾ ತಾಯಿ ಕುರುಡ, ಎಂಟಾಣೆ ಭಿಕ್ಷೆ ಹಾಕಿ," ಎಂದನಂತೆ. ಹೆಂಗಸರದು ಹೆಂಗರುಳು ಎಂಬುದೂ ಇವರಿಗೂ ಗೊತ್ತು. ಸಾಮಾನ್ಯವಾಗಿ ಧಾರಾಳಿಗಳಾಗಿರುವವರೂ ಅವರೇ ಎಂಬುದು ಜಾಗತಿಕ ಸತ್ಯ. ಅದಕ್ಕೇ ಅವರು ಎಲ್ಲರನ್ನೂ ಹಾಗೇ ಕೂಗುವುದು.



ಒಬ್ಬ ಅಧಿಕಪ್ರಸಂಗಿ, "ಅಲ್ಲಯ್ಯಾ, ನಿನಗೆ ಒಂದೇ ಕಣ್ಣು ಕುರುಡು..." ಅಂದನಂತೆ. "ಸರಿ, ಹಾಗಾದರೆ ನಾಲ್ಕಾಣೆ ಹಾಕಿ ಸಾಕು," ಎಂದು ಉತ್ತರಿಸಿದನಂತೆ ಭಿಕ್ಷುಕ.

ಚಿಲ್ಲರೆ-ಪಲ್ಲರೆ ಕಾಸನ್ನು ಕೇಳುವುದಿಲ್ಲ ಈಗಿನ









ತಿರುಪೆಯವರು. ಐದೋ ಹತ್ತೋ ಪೈಸೆ ಹಾಕಿದರೆ ಹಾಕಿದವನ ಮುಖದ ಮೇಲೆಯೇ ಎಸೆಯುತ್ತಾರೆ. ನಾಲ್ಕಾಣೆ ಚಿಲ್ಲರೆ ವಾಪಸು ಕೇಳಿದರೆ ಕಂಡಕ್ಟರನು ದುರುದುರು ನೋಡುವುದಿಲ್ಲವೇ ಹಾಗೆ!

ಕಣ್ಣು ಸರಿಯಾಗಿದ್ದೂ ಕುರುಡ ಎಂದು ಹೇಳಿಕೊಂಡು ಭಿಕ್ಷೆ ಕೇಳುತ್ತಿದ್ದವನೊಬ್ಬನನ್ನು ಒಬ್ಬ ತರಾಟೆಗೆ ತೆಗೆದುಕೊಂಡನಂತೆ, "ಅಲ್ಲಯ್ಯಾ ಸುಳ್ಳು ಯಾಕೆ ಹೇಳಬೇಕು?"

"ಹಾಗಿಲ್ಲ ಸ್ವಾಮಿ.. ಇಲ್ಲೊಬ್ಬ ಇದ್ದ.. ಅವನ ಪರವಾಗಿ ನಾನು ತಾತ್ಕಾಲಿಕವಾಗಿ ಕುರುಡನಾಗಿದ್ದೀನಿ," ಆತ ವಿನಮ್ರತೆ ನಟಿಸಿ.

"ಅವನು ಎಲ್ಲಿ ಹೋಗಿದ್ದಾನೆ?"

"ಸಿನೆಮಾಕ್ಕೆ." ಇದು ಅವನ ಉತ್ತರ.

ಭಿಕ್ಷುಕರನ್ನು ಜಾಣರಲ್ಲಿ ಜಾಣರು ಎನ್ನುವವನು ನಾನು. ಭಿಕ್ಷುಕ ಪರಿಹಾರ ಕೇಂದ್ರದಿಂದ ತಪ್ಪಿಸಿಕೊಂಡು ಬಂದು ಪುನಃ ಅದೇ ವೃತ್ತಿಗೆ ಇಳಿಯುವವರೇ ಬಹಳ. ಯಾಕೆಂದರೆ ಇಲ್ಲಿ ಸಂಪಾದನೆ. ಅದೂ ಆದಾಯ ತೆರಿಗೆ ರಹಿತ, ಸಿಕ್ಕಾಪಟ್ಟೆ. ಕೆಲ ಲಕ್ಷಾಧೀಶ ಭಿಕ್ಷಾಧಿಪತಿಗಳ ಕತೆ ನಿಮಗೆಲ್ಲಾ ತಿಳಿದೇ ಇದೆ.

ಒಂದುಕೈಲಿ ಭಿಕ್ಷೆ ಬೇಡುತ್ತಿದ್ದ ಒಬ್ಬ ಎರಡೂ ಕೈಗಳನ್ನು ಚಾಚತೊಡಗಿದಾಗ ಒಬ್ಬ ಕೇಳಿದನಂತೆ, "ಯಾಕೋ ಹೀಗೆ?" ಅಂತ.

"ಬಿಸಿನೆಸ್ ಇಂಪ್ರೂವ್ ಆಗಿದೆ ಸ್ವಾಮಿ, ಇನ್ನೊಂದು ಬ್ರಾಂಚ್ ತೆರೆದಿದ್ದೇನೆ," ಎನ್ನಬೇಕೇ ಅವನು!

ಭಿಕ್ಷುಕರಿಗೆ ಸಮಾಜದಲ್ಲಿ ಸರಿಯಾದ ಸ್ಥಾನಮಾನ ಇಲ್ಲ. ನಾಗರಿಕರೆನಿಸಿಕೊಂಡವರು ಅವರನ್ನು ಕೀಳಾಗಿ ನೋಡುತ್ತಿದ್ದಾರೆ ಎಂಬುದು ದುಃಖದ ವಿಷಯ. ಸಮಾಜವನ್ನೇ ಹಾಳುಮಾಡುವ ಘಾತುಕರಿಗಿಂತ ಇವರು ಸಾವಿರ ಪಾಲು ಮೇಲು.





ಲಂಚಕೋರರು, ಭ್ರಷ್ಟರು, ಕಳ್ಳಸಾಗಾಟಗಾರರು ಇವರೆಲ್ಲಾ 'ಗಣ್ಯರು' ಅನಿಸಿಕೊಳ್ಳುತ್ತಾರೆ, ಆದರೆ ಇವರು?

ನನ್ನ ಅಭಿಪ್ರಾಯದಲ್ಲಿ ಸರಕಾರ ಭಿಕ್ಷುಕರನ್ನು ನಿರ್ಮೂಲಗೊಳಿಸುವ ಉದ್ದೇಶ ಕೈಬಿಟ್ಟು ಅವರಿಗೆಂದೇ ಕೆಲ ಪ್ರಶಸ್ತಿಗಳನ್ನು ಮೀಸಲಿಡಬೇಕು. ಉದಾಹರಣೆಗೆ: 'ಭಿಕ್ಷುಶ್ರೀ', 'ಭಿಕ್ಷಾಭೂಷಣ' ಇತ್ಯಾದಿ. ಅವರಿಗೂ ಇತರ ಜೊತೆ ಸಮಾನ ಗೌರವ ಸಿಗುವ ಹಾಗೆ ಶ್ರಮಿಸಬೇಕು. ಅವರಿಗೆ ರಕ್ಷಣೆ ಸಮಾನ-ಮರ್ಯಾದೆಗಳನ್ನು ಒದಗಿಸಬೇಕು. ಅವರಲ್ಲಿರುವ ಬುದ್ಧಿವಂತರನ್ನು ಗುರುತಿಸಿ, ಅವರ ಪ್ರತಿಭೆ ಅವರಲ್ಲಿಯೇ ಕಮರಿ ಹೋಗದೆ ಬೆಳಕಿಗೆ ಬರುವಂತೆ ಮಾಡಬೇಕು. ಅರ್ಹರಿಗೆ ಸೂಕ್ತ ಸ್ಮಾರಕಗಳನ್ನು ಏರ್ಪಡಿಸಬೇಕು. ಇದೆಲ್ಲಾ ನಮಗೆ ಒಳ್ಳೆಯ ಸರಕಾರ ದೊರೆತಾಗ ಮಾತ್ರ ಎಂಬುದು ನನ್ನ ಅಭಿಮತ.

ಒಬ್ಬ ಮನೆಯಾಕೆ ಕಿಟಕಿಯಿಂದ ಹೊರಗೆ ನಿಂತಿರುವ 'ಬೇಡುವವ'ನನ್ನು ನೋಡಿ ಅಂದಳಂತೆ, "ಅಲ್ಲಪ್ಪಾ.. ಗಟ್ಟಿಮುಟ್ಟಾಗಿದ್ದಿ. ಭಿಕ್ಷೆ ಬೇಡುವ ಬದಲು ದುಡಿದು ತಿನ್ನಬಾರದೇ?" ಅಂತ.

ಅದಕ್ಕೆ ಭಿಕ್ಷುಕನ ಉತ್ತರ ಏನಿರಬಹುದು? "ಎಲ್ಲಾ ಅವರವರ ಅದೃಷ್ಟ ತಾಯೀ, ನೀವು ನೋಡಿದರೆ ಥೇಟ್ ಸಿನೆಮಾ ನಟಿಯ ಹಾಗೆ ಇದ್ದೀರಿ. ಸಿನೆಮಾ ಫೀಲ್ಡಿಗೆ ಇಳಿದಿದ್ದರೆ ಶ್ರೀದೇವಿ-ಮಾಧುರಿಗಳೆಲ್ಲಾ ನಿಮ್ಮೆದುರು ಮಣ್ಣುಮುಕ್ಕುತ್ತಿದ್ದರು. ಆದರೆ ಏನು ಮಾಡೋದು. ಮನೇಲಿ ಅಡುಗೆ ಮಾಡೋದು ನಿಮ್ಮ ಹಣೇಲಿ ಬರ್ದಿದೆ ಅಲ್ವೇ? ಎಲ್ಲಾ ಪಡಕೊಂಡು ಬಂದದ್ದು."

ತಿರುಪೆಯುವನಿಗೆ ಅಂದು ರಸಕವಳ ಖಾತರಿ.

ದೇವಸ್ಥಾನದಿಂದ ಹೊರಬರುವ ಭಕ್ತ ತನ್ನ ಭಕ್ತಿಯ ಫಲದ ಪರಿಣಾಮವನ್ನು ಮೊದಲು ಕಾಣಿಸಿದ ಭಿಕ್ಷುಕನಲ್ಲಿ ತೋರಿಸಿಕೊಳ್ಳುತ್ತಾನೆ. ಹಾಗಾಗಿ ಮೊದಲು, ಅಂದರೆ ದೇವಾಲಯದ ಹೊರ ಬಾಗಿಲಲ್ಲಿ ಮೊದಲು, ಕುಳಿತವನು ಹೆಚ್ಚು ಗಳಿಸಬಲ್ಲ. ಆ ಸೀಟಿಗಾಗಿ ಹೊಡೆದಾಟ-ಬಡಿದಾಟ ಆಗುವುದೂ ಇರುತ್ತದೆ. ರಾತ್ರೆಯೇ ಆ ಜಾಗವನ್ನು ಕಾಯ್ದಿರಿಸಿಕೊಳ್ಳಬೇಕಿರುತ್ತದೆ.

"ಅಮ್ಮಾ ಪಾಯಸ ಭಿಕ್ಷೆ ಹಾಕಿ," ಎಂದು ಒಬ್ಬ ಮನೆಯಾಕೆಯನ್ನು ಕೇಳಿದನಂತೆ. "ಯಾಕಪ್ಪಾ?" ಅಂತ ಕುತೂಹಲದಿಂದ ಕೇಳಿದಳು ಅವಳು. "ಏನಿಲ್ಲ ತಾಯಿ, ಇವತ್ತು ನನ್ನ ಬರ್ತ್‌ಡೇ, ಅದಕ್ಕೆ" ಅಂದನಂತೆ ಭಿಕ್ಷುಕ. ವಸುಧೈವ ಕುಟುಂಬಕಂ ಅನ್ನುವುದಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆ ಬೇಕೆ?

ಭಿಕ್ಷುಕರು ತೆರಿಗೆಯ ವ್ಯಾಪ್ತಿಗೆ ಒಳಪಡುವುದಿಲ್ಲ ಎನ್ನುವುದನ್ನು ಗಮನಿಸಿ. ಈ ಭಾರತದಲ್ಲಿ ಸರಿಯಾಗಿ ತೆರಿಗೆ ಪಾವತಿ ಮಾಡಬೇಕಾದರೆ ಸಂಪಾದಿಸುವ ಹಣವೇ ಸಾಲುವುದಿಲ್ಲ. ಆ ವಿಷಯದಲ್ಲಿ ಅವರು ಅದೃಷ್ಟಶಾಲಿಗಳು ಎನ್ನುವವನು ನಾನು.

ಬಲಿ, ಕರ್ಣ, ಶಿಬಿಗಳಿರುವಷ್ಟು ಕಾಲ ಬೇಡುವವರೂ ಇರುತ್ತಾರೆ. ಆದರೆ ದುಃಖದ ವಿಷಯವೆಂದರೆ ಕೇಳುವ ಶೈಲಿಯಲ್ಲಿ ಶತಮಾನಗಳ ಕಾಲದಿಂದಲೂ ಪರಿವರ್ತನೆಯಾಗದೆ ಇರುವುದು. ಉದಾರೀಕರಣದಿಂದಾಗಿ ಭಾರತದ ಅರ್ಥವ್ಯವಸ್ಥೆ ಪಾಶ್ಚಾತ್ಯೀಕರಣಗೊಂಡಿದೆ, ಸಿನೆಮಾಗಳಿಂದಾಗಿ ನಡೆ-ನುಡಿ- ಪ್ರವೃತ್ತಿಗಳು ಮೇಲ್ಮಟ್ಟಕ್ಕೆ-ಅರ್ಥಾತ್ ಮುಂದುವರಿದ ದೇಶಗಳಂತೆ ಆಗುತ್ತಿವೆ. ಆದರೆ ನಮ್ಮ ಭಿಕ್ಷುಕ ಮಹನೀಯರು ಮಾತ್ರ ಇನ್ನೂ ಹಳೆಯ ಶೈಲಿಯನ್ನೇ ಅಳವಡಿಸಿಕೊಂಡಿದ್ದಾರೆ. ಅದರಲ್ಲಿ ಬದಲಾವಣೆಯೇ ಇಲ್ಲ ಎಂಬುದು ನಿಜಕ್ಕೂ ಕಳಕಳಿಯ ವಿಚಾರ.

ಉದಾಹರಣೆಗೆ, ಜರ್ಮನಿಯಿಂದ ಹಿಂದಿರುಗಿದ ನನ್ನ ಸ್ನೇಹಿತರೊಬ್ಬರು ತಾವು ಕಂಡ ಘಟನೆಯನ್ನು ವಿವರಿಸುತ್ತಾ, ಅಲ್ಲಿ ಭಿಕ್ಷುಕರು ಕೂಡಾ ಠಾಕುಠೀಕಾಗಿ ಬಟ್ಟೆ ಧರಿಸುತ್ತಾರೆ, ಬೇಡುವ ಮೊದಲು ನಾಗರಿಕ ಶೈಲಿಯಲ್ಲಿ ಶುಭ ಹಾರೈಸಿ ಕೊಡಲಿ, ಕೊಡದಿರಲಿ, ಥ್ಯಾಂಕ್ಸ್ ಹೇಳುತ್ತಾರೆ. ಇದನ್ನು ನಮ್ಮ ಭಿಕ್ಷುಕರು ಕಲಿಯಬೇಕು," ಎಂದರು.

ಕೊನೆಯಲ್ಲಿ ಒಬ್ಬ ತಿರುಕನು ಕತ್ತಲೆಯ ಹಾದಿಯಲ್ಲಿ ದಾರಿಗೊಬ್ಬನನ್ನು ಕಂಡು, "ಸ್ವಾಮಿ, ಮೂರು ದಿನವಾಯಿತು ಊಟ ಮಾಡಿ, ಕೈಲಿ ಕಾಸಿಲ್ಲ, ಮನೆಯಲ್ಲಿ ಕಾಳಿಲ್ಲ, ಕೈಲಿ ಒಂದು ಹರಿತವಾದ ಚೂರಿ ಬಿಟ್ಟರೆ ಇನ್ನೇನೂ ಇಲ್ಲ, ಏನಾದ್ರೂ ದಾನಮಾಡಿ," ಎಂದನಂತೆ.

ಆಗ ದಾನಮಾಡದಿರುವ ಧೈರ್ಯ ಯಾರಿಗಾದರೂ ಬರುವುದುಂಟೆ?

○

# ನಿಭಾ: ಜಗತ್ತಿನ ಮೊಟ್ಟಮೊದಲ ಮಾವುಟಿಗಳು !

- ನಿತಾಯಿ

(ಆಧಾರ: 'ಸ್ಯಾವಿ'ಯಲ್ಲಿ ಪ್ರಕಟವಾದ ಮನು ಜೋಸೆಫ್ ಅವರ ಲೇಖನ)



ವಯಸ್ಸೇನೋ ಧೈರ್ಯದ್ದೇ. ಇಪ್ಪತ್ತೆರಡೆಂದರೆ ಎಂಥವನ್ನೂ ಏರಬಲ್ಲೆನೆಂಬ ಎದೆಗಾರಿಕೆ ಇರಲೇಬೇಕು. ಆದರ ಜತೆಗೆ ಛಲವ್ರೂ ಇರುತ್ತದೆ.

ಇದೆಲ್ಲ ಒಬ್ಬ ತರುಣನ ಮಾತಾಯಿತು. ಆದರೆ ಒಬ್ಬ ಇಪ್ಪತ್ತೆರಡರ ತರುಣಿಗೆ? ಅದು ಭವಿಷ್ಯ ಜೀವನದ ಹತ್ತಾರು ನವಿರು ನವಿರಾದ, ರೋಮಾಂಚಕ ಕನಸುಗಳನ್ನು ಕಾಣುವ ವಯಸ್ಸು. ತನ್ನ ಕೋಮಲ ಶರೀರದ ಅಂದ ಚೆಂದಗಳಿಗೆ ತಾನೇ ಮಾರುಹೋಗುವ ಕಾಲ. ಇದರ ಬದಲು ತರುಣನೂ ಮಾಡಲು ಹಿಂದೆಮುಂದೆ ನೋಡುವ ಕಾರ್ಯವೊಂದರೆಡೆ ಆಕರ್ಷಿಸಲ್ಪಟ್ಟು ಅದರಲ್ಲೇ ತರಬೇತು ಪಡೆಯಲು ತೊಡಗುವುದೆಂದರೆ!

ಈಗ ನಾನಿಲ್ಲಿ ಪರಿಚಯಿಸುತ್ತಿರುವ ಈ ಇಪ್ಪತ್ತೆರಡರ ತರುಣಿ ಆನೆಯನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವ ಮಾವುಟಿಗಳಾಗಿದ್ದಾಳೆಂದರೆ ಖಂಡಿತಕ್ಕೂ ಬೆರಳು ಕಚ್ಚುತ್ತೀರಿ.

ಆಕೆಯ ಹೆಸರು ನಿಭಾ ನಂಬೂದಿರಿ. ಕೇರಳದ ಸನಾತನ ಬ್ರಾಹ್ಮಣ ಕುಟುಂಬದವಳು. ಕೋಯಿಮತ್ತೂರಿನ ಈಕೆ ಮೊನ್ನೆ ಮೊನ್ನೆಯಷ್ಟೇ ವಿಜ್ಞಾನದಲ್ಲಿ ಸ್ನಾತಕಳಾಗಿದ್ದಾಳೆ. ತ್ರಿಚ್ಚೂರ ಬಳಿಯ ಪೀಚಿ ಎಂಬಲ್ಲಿ 'ಗಜ ಕಲ್ಯಾಣ ಸಂಘ, (Elephant Welfare Association)ದ ಆಶ್ರಯದಲ್ಲಿ ಮೂರು ತಿಂಗಳಿನ ಕಠಿಣ ತರಬೇತಿ ಪಡೆದು ಭಾರತದ ಮೊಟ್ಟಮೊದಲ ಮಾವುಟಿಗಳಾಗಿದ್ದಾಳೆ. ಇದಷ್ಟೇ ಈಕೆಯ ಹೆಗ್ಗಳಿಕೆಯಲ್ಲ; ಜಗತ್ತಿನಲ್ಲೇ ಇವಳನ್ನು ಬಿಟ್ಟು ಬೇರೆ ಯಾವ ಮಾವುಟಿಗ

ಸ್ತ್ರೀಯೂ ಇಲ್ಲ.

ನಿಭಾಗೆ ಗಜಸಖ್ಯ ಹೇಗೆ ಉಂಟಾಯಿತೆಂಬುದೇ ಒಂದು ಮಜವಾದ ಕಥೆ. ಯಾವುದೋ ಒಂದರಿಂದ ಆಘಾತಕ್ಕೊಳಗಾದ ವ್ಯಕ್ತಿ ತನ್ನ ಬದುಕಿನುದ್ದಕ್ಕೂ ಅದರಿಂದ ದೂರವಿದ್ದು ಅದರ ಕುರಿತಂತೆ ದ್ವೇಷ ಭಾವವನ್ನು ಇಲ್ಲವೆ ಭಯವನ್ನು ಬೆಳೆಸಿಕೊಳ್ಳುವುದು ಸಹಜ. ಆದರೆ ನಿಭಾ ಆಘಾತವುಂಟು ಮಾಡಿದ ಆನೆಯಿಂದ ದೂರ ಸರಿಯುವ ಬದಲು ಅದನ್ನು ಅಪ್ಪಿಕೊಂಡುಬಿಟ್ಟಳು! ಆಕೆಗೆ ಮೊದಲಿನಿಂದಲೂ ಆನೆಯೆಂದರೆ ಆಸೆ.

ಒಮ್ಮೆ ಹೀಗಾಯಿತು. ತರಬೇತಿಗೆ ಬಂದ ಹೊಸತು. ಆರು ಹುಡುಗರ ನಡುವೆ ಇವಳೊಬ್ಬಳೇ ಸ್ತ್ರೀ ತರಬೇತೇಚ್ಛು. ಸಲಗವೊಂದನ್ನು ನಡೆಸಿಕೊಂಡು ನಿರ್ಜನ ರಸ್ತೆಯಲ್ಲಿ ಅವರೆಲ್ಲ ಹೊರಟಿದ್ದರು. ಈ ಮೋಜಿನ ದಂಡಿನ ಗಂಡುಗಳಿಗೆ ಇನ್ನಷ್ಟು ಮಜ ನೋಡುವ ಬಯಕೆಯಾಯಿತು. "ನಿಭಾ, ಈ ಸಲಗವನ್ನು ಏರಬಲ್ಲೆಯಾ?" ಎಂದೊಬ್ಬ ಕೇಳಿಯೇಬಿಟ್ಟ.

"ಓಹೋ... ಅದಕ್ಕೇನಂತೆ? ಆಗದೆಂದುಕೊಂಡಿರಾ?" ನಿಭಾ ಸವಾಲಿಗೆ ಸವಾಲು ಹಾಕಿದಳು. ಅಷ್ಟೇ ಅಲ್ಲ, ಆನೆಯನ್ನು ಏರಲೆಂದು ಉಳಿದ ಮಾವುತರು ಮಾಡುವಂತೆ ಅದರ ಮೊರದಗಲ ಕಿವಿ ಹಿಡಿದು ಮುಂಗಾಲ ಮೇಲಿನ ಮಣಿಕಟ್ಟಿಗೆ ಪಾದವೂರಿದಳು. ಸಾಮಾನ್ಯವಾಗಿ ಆನೆಗಳು ಅನ್ಯ ಮಾವುಟಿಗರನ್ನು ಸನಿಹವೂ ಸೇರಿಸಿಕೊಳ್ಳುವುದಿಲ್ಲ. ಆದರೆ ಇದು ಚೆನ್ನಾಗಿ ಪಳಗಿಸಿದ ಸಲಗ. ತರಬೇತಿಗೆಂದೇ ಕಾದಿರಿಸಲ್ಪಟ್ಟದ್ದು. ಹೀಗಾಗಿ ನಿಭಾ ಕಿವಿ ಹಿಡಿದಾಗ ಅದು ಸುಮ್ಮನಿತ್ತು.

ತೊಂದರೆ ಶುರುವಾದದ್ದು ಇಲ್ಲಲ್ಲ. ಇನ್ನೂ ತರಬೇತಿಯ ಮೊದಲ ಹಂತದಲ್ಲಿದ್ದುದರಿಂದ ಆಕೆಗೆ ಗಜಭಾಷೆ ಹಾಗೂ ಅದಕ್ಕಿರುವ ವಿಶಿಷ್ಟ ಸ್ಪರ್ಶಭಾಷೆಯ ಸರಿಯಾದ ಮಾಹಿತಿಯಿರಲಿಲ್ಲ. ಆಕೆ ಪಾದವೂರಿದ ಜಾಗ ಆನೆಗೆ "ಓಡು" ಎಂಬ ಸೂಚನೆ ನೀಡುವ ಸ್ಥಳ.

ಸಲಗ ಓಟಕಿತ್ತಿತು! ಗಂಟೆಗೆ ೩೦ ಕಿಲೋಮೀಟರ್ ವೇಗ! ಕಿವಿಯನ್ನೇ ಗಟ್ಟಿಯಾಗಿ ಹಿಡಿದುಕೊಂಡು ಕಾಲು ಜಾರದಂತೆ ನಿಂತುಕೊಂಡೇ ಇರಬೇಕಾದ ಸ್ಥಿತಿ ನಿಭಾಳದ್ದು. ಕೈ ಇಲ್ಲವೆ ಕಾಲು ಸ್ವಲ್ಪ



ಜಾರಿದರೂ ಆನೆಯ ಪದಾಘಾತಕ್ಕೊ ಅಥವಾ ಪಕ್ಕದ ಪ್ರಪಾತಕ್ಕೊ ಬಿದ್ದು ಸತ್ತೇ ಹೋಗಬೇಕು.

ಓಡುತ್ತಿದ್ದ ಆನೆಯನ್ನು ಉಳಿದ ತರಬೇತೇಚ್ಛು ಹುಡುಗರೂ, ತರಬೇತುದಾರನೂ, ಅದರ ಮಾವುಟಿಗನೂ ಬೆನ್ನಟ್ಟಿದರು. ಯಾರೂ ಕೂಗುವಂತಿಲ್ಲ. ಕೂಗಿದರಾಗಲಿ ಅಲ್ಲಿ ಜೀವನ್ಮರಣದ ಮಧ್ಯೆ ತೂಗಾಡುತ್ತಿದ್ದ ನಿಭಾ ಗಾಬರಿಯಿಂದ ಕಿರಿಚಿಕೊಂಡರಾಗಲಿ ಆನೆ ವೇಗ ಹೆಚ್ಚಿಸಿ ಎರ್ರಾಬಿರ್ರಿ ಓಡುವ ಸಾಧ್ಯತೆಯಿತ್ತು. ಆ ಮಾವುಟಿಗ ಮಾತ್ರ ಆನೆಯನ್ನು ನಿಲ್ಲಿಸಬಲ್ಲವನಾಗಿದ್ದ. ಆತ ಏನೇನೋ ಮಣಮಣಿಸಿದ. ಆನೆ ಓಟ ತಗ್ಗಿಸಿ ಒಂದೆಡೆ ನಿಂತುಕೊಂಡಿತು. ನಿಭಾ ತಟ್ಟನೆ ಕೆಳಕ್ಕೆ ಜಿಗಿದು ನಿಟ್ಟುಸಿರಿಟ್ಟಳು. ಆದರೆ ಗದಗದ ನಡುಗುತ್ತಿದ್ದ ಕಾರಣದಿಂದಾಗಿ ಆಕೆಗೆ ನಿಲ್ಲಲಾಗಲಿಲ್ಲ. ಕುಸಿದು ಕುಳಿತಳು.

ಹಾಗೆಂದ ಮಾತ್ರಕ್ಕೆ ಆಕೆಯೇನೂ ಎದೆಯೊಡೆದುಕೊಂಡಿರಲಿಲ್ಲ. ಒಂದು ವೇಳೆ ಎದೆಯೊಡೆದುಕೊಂಡಿದ್ದರೆ ಆಕೆ ಈ ಮೊದಲೇ ಬಿದ್ದು ಗತಪ್ರಾಣಳಾಗಿರಬೇಕಿತ್ತು. ಬೆವರೊರೆಸಿಕೊಂಡಳು. ಸಾವರಿಸಿಕೊಂಡು ಎದ್ದು ನಿಂತಳು.

"ಆಘಾತಗೊಂಡಿದ್ದೇನೋ ನಿಜ. ಆದರೆ ಅದೇ ದಿನ, ಆನೆಗಳೊಂದಿಗೆ ಮೈತ್ರಿ ಬೆಳೆಸಿಕೊಳ್ಳಬೇಕು, ಅವುಗಳೊಂದಿಗೆ ಹೃತ್ಪೂರ್ವಕವಾಗಿ ನಡೆದುಕೊಳ್ಳಬೇಕು ಎಂದು ನಿರ್ಧರಿಸಿಬಿಟ್ಟೆ. ಈ ನಿರ್ಧಾರದಂತೆ ನಡೆಯುವುದು ನಲ್ಲಿಯ ನೀರು ಕುಡಿದಷ್ಟೇನೂ ಸುಲಭವಾಗಿರಲಿಲ್ಲ. ಅದಕ್ಕಾಗಿ ಏಳೇಳು ಕೆರೆಯ ನೀರು ಕುಡಿಯಬೇಕಾಯಿತು. ಹೆಚ್ಚೆಚ್ಚು ಜಾಗರೂಕತೆ ಅವಶ್ಯವಿತ್ತು."

ಪೀಚಿಯ ಮಾವುಟಿಗ ತರಬೇತಿ ಕೇಂದ್ರದಲ್ಲಿ ತರಬೇತಿಗೆ ವೈಜ್ಞಾನಿಕ ವಿಧಾನವನ್ನು ಅನುಸರಿಸಲಾಗುತ್ತದೆ: ಆನೆಗಳನ್ನು ಅರಿತುಕೊಳ್ಳುವುದು, ಅವುಗಳಿಗೆ ತಾವು ಅರಿವಾಗುವುದು, ಅವುಗಳ ಇಷ್ಟಾನಿಷ್ಟ, ಮನೋಭಾವ ಇತ್ಯಾದಿ ಇತ್ಯಾದಿ. ನಮ್ಮ ಮನಸ್ಸಿನೊಳಗಿನದೆಲ್ಲ ಅವಕ್ಕೆ ಗೊತ್ತಾಗಿ ಬಿಡುತ್ತದೇನೋ

ಎಂಬಂತೆ ಆನೆಗಳು ವರ್ತಿಸುವುದುಂಟು. ಪ್ರೀತಿ ನಿಜವಾಗಿಯೂ ಹೃದಯದಾಳದಿಂದ ಉಕ್ಕೇರಿದ್ದು ಎಂದು ಅರಿತರೆ ಮಾತ್ರ ಮಾವುಟಿಗನಿಗೆ ಸರಿಯಾಗಿ ಅವು ಪ್ರತಿಕ್ರಿಯಿಸುತ್ತವೆ. ನಿಭಾಳೊಂದಿಗೆ ತರಬೇತು ಪಡೆಯುತ್ತಿರುವವರು ಇನ್ನೂ ಆರು ಜನ ಹುಡುಗರು. ಅವರದು ಮೊಟ್ಟ ಮೊದಲ ಪ್ರಯೋಗಾತ್ಮಕ ತಂಡ. ಇವರಿಗೆ ಮಾಸಿಕ ೬೦೦ ರೂ.ಗಳ ಸ್ಟೈಪೆಂಡ್ ನೀಡಲ್ಪಡುತ್ತಿದೆ. ಊಟ ವಸತಿಯ ವ್ಯವಸ್ಥೆಯನ್ನೂ ಮಾಡಲಾಗಿದೆ.

ಈ ಕೇಂದ್ರದಲ್ಲಿ ಇರುವ ಅತ್ಯಂತ ಸಾಧು ಆನೆ 'ಸುನೀತಾ'ಳೊಂದಿಗೆ ನಿಕಟವಾಗಿದ್ದುಕೊಂಡು, "ದಪ್ಪ ಚರ್ಮದ ಚತುಷ್ಪಾದಿಗಳ ವರ್ತನೆಯ ರೀತಿ"ಯನ್ನು ಅಭ್ಯಸಿಸುವ ಅವಕಾಶ ದೊರೆತದ್ದು ನಿಭಾ ಪಾಲಿಗೆ ಎಲ್ಲಿಲ್ಲದ ಅವಕಾಶ.

ಆಕೆಗೆ ಆನೆಯಷ್ಟೇ ಅಲ್ಲ, ಉಳಿದೆಲ್ಲಾ ಪ್ರಾಣಿಗಳ ಬಗೆಗೂ ಆಸಕ್ತಿಯಿದೆ. "ನನ್ನ ಗಜಪ್ರೀತಿಯನ್ನು ಅವುಗಳಿಗೆ, ಅವುಗಳ ಸಂತತಿಗೆ ಉಪಯುಕ್ತವಾಗುವ ರೀತಿಯಲ್ಲಿ ರಚನಾತ್ಮಕವಾಗಿ ಬಳಸಿಕೊಳ್ಳಬಯಸುವೆ" ಎಂದೆನ್ನುವ ನಿಭಾ, "ಈ ದಿಶೆಯಲ್ಲಿ ಅವುಗಳ ಮನೋಗತದ ಅಭ್ಯಾಸ-ನಿರೀಕ್ಷಣೆಗಳೂ ತುಂಬ ನೆರವಾಗುತ್ತವೆ" ಎಂದು ನಂಬಿದ್ದಾಳೆ.

ಹಾಗೆ ನೋಡಿದರೆ ನಿಭಾ ಈ ಕೇಂದ್ರಕ್ಕೆ ಮಾವುಟಿಗ ತರಬೇತಿಗಾಗಿಯೆಂದೇ ಬಂದವಳಲ್ಲ. ಕೋಯಿಮತ್ತೂರಿನಲ್ಲಿರುವ ಝೂ ಔಟ್‌ರೇಜ್ ಆರ್ಗನೈಜೇಶನ್ ಮೂಲಕ ಪ್ರಾಣಿ ಮನೋಧರ್ಮವನ್ನು ಅಭ್ಯಸಿಸಲೂ ಮತ್ತು ಆ ಸಂಸ್ಥೆ ಈ ಕೇಂದ್ರಗಳ ಸಂಯೋಜನಾಧಿಕಾರಿಯೆಂದೂ ಕಳಿಸಲ್ಪಟ್ಟವಳು. "ಆದರೆ ಇಲ್ಲಿ ಬಂದ ಮೇಲೆ 'ಸುನೀತಾ' ನನ್ನನ್ನು ವಶಪಡಿಸಿಕೊಂಡು ಬಿಟ್ಟಳು. ಆನೆಗಳ ಮನೋಧರ್ಮವನ್ನು ಹೀಗೆ ಅಧಿಕಾರಿಯಾಗಿ ಅರಿಯುವುದು ಅಸಾಧ್ಯ. ಏನಿದ್ದರೂ ಮಾವುಟಿಗಳಾದರೆ ಮಾತ್ರ ಇದಕ್ಕಿಂತ ಹೆಚ್ಚು ತಿಳಿಯಲು ಸಾಧ್ಯ" ಎಂದೆನಿಸಿ ನಿಭಾ ತಾನೂ ಒಬ್ಬ ತರಬೇತೇಚ್ಛುವಾದಳು.

ಮೊದಮೊದಲು ಕೇವಲ ಆನೆಯನ್ನು ಮುಟ್ಟಿ ಮಜ ಅನುಭವಿಸುತ್ತಿದ್ದಳು. "ಮುದ್ದಾಗಿದೆ!" ಎಂಬ ಉದ್ಗಾರ ಆಗೆಲ್ಲ ಆಕೆಯ ಬಾಯಿಂದ ಹೊಮ್ಮುತ್ತಿತ್ತು. ಬರಬರುತ್ತ ಆನೆಗಳ ಬಗೆಗಿನ ಅವ್ಯಕ್ತ ಭಯ ಮರೆಯಾಗಿ ಹೋಯಿತು. "ಉಳಿದವರು ಆನೆಯನ್ನು ಏರುವುದನ್ನು ಕಂಡಾಗಲೆಲ್ಲ ನನಗೂ ಯಾಕೆ ಅಂಥ ಅವಕಾಶ ದೊರೆಯುವುದಿಲ್ಲ? ಎಂದು ಪ್ರಶ್ನಿಸಿಕೊಳ್ಳುತ್ತಿದ್ದೆ. ಖಂಡಿತಕ್ಕೂ ಗಜಸವಾರಿ ಒಂದು ಮಜದ ಅನುಭವ. ಈ ಮನೋಭಿಲಾಷೆ ಈಡೇರುತ್ತದೋ ಇಲ್ಲವೋ ಎಂದುಕೊಳ್ಳುತ್ತಿರುವ ಸಂದರ್ಭದಲ್ಲೇ ಆ ಹುಡುಗರು ನನಗೆ ಸವಾಲೆಸೆದದ್ದು ಮತ್ತು ಆ ಭಯಾನಕ ಅನುಭವದ ಘಟನೆ ಸಂಭವಿಸಿದ್ದು. ಆದರೆ ಅದರಿಂದ ನನ್ನ ನಿರ್ಧಾರ ಇನ್ನಷ್ಟು ಗಟ್ಟಿಯಾಯಿತು ಬಿಡಿ," ನಿಭಾ ನೆನೆದುಕೊಳ್ಳುತ್ತಾಳೆ.

"ಮಾವುಟಿಗ ಗಂಡೋ-ಹೆಣ್ಣೋ ಎಂಬುದನ್ನೂ ಆನೆ ಗಮನಿಸಿ ತದನುಸಾರ ವರ್ತಿಸುತ್ತದೆ ಎಂಬುದು ನನ್ನ ಅನುಭವಕ್ಕೆ ಬಂದ ಸಂಗತಿ. ಮಾವುಟಿಗನ ಧ್ವನಿಯನ್ನು ಅವು ಬೇಗನೆ ಗುರುತಿಸುತ್ತವೆ. ಏನಕೇನ ಪ್ರಕಾರೇಣ ಆತನ ಧ್ವನಿಯಲ್ಲಿ ಸ್ವಲ್ಪ ಬದಲಾದರೂ ಸಾಕು, ಅವು ಮಾತು ಕೇಳುವುದರಲ್ಲಿ ಅಂಥ ಆಸ್ಥೆ ತೋರಿಸುವುದಿಲ್ಲ. ಆಗ ಮಾವುತ ಹೊಡೆಯಲು ಕೈ ಎತ್ತತೊಡಗುತ್ತಾನೆ. ಸ್ತ್ರೀಧ್ವನಿಯಲ್ಲಿನ ಮಾಧುರ್ಯ ಆನೆಗೆ ತುಂಬ ಅಪ್ಯಾಯಕರ ಎಂಬುದು ನನ್ನ ಗಮನಕ್ಕೆ ಬಂದಿದೆ. ಆನೆಗೆ ತೀರ ಅವಶ್ಯವಿದ್ದರೆ ಮಾತ್ರ ಬೈಯಿರಿ. ಅದರ ಹೃದಯವನ್ನು ಗೆಲ್ಲುವುದಕ್ಕೆ ಪರಮೋಪಾಯವೆಂದರೆ ಅದಕ್ಕೆ ಪ್ರೀತಿಯನ್ನು ಉಣಬಡಿಸಿ, ಬೆನ್ನು ಚಪ್ಪರಿಸಿ, ಆಗೀಗ ಬೆಲ್ಲದ ಬಹುಮಾನ ಕೊಡಿ. ಹೀಗೆ..." ಎನ್ನುತ್ತ ಆ ಸಲಗದ ನೆತ್ತಿಯನ್ನು ನೇವರಿಸಿ ನಗುತ್ತಾಳೆ ನಿಭಾ.

ಇದು ಅರ್ಥವಾಯಿಯೆಂಬಂತೆ ಸೊಂಡಿಲೆತ್ತಿ ಆ ಸಲಗ ಕಹಳೆಯೂದುತ್ತದೆ.



# ಮನುಷ್ಯನನ್ನು ಭಗವಂತನನ್ನಾಗಿ ಭಾವಿಸಿದಾಗ

ಸ್ವಾಮಿ ಪುರುಷೋತ್ತಮಾನಂದರು ಬರೆದ 'ವಿಶ್ವವಿಜೇತ ವಿವೇಕಾನಂದ' ಗ್ರಂಥವು ನೀಡುವ ಬೆಳಕು ಒಬ್ಬೊಬ್ಬರಿಗೆ ಒಂದೊಂದು ರೀತಿಯ ಮಾರ್ಗದರ್ಶನ ನೀಡುತ್ತದೆ. ಪ್ರಸ್ತುತ ತುಣುಕುಗಳು ಈ ಗ್ರಂಥದ ೨೭೧-೨೭೨ನೆಯ ಪುಟಗಳಿಂದ ಆಯ್ದುಕೊಂಡಂಥವು. (ಪ್ರಕಾಶಕರು: ಶ್ರೀರಾಮಕೃಷ್ಣಾಶ್ರಮ, ಬೆಂಗಳೂರು-೫೬೦ ೦೧೯)

ಸರ್ವಧರ್ಮ ಸಮ್ಮೇಳನದ ಪರಿಣಾಮವಾಗಿ ಸ್ವಾಮಿ ವಿವೇಕಾನಂದರಿಗೆ ಆದ ಲಾಭಗಳಲ್ಲಿ ಒಂದೆಂದರೆ ಜಗತ್ತಿನ ಅನೇಕ ಶ್ರೇಷ್ಠ ವಿದ್ವಾಂಸರು ಹಾಗೂ ಚಿಂತನಶೀಲರೊಂದಿಗೆ ಆದ ಪರಸ್ಪರ ಪರಿಚಯ. ಇದೇ ಸಮಯದಲ್ಲಿ ಅವರು ಅಮೇರಿಕಾದ ಅತ್ಯಂತ ಪ್ರಸಿದ್ಧ ನಾಸ್ತಿಕವಾದಿಯೂ ವಾಗ್ಮಿಯೂ ಆಗಿದ್ದ ರಾಬರ್ಟ್ ಇಂಗರಸಾಲನನ್ನು ಭೇಟಿಮಾಡಿದರು. ಸಂಪ್ರದಾಯಸ್ಥ ಕ್ರೈಸ್ತರ ಪಾಲಿಗೆ ಇಂಗರಸಾಲ್ ಒಬ್ಬ ವೈರಿಯಾಗಿ ಪರಿಣಮಿಸಿದ್ದ. ಸ್ವಾಮೀಜಿ ಹಾಗೂ ಇಂಗರಸಾಲ್ ಪರಸ್ಪರ ಮೆಚ್ಚಿಕೊಂಡರು. ಏಕೆಂದರೆ ಇಂಗರ್‌ಸಾಲ್ ನಾಸ್ತಿಕನಾದರೂ ಪ್ರಾಮಾಣಿಕನೆಂಬುದನ್ನು ಸ್ವಾಮೀಜಿ ಗಮನಿಸಿದರು. ಅಂತೆಯೇ ತನ್ನಂತೆಯೇ ಸ್ವಾಮೀಜಿ ಒಬ್ಬ ಕ್ರಾಂತಿಕಾರಿ ಎಂದು ಇಂಗರಸಾಲ್ ಗುರುತಿಸಿದ.

ಇವರಿಬ್ಬರ ನಡುವೆ ಸೌಹಾರ್ದತೆ ಇದ್ದರೂ ಯಾವುದೇ ವಿಷಯದಬಗ್ಗೆ ಸಮಾನಾಭಿಪ್ರಾಯವಿರಲಿಲ್ಲ. ಮುಖ್ಯವಾಗಿ ಇಬ್ಬರ ಜೀವನದೃಷ್ಟಿಗಳೇ ತದ್ವಿರುದ್ಧವಾಗಿದ್ದವು. ಜೀವನದ ಬಗ್ಗೆ ತನ್ನ ದೃಷ್ಟಿಕೋನವನ್ನು ಇಂಗರಸಾಲ್ ಹೀಗೆ ವರ್ಣಿಸಿದ:

"ಈ ಪ್ರಪಂಚವೆಂಬುದು ಒಂದು ಕಿತ್ತಳೆ ಹಣ್ಣು - ಇದೊಂದೇ ನಮ್ಮ ಕಣ್ಣೆದುರಿಗೆ ಇರುವುದು . ಇದೊಂದೇ ಸತ್ಯ. ಆದ್ದರಿಂದ ಬೇರೆ ಯಾವುದರ ಬಗೆಗೂ ತಲೆ ಕೆಡಿಸಿಕೊಳ್ಳದೆ ಇದರಿಂದ ರಸ ತೆಗೆದು ಕುಡಿಯುವುದಷ್ಟೇ ನನ್ನ ಉದ್ದೇಶ. ಆದ್ದರಿಂದ ನಾನು ಅದನ್ನು ಚೆನ್ನಾಗಿ ಹಿಂಡಿ, ಹೆಚ್ಚಿನ ರಸವನ್ನು ಪಡೆಯುತ್ತೇನೆ."

ಆಗ ಸ್ವಾಮೀಜಿ ಹೇಳಿದರು, "ಕಿತ್ತಳೆ ಹಣ್ಣಿನಿಂದ ಅತಿ ಹೆಚ್ಚಿನ ರಸವನ್ನು ಹಿಂಡಬೇಕೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ನಾನು ನಿಮಗಿಂತ ಹೆಚ್ಚಿನ ರಸವನ್ನು ತೆಗೆಯಬಲ್ಲೆ! ಹೇಗೆ ಗೊತ್ತೇನು? ನಾವು ಎಂದಿಗೂ ಸಾಯುವುದೇ ಇಲ್ಲ. ನಾನು ಅಮರ

## ಹೂವುಗಳು

ನಮ್ಮ ಪ್ರಬಂಧಕಾರರಲ್ಲಿ ಎ.ಎನ್. ಮೂರ್ತಿರಾಯರು ಬಹಳ ಪ್ರಸಿದ್ಧರು. ಅವರ ಗದ್ಯ ಚೇತೋಹಾರಿಯಾಗಿ ಕಾವ್ಯದ ಬೆಡಗನ್ನೂ, ಬನ್ನಾಣವನ್ನೂ ಹೊಂದಿದ್ದು ಭಾವಗೀತೆಯನ್ನು ಓದಿದ ಸಂತೋಷನೀಡುತ್ತದೆ. ಪುಸ್ತಕ: 'ಹಗಲುಗನಸುಗಳು,' ಪ್ರಕಾಶಕರು: ಕಾವ್ಯಾಲಯ, ಮೈಸೂರು-೧೪

ನಾವು ಒಂದು ದಿನವೆನ್ನುವುದು ಹೂವುಗಳಿಗೆ ಒಂದು ಜೀವಮಾನ ಕಾಲ. ಆದರೂ ಅವು ತಮ್ಮ ಅಲ್ಪಾಯುಸ್ಸನ್ನು ಎಷ್ಟು ಹರ್ಷದಿಂದ ಕಳೆಯುವವು! ಅವಕ್ಕೆ ನಮಗಿರುವಂತೆ ಹಿಂದು ಮುಂದಿನ ಎಣಿಕೆಯಿಲ್ಲ; ಅವು ಮಾಗಿಗೂ ಮುಪ್ಪಿಗೂ ಕೂಡಿಡಬೇಕಾಗಿಲ್ಲ. ನಮ್ಮಂತೆ ದೊರಕದುದಕ್ಕೆ ಕೈಚಾಚಿ, ಅವು ಯಾತನೆಪಡುವುದಿಲ್ಲ. "ಈಗ ಅಂತರಿಕ್ಷವು ನೀಲವಾಗಿದೆ; ಸೂರ್ಯನ ಕಿರಣಗಳು ಸುಖೋಷ್ಣವನ್ನು ಬೀರುತ್ತಿವೆ; ಗಾಳಿ ಮೆಲ್ಲಗೆ ಬೀಸುತ್ತಿದೆ; ಅವು ಕೊಡುವ ಸುಖವನ್ನನುಭವಿಸಿದರೆ ಸಾಕು, ನಾಳೆ ಯಾರೋ ನಾವು ಯಾರೋ" ಎಂದುಕೊಂಡು ಅವು ನಿಶ್ಚಿಂತೆಯಾಗಿರುವಂತೆ ತೋರುತ್ತದೆ. ಅಂತೂ ಅರಳಿದ ಹೂವಿನಲ್ಲಿ ಹರ್ಷ

## ಅಚ್ಚಳಿಯದ ಪುಟಗಳು

ಎಂದು ನನಗೆ ಗೊತ್ತಿದೆ. ಆದ್ದರಿಂದ ನನಗೆ ಅವಸರವಿಲ್ಲ. ನನಗೆ ಬೇರಾವುದೇ ಕರ್ತವ್ಯ ಎಂಬುದು ಇಲ್ಲ. ನನಗೆ ಹೆಂಡತಿ ಮಕ್ಕಳು, ಆಸ್ತಿ-ಪಾಸ್ತಿಗಳೆಂಬ ಬಂಧನಗಳಿಲ್ಲ. ಧನಗಳಿಲ್ಲ. ಆದ್ದರಿಂದ ನಾನು ಪ್ರತಿಯೊಬ್ಬ ಸ್ತ್ರೀ-ಪುರುಷನನ್ನು ಸಮಾನವಾಗಿ ಪ್ರೀತಿಸಬಲ್ಲೆ. ಪ್ರತಿಯೊಬ್ಬರೂ ನನಗೆ ದೇವರೇ. ಮನುಷ್ಯನನ್ನು ಭಗವಂತನನ್ನಾಗಿ ಭಾವಿಸಿದಾಗ ಉಂಟಾಗುವ ಆನಂದವನ್ನು ಭಾವಿಸಿ ನೋಡಿ! ನೀವು ನಿಮ್ಮ ಕಿತ್ತಳೆ ಹಣ್ಣನ್ನು ಈ ರೀತಿ ಹಿಂಡಬಲ್ಲಿರಾದರೆ ಹತ್ತು ಸಾವಿರ ಪಟ್ಟು ಹೆಚ್ಚಿನ ರಸವನ್ನು ತೆಗೆಯಬಲ್ಲಿರಿ! ಪ್ರತಿಯೊಂದು ತುಣುಕು ರಸವನ್ನೂ ಹೀರಬಲ್ಲಿರಿ!"

(ವಿಶ್ವವಿಜೇತ ವಿವೇಕಾನಂದ ಗ್ರಂಥದಿಂದ ಪು. ೨೭೧-೨೭೨) - ಸ್ವಾಮಿ ಪುರುಷೋತ್ತಮಾನಂದ. ಪ್ರಕಟಣೆ-ಶ್ರೀರಾಮಕೃಷ್ಣಾಶ್ರಮ, ಬೆಂಗಳೂರು-೫೬೦ ೦೧೯. ಮೊದಲನೇ ಮುದ್ರಣ

ಸಂಗ್ರಹ: **ಟಿ.ಆರ್. ವೆಂಕಟೇಶಮೂರ್ತಿ**

---

ಉಕ್ಕಿ ಬರುವಂತಿದ್ದು, ಪ್ರತಿಯೊಂದು ಹೂವೂ ತನ್ನನ್ನು ನಲಿಸುವ ಗಾಳಿಯನ್ನು ಆನಂದದಿಂದ ಸೇವಿಸುವುದೆಂದು ವರ್ಡ್ಸ್‌ವರ್ತ್ ಕವಿಯು ಹೇಳಿದ. ಹೂವುಗಳ ಜೀವನವನ್ನು ನೋಡಲು ಕಣ್ಣಿರುವವರಿಗೆ ಹಾಗೆನ್ನಿಸುವುದು ಆಶ್ಚರ್ಯವಲ್ಲ. ಅದರಲ್ಲಿಯೂ ಪ್ರಾತಃಕಾಲದಲ್ಲಿ ಮೆಲ್ಲಗೆ ಗಾಳಿ ಬೀಸುತ್ತಿರುವಾಗ, ಆಗ ತಾನೇ ಉದಯಿಸುತ್ತಿರುವ ಸೂರ್ಯನ ಗುಲಾಬಿ ಬಣ್ಣದ ಕಿರಣಗಳು ಹೂವುಗಳನ್ನು ಚುಂಬಿಸಿ ಎಲೆಗಳ ಮೇಲೆ ಒಟ್ಟು ಒಟ್ಟಾಗಿ ನಿಂತಿರುವ ಮಂಜಿನ ಹನಿಗಳನ್ನು ಮಾಣಿಕ್ಯವಾಗಿ ಮಾಡುತ್ತಿರುವಾಗ, ಎಲೆಗಳ ನಡುವೆ ಹೂವುಗಳು ಬಳುಕುತ್ತ, ನಲಿಯುತ್ತ ಇರುವುದನ್ನು ನೋಡಿದರೆ ಅವುಗಳಿಗೆ ಜೀವನದಲ್ಲಿ ಆನಂದವಿಲ್ಲವೆಂದು, ಆನಂದಾನುಭವ ಶಕ್ತಿಯಿಲ್ಲವೆಂದು ಹೇಳುವವರು ಯಾರು!

ಗುಲಾಬಿ ಪರದೇಶದ ಹೂವಾದರೂ ಇಲ್ಲಿ ಒಂದು ರಾಜ್ಯವನ್ನು ಕಟ್ಟಿದೆ. ಅದನ್ನು ನೋಡಿದಾಗ ಮನಸ್ಸು ಈ ಪ್ರಪಂಚವನ್ನು ಬಿಟ್ಟು ಬೇರೊಂದು ಕಲ್ಪನಾ ಪ್ರಪಂಚವನ್ನು 'ರೋಮಾನ್ಸ್' ಪ್ರಪಂಚವನ್ನು ಪ್ರವೇಶಿಸಿ ಅಲೆಯತೊಡಗುವುದು. ಗುಲಾಬಿಯ ಆವರಣವೇ ರೋಮಾನ್ಸ್ ಆವರಣ. ಚಿಕ್ಕಂದಿನಿಂದಲೂ ನನ್ನ ಮನಸ್ಸು ಆ ಹೂವಿನೊಡನೆ ಯಾವು ಯಾವುದೋ ಸಂಬಂಧವನ್ನು ಕಲ್ಪಿಸಿಕೊಂಡಿದೆ. ಇರಾನಿನ ರಾಜರ ಶೃಂಗಾರವನ; ಇಲ್ಲವೇ ಕಾಶ್ಮೀರದ ಷಾಲಿಮಾರ್ ತೋಟ; ಮೊಗಲ ಬಾದಶಹನ ಉಪವನ ಮತ್ತು ರಂಗಮಹಲು; ಅದರ ಉಪ್ಪರಿಗೆಯ ಮೇಲೆ ನಿಂತು ಯಮುನೆಯು ಪ್ರವಹಿಸುತ್ತಿರುವುದನ್ನು ನೋಡುತ್ತಿರುವ ಸಂಧ್ಯಾರಾಗ ರಂಜಿತವಾದ ಮುಖಗಳುಳ್ಳ ರಮಣಿಯರು; ಗುಲಾಬಿ ತುಂಬಿದ ನೀರಿನಲ್ಲಿ ಸ್ನಾನ ಮಾಡುವಾಗ ಅತ್ತರನ್ನು ಕಂಡು ಹಿಡಿದು ಜಗತ್ತಿಗೆ ದಿವ್ಯ ಪರಿಮಳವನ್ನು ಒದಗಿಸಿಕೊಟ್ಟ ಯವನ ಸುಂದರಿ ನೂರ್‌ಜಹಾನ್-ಈ ನೆನಪುಗಳೆಲ್ಲಾ ಮನಸ್ಸಿಗೆ ಬರುವುವು. ಗುಲಾಬಿಯು ಸಾಧಾರಣವಾಗಿ ಒರಟು ಜನರ ಕೈಗೆ ಸಿಕ್ಕುವಂಥ ಹೂವಲ್ಲ. ಅದನ್ನು ಬೆಳೆಸಬೇಕಾದರೆ ಬೇರೆ ಸಂಸ್ಕಾರವೇ ಬೇಕು, ನಿಯತ ಸೇವೆ ಬೇಕು. ಅದು ಹೂವುಗಳ ರಾಣಿ. ಗುಲಾಬಿಯೆಂದರೆ ಗುಲಾಬಿ ಬಣ್ಣದ ಗುಲಾಬಿ. ಉಳಿದವುಗಳು ನವಿಲನ್ನು ಅನುಕರಿಸುವ ಕೆಂಬೂತಗಳಂತೆ. ಬಣ್ಣ, ಮಾಟ, ಕಂಪು ಎಲ್ಲವನ್ನೂ ನೋಡಿದರೆ ಅದಕ್ಕೆ ಸರಿಸಮನಾದ ಹೂವು ಇನ್ನೊಂದಿಲ್ಲ. ಕಮಲಕ್ಕೆ ಒಂದು ತೆರನಾದ ಗಾಂಭೀರ್ಯ ಹೆಚ್ಚಿರಬಹುದು. ಆದರೆ ಗುಲಾಬಿಗಿರುವ ಸ್ವರ್ಗೀಯ ವರ್ಣವೂ ಕೋಮಲತೆಯೂ ಹೊಸ ಯೌವನ ಸೊಂಪು ಇಲ್ಲ. ನಿಜವಾಗಿಯೂ ಅದು ಹೂವುಗಳ ರಾಣಿ.

ಸಂಗ್ರಹ: ಡಿ.ಗುಂಡೂರಾವ್




# ರಕ್ತ ಪಿಪಾಸುವಿಗೆ ಸುಸ್ವಾಗತ !

-ಬಿ.ಎಂ. ಚಂದ್ರಶೇಖರ

ಆತನ ಹೆಸರು ಫ್ರೆಡರಿಕ್ ಪರ್ಸನ್. ಬ್ರಿಸ್ಟೋಲ್ ಬಂದರಿನಲ್ಲಿ ಕೆಲಸ. ಸ್ವೀಡನ್ನಿನಿಂದ ಬಂದ ಹಡಗುಗಳು ಸರಿಯಾಗಿ ನೆಲೆಗೊಳ್ಳಲು ಸಹಾಯಮಾಡುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ಹಗ್ಗ ಕೈಗೆ ಬಲವಾಗಿ ಸುತ್ತಿಕೊಂಡಿತು. ಅದೇ ಸಮಯಕ್ಕೆ ಅದನ್ನು ಕಟ್ಟಿದ ಹಡಗು ಜೋರಾಗಿ ಅಲ್ಲಾಡಿದ್ದರಿಂದ ಪರ್ಸನ್ನನ ನಾಲ್ಕು ಬೆರಳುಗಳು ತೀವ್ರವಾಗಿ ಗಾಯಗೊಂಡವು.

ತಕ್ಷಣವೇ ಆತನನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಎರಡು ಬೆರಳುಗಳು ಪೂರ್ತಿಯಾಗಿ ಜಜ್ಜಿಹೋಗಿದ್ದರಿಂದ ಅವುಗಳನ್ನು ಕತ್ತರಿಸಿ ತೆಗೆಯುವುದರ ಹೊರತು ಮತ್ತೇನು ಮಾಡಲೂ ಸಾಧ್ಯವಿರಲಿಲ್ಲ. ಇನ್ನೆರಡು ಬೆರಳುಗಳು ಆಗಲೋ ಈಗಲೋ ಕಳಚಿ ಬೀಳುವ ಸ್ಥಿತಿಯಲ್ಲಿದ್ದವು. ಸೂಕ್ಷ್ಮ ಶಸ್ತ್ರಚಿಕಿತ್ಸಕರು ಎಂಟು ಗಂಟೆಗಳಕಾಲ ಚಿಕಿತ್ಸೆ ನಡೆಸಿ ಆ ಬೆರಳುಗಳನ್ನು ಯಥಾಸ್ಥಾನದಲ್ಲಿ ಕೂಡಿಸಿ ಸಮಾಧಾನದ ನಿಟ್ಟುಸಿರನ್ನು ಬಿಟ್ಟರು.

ಆದರೆ ವೈದ್ಯರ ಸಮಾಧಾನ ಬಹಳ ಕಾಲ ಉಳಿಯಲಿಲ್ಲ. ಪರ್ಸನ್ನರ ಉಪಶಮನವೂ ಹೆಚ್ಚು ಸಮಯ ತಾಳಲಿಲ್ಲ. ಚಿಕಿತ್ಸೆ ನಡೆಸಿದ ಆಲ ಗಂಟೆಗಳೊಳಗೇ ರಕ್ತ ಹೆಪ್ಪುಗಟ್ಟತೊಡಗಿದ್ದರಿಂದ ಬೆರಳುಗಳು ಕಪ್ಪು ಬಣ್ಣಕ್ಕೆ ತಿರುಗಲು ಪ್ರಾರಂಭಿಸಿ

ದ್ದವು.

ಹಾಗೆಯೇ ಬಿಟ್ಟರೆ ಬೆರಳುಗಳಿಗೆ ಅಪಾಯ ತಪ್ಪಿದ್ದಲ್ಲ ಎಂದು ನಿರ್ಧರಿಸಿದ ಡಾಕ್ಟರರು ರಕ್ತವನ್ನು ಹೊರದೆಗೆಯಲು ಎಲ್ಲ ರೀತಿಯಿಂದಲೂ ಪ್ರಯತ್ನಿಸಿದರು. ಪ್ರಯೋಜನವಾಗದಾಗ ಹಳೆಯ ಚಿಕಿತ್ಸಾ ವಿಧಾನಕ್ಕೆ ಮೊರೆಹೋದರು. ಮುಂದಿನ ಎರಡು ದಿನಗಳಲ್ಲಿ ಒಂದಾದಮೇಲೊಂದರಂತೆ ಜಿಗಣೆಗಳನ್ನು ಆ ಬೆರಳುಗಳಿಗೆ ಹಚ್ಚಲಾಯಿತು. ಅವು ಅಧಿಕವಾಗಿದ್ದ ರಕ್ತವನ್ನು ಹೀರಿ ರಕ್ತವು ಎಂದಿನಂತೆ ಹರಿಯುವಂತೆ ಮಾಡಿದವು. ಫ್ರೆಡರಿಕ್ ಪರ್ಸನ್ ಹದಿನೈದು ದಿನಗಳಲ್ಲಿ ಗುಣಮುಖವಾಗಿ ಮನೆಸೇರಿದ.

ಹೌದು, ಜಿಗಣೆಗಳೀಗ ಶಸ್ತ್ರಚಿಕಿತ್ಸೆಯಲ್ಲಿ ಪ್ರಯೋಜನಕ್ಕೆ ಬರುತ್ತಿವೆ. ಪ್ರಪಂಚದಲ್ಲಿ ಅವು ವಾಸಿಸದ ಸ್ಥಳವೇ ಇಲ್ಲ . ಒಂದೂವರೆ ಸೆಂಟಿಮೀಟರಿನಿಂದ ಹಿಡಿದು ನಲ್ವತ್ತೈದು ಸೆಂಟಿಮೀಟರಿನವರೆಗೂ ಉದ್ದವಿರುವ ಜಿಗಣೆಗಳಲ್ಲಿ ೬೫೦ ಪ್ರಭೇದಗಳಿವೆಯಾದರೂ ಮೇಲೆ ಹೇಳಿದಂತಹ ಪ್ರಸಂಗದಲ್ಲಿ ಉಪಯೋಗಕ್ಕೆ ಬರುವಂಥಾದ್ದು ಹಿರುಡೋ ಮೆಡಿಸಿನಾಲಿಸ್ ಎಂಬ ಜಾತಿಯ ಜಿಗಣೆ.

ಜಿಗಣೆಗಳ ಕೆಲಸವೆಂದರೆ ರಕ್ತಹೀರುವುದು ಎಂಬ ಭಾವನೆ ಸಾರ್ವತ್ರಿಕವಾಗಿದೆ. ಆದರೆ ಎಲ್ಲ ಜಿಗಣೆಗಳೂ ರಕ್ತ ಹೀರುವುದಿಲ್ಲ ಮತ್ತು ರಕ್ತ ಹೀರದ್ದು ವೈದ್ಯಕೀಯದಲ್ಲಿ ಉಪಯೋಗಕ್ಕೆ ಬರುವುದಿಲ್ಲ. ಅವು ತ್ವಚೆಯ ಮೂಲಕ ಉಸಿರಾಡಿಸುತ್ತವೆ. ನಮಗಿರುವ ಹಾಗೆ ಒಂದೇ ಹೃದಯವಿರದೆ ಜಿಗಣೆಗಳಿಗೆ ಎರಡು ಹೃದಯಗಳಿವೆ. ಕೆಲವು ಜಾತಿಯ ಜಿಗಣೆಗಳಿಗೆ ದೇಹದ ಇಬ್ಬದಿಯಲ್ಲೂ ರಕ್ತಹೀರುವ ಅಂಗಗಳಿವೆ. ಇವೆಲ್ಲಕ್ಕಿಂತ ಸ್ವಾರಸ್ಯದ್ದೆಂದರೆ ಒಮ್ಮೆ ಹೊಟ್ಟೆತುಂಬಾ ತಿಂದವೆಂದರೆ ಮುಂದೆ ಇವುಗಳಿಗೆ ತಿಂಗಳುಗಟ್ಟಲೆ ಆಹಾರವೇ ಬೇಡ.

ಕಚ್ಚಲು ಜಿಗಣೆಗೆ ಒಂದಲ್ಲ, ಎರಡಲ್ಲ, ಮೂನ್ನೂರು ದಂತಗಳಿವೆ. ರಕ್ತ ಹೀರುವ ಮೊದಲು ಅದು ಈ ಮುನ್ನೂರು ದಂತಗಳನ್ನೂ ದೇಹದೊಳಗೆ ತೂರಿಸುವುದು. ಹಾಗೆ ಮಾಡುವಾಗ ವೇದನಾಹರವಾದ ರಸಾಯನಿಕವನ್ನೂ ಒಳಗೆ ಕಳುಹಿಸುವುದರಿಂದ ನೋವಾಗುವುದೇ ಇಲ್ಲ. ಅದು ರಕ್ತ ಹೀರಲು ಶುರುಮಾಡಿದಾಗ ರಕ್ತವನ್ನು ತಿಳಿಗೊಳಿಸುವ ದ್ರವವನ್ನೂ ಸ್ರವಿಸುವುದರಿಂದ ಒಳಗೆ ಹೆಪ್ಪುಗಟ್ಟಿದ ರಕ್ತ ಕರಗಿ ರಕ್ತಪರಿಚಲನೆ ಸುಲಭವಾಗುತ್ತದೆ. ಜಿಗಣೆ ಇಪ್ಪತ್ತರಿಂದ ಮೂವತ್ತು ನಿಮಿಷಗಳವರೆಗೆ ಸತತವಾಗಿ ರಕ್ತ ಹೀರಿದರೂ ಏನೇನೂ ತೊಂದರೆಯಾಗದು.

ಕಿವಿಯ ನರಗಳು ಬಲು ಸೂಕ್ಷ್ಮ. ವ್ಯಾಸ ಅರ್ಧ ಮಿಲಿಮೀಟರಿಗಿಂತ ಹೆಚ್ಚಾಗಿರುವುದಿಲ್ಲ. ಕಿವಿ ಗಾಸಿಗೊಂಡಾಗ ಶಸ್ತ್ರ ಚಿಕಿತ್ಸೆ ನಡೆಸಿ ಇಷ್ಟು ಸೂಕ್ಷ್ಮವಾದ ನರಗಳಿಗೆ ಪುನಃ ಸಂಪರ್ಕ ಕಲ್ಪಿಸುವುದು ಕಷ್ಟ. ಅಂತಹುದರಲ್ಲಿ ಸ್ವಲ್ಪ ಏರುಪೇರಾದರೆ ಇನ್ನೂ ಕಷ್ಟ. ಅಂತಹ ಪ್ರಸಂಗದಲ್ಲೂ ಜಿಗಣೆಗಳು ಸಹಾಯಕ್ಕೆ ಬರುತ್ತವೆ. ಒಮ್ಮೆ ಹೀಗೇ ಆಯಿತು. ಐದು ವರ್ಷದ ಗ್ರೈಕೊಂಡೇವಿ ಎಂಬ ಮಗುವಿನ ಕಿವಿಯನ್ನು ನಾಯಿ ಕಚ್ಚಿದ್ದರಿಂದ ಶಸ್ತ್ರಚಿಕಿತ್ಸಕರು ಹನ್ನೆರಡು ಗಂಟೆಗಳವರೆಗೆ ಹೆಣಗಾಡಿ ಅದನ್ನು ಸರಿಪಡಿಸಿದರು. ಆದರೆ ಇದಾದ ಮೂರು ದಿನಗಳ ನಂತರ ಕಿವಿಯು ಕಡುನೀಲಿ ಬಣ್ಣಕ್ಕೆ ತಿರುಗಿ ನಂತರ ನೇರಳೆ ಬಣ್ಣಗೆಟ್ಟಿತು. ಶಸ್ತ್ರಚಿಕಿತ್ಸಕರ ತಂಡದ ಮುಖಂಡ ಜೋಸೆಫ್ ಅಪ್ಟಾನ್ ಎಂಬುವವನಾಗಿದ್ದ. ವಿಯೆತ್‌ನಾಮ್ ಯುದ್ಧದಲ್ಲಿ ಸೈನಿಕರಿಗೆ ಗಾಯವಾಗಿ ರಕ್ತ ಹೆಪ್ಪುಗಟ್ಟಿದಾಗ ಜಿಗಣೆಗಳನ್ನು ಉಪಯೋಗಿಸಿದ ಅನುಭವ ಅವನಿಗಿತ್ತು. ಅದನ್ನಿಲ್ಲಿ ಪ್ರಯೋಗಿಸಲು ಆತ ನಿರ್ಧರಿಸಿದ. ಅನಂತರ ಆರು ದಿನಗಳ ಪರ್ಯಂತ ಗ್ರೈಕೊಂಡೇವಿಯ ಕಿವಿಗೆ ಅವು ದಪ್ಪವಾಗಿ ಸಂತೃಪ್ತಿಗೊಂಡು ಕೆಳಗೆ ಬೀಳುವವರೆಗೂ ಒಂದಾದ ಮೇಲೊಂದರಂತೆ ಹನ್ನೆರಡು ಜಿಗಣೆಗಳನ್ನು ಹಚ್ಚಲಾಯಿತು. ಚಿಕಿತ್ಸೆಯ ಕೊನೆಯ ದಿನ ಗಾಯಗೊಂಡ ಕಿವಿಯಲ್ಲಿನ ರಕ್ತ ಪರಿಚಲನೆ ಯಥಾಸ್ಥಿತಿಗೆ ತಿರುಗಿತ್ತು. ಮಾರನೆಯ ದಿನ ಅದರ ಬಣ್ಣ ಕೂಡ ಸಹಜ ಸ್ಥಿತಿಗೆ ಬಂದಿತ್ತು.

ತನ್ನ ಸಹೋದ್ಯೋಗಿಗಳಿಂದ ವಿರೋಧವಿದ್ದರೂ ಪೀಟರ್ ಮಹಾಫಿ ಎಂಬ ಶಸ್ತ್ರಚಿಕಿತ್ಸಕ ೧೯೭೭ರಷ್ಟು ಹಿಂದೆಯೇ ಕತ್ತರಿಸಿಹೋದ ಬೆರಳನ್ನು ಹೊಲಿಯುವಲ್ಲಿ ಜಿಗಣೆಗಳನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದ. ರಗ್‌ಬಿ ಪಂದ್ಯಗಳನ್ನಾಡುವ ಆಟಗಾರರಿಗೆ ಕಣ್ಣಿನ ಹತ್ತಿರ ರಕ್ತ ಹೆಪ್ಪುಗಟ್ಟಿದಾಗ ತಾನು ಜಿಗಣೆಗಳ ಸಹಾಯದಿಂದ ಅದನ್ನು ನಿವಾರಿಸಿದ್ದ

ನ್ನಾತ ಸ್ಮರಿಸಿಕೊಳ್ಳುತ್ತಾನೆ. ಬಹುಶಃ ಆದ್ದರಿಂದಲೇ ಆತನ ಚಿಕಿತ್ಸಾವಿಭಾಗದಲ್ಲಿ ಒಂದು ಪಾತ್ರೆಯ ತುಂಬ ಜಿಗಣೆಗಳ ಸಂಗ್ರಹ ಯಾವಾಗಲೂ ಇದ್ದೇ ಇರುತ್ತದೆ.

"ಲೇಥ್ ಯಂತ್ರ ಅಥವಾ ಮುದ್ರಣ ಯಂತ್ರಗಳ ಮೇಲೆ ಕೆಲಸ ಮಾಡುವಾಗ ಅಪಘಾತಕ್ಕೆ ಈಡಾಗಿ ಬೆರಳುಗಳು ಕತ್ತರಿಸಲ್ಪಟ್ಟಾಗ ಜಿಗಣೆಗಳಿಂದ ವಾಸಿಯಾದದ್ದನ್ನು ನೋಡಿದ್ದೇನೆ," ಎಂದು ೪೭ ವರ್ಷದ ಶಸ್ತ್ರಚಿಕಿತ್ಸಕರೊಬ್ಬರು ಹೇಳುತ್ತಾರೆ. ಎಷ್ಟೋ ಪ್ರಸಂಗಗಳಲ್ಲಿ ಕ್ಲಿಷ್ಟಕರವಾದ ಹಾಗೂ ದುಬಾರಿಯಾದ ಶಸ್ತ್ರಕ್ರಿಯೆಯ ಅವಶ್ಯಕತೆಯನ್ನೇ ತಪ್ಪಿಸುವುದರಿಂದ ಎಂಟು ಪೌಂಡುಗಳಿಗೊಂದರಂತೆ ದೊರೆಯುವ ಈ ಜಿಗಣೆಗಳು ಒಂದು ರೀತಿಯಲ್ಲಿ ಅತಿ ಕಡಿಮೆ ಬೆಲೆಯ ಔಷಧಗಳೆಂದೇ ಹೇಳಬೇಕು.

ಅಂದಹಾಗೆ ಫ್ರೆಡೆರಿಕ್ ಪರ್ಸನ್ನನ ಬೆರಳುಗಳಿಗಾಗಲಿ ಗೈಕೊಂಡೇವಿಯ ಕಿವಿಗಾಗಲಿ ಉಪಯೋಗಿಸಿದ ಜಿಗಣೆಗಳು ಎಲ್ಲಿಂದ ಬಂದಿದ್ದವೆನ್ನುವುದು ಗೊತ್ತೆ? ಬ್ರಿಟನ್ನಿನ ಸೌತ್‌ವೇಲ್ಸಿನ ಹೆಂಡಿ ಎಂಬ ಹಳ್ಳಿಯಿಂದ. ಅಲ್ಲಿ ಡಾ. ರಾಯ್ ಸಾಯರ್ ಎನ್ನುವವರು 'ಬಯೋಫಾರ್ಮ್' ಎಂಬ ಹೆಸರಿನ ಜಿಗಣೆ ಸಾಂಗೋಪನ ಕೇಂದ್ರವೊಂದನ್ನು ನಡೆಸುತ್ತಿದ್ದಾರೆ. ನಿಜ ಹೇಳಬೇಕೆಂದರೆ ಅಷ್ಟು ದೊಡ್ಡ ಜಿಗಣೆ ಸಾಕುವ ಕೇಂದ್ರ ಪ್ರಪಂಚದಲ್ಲಿ ಬೇರೆಲ್ಲಿಯೂ ಇಲ್ಲ. ಪ್ರತಿ ತಿಂಗಳು ಅದು ಜಗತ್ತಿನಾದ್ಯಂತ ವೈದ್ಯರು ಹಾಗೂ ಆಸ್ಪತ್ರೆಗಳಿಗೆ ಸುಮಾರು ಐದು ಸಾವಿರದಷ್ಟು ಹಿರುಡು ಮೆಡಿಸೆನಾಲಿಸ್ ಜಾತಿಯ ಜಿಗಣೆಗಳನ್ನು ಒದಗಿಸುತ್ತಿದೆ.

ಈ ಆಸ್ಪತ್ರೆ ಅಸ್ತಿತ್ವಕ್ಕೆ ಬಂದ ರೀತಿಯೂ ಸ್ವಾರಸ್ಯಕರ. ರಾಯ್ ಸಾಯರ್ ಹುಟ್ಟಿದ್ದು ಅಮೇರಿಕಾದ ಸೌತ್ ಕೆರೋಲಿನಾದಲ್ಲಿ. ಅಲ್ಲಿನ ಜೌಗು ಪ್ರದೇಶದಲ್ಲಿ ಜಿಗಣೆಗಳದ್ದೇ ಸಾಮ್ರಾಜ್ಯ. ಈಜುವಾಗ ಮೈಮೇಲೆಲ್ಲ ಜಿಗಣೆಗಳು ಅಂಟಿಕೊಳ್ಳುತ್ತಿದ್ದವಂತೆ. ಶಾಲೆಯಲ್ಲಿ ಓದುತ್ತಿರುವಾಗ ಹಿಂದೆ ಸೌಮ್ಯ ರೀತಿಯ ರಕ್ತಸ್ರಾವವನ್ನು ಉಂಟುಮಾಡಲು ಜಿಗಣೆಗಳನ್ನು ಉಪಯೋಗಿಸುತ್ತಿದ್ದ ವಿಚಾರ ತಿಳಿದು ಅವರಿಗೆ ಅಚ್ಚರಿಯಾಯಿತಂತೆ. ಅವರು ಹೇಳುವ ಪ್ರಕಾರ ಅಂಗಚ್ಛೇದನವನ್ನು ಹೊರತುಪಡಿಸಿದರೆ ಹಿಂದಿನ ಕಾಲದಲ್ಲಿ ಈ ರೀತಿಯ ರಕ್ತಸ್ರಾವವೊಂದೇ ಶಸ್ತ್ರಚಿಕಿತ್ಸೆಯ ಮುಖ್ಯ ವಿಧಾನವಾಗಿತ್ತಂತೆ.

ಡಾ. ಸಾಯರ್ ವೇಲ್ಸ್ ವಿಶ್ವವಿದ್ಯಾಲಯದಿಂದ ಜೀವಶಾಸ್ತ್ರದಲ್ಲಿ ಪಿ.ಎಚ್.ಡಿ. ಪದವಿಯನ್ನು ಪಡೆದರು. ಅನಂತರ ಸತತ ಹತ್ತು ವರ್ಷಗಳ ವರೆಗೆ ಶ್ರಮಿಸಿ ಪ್ರಪಂಚದಲ್ಲೆ ಜಿಗಣೆಗಳ ಬಗೆಗಿರುವ ಏಕೈಕ ಪ್ರಮಾಣ ಗ್ರಂಥವೆಂದು ಹೇಳಬಹುದಾದ 'ಲೀಚ್ ಬಯಾಲಜಿ ಆಂಡ್ ಬೀಹೇವಿಯರ್' (ಜಿಗಣೆಗಳ ಜೀವಶಾಸ್ತ್ರ ಹಾಗೂ ವರ್ತನೆ) ಎಂಬ ಗ್ರಂಥವನ್ನು ಮೂರು ಸಂಪುಟಗಳಲ್ಲಿ ರಚಿಸಿದರು. ಅನಂತರ ಅವರು ಕೈಹಾಕಿದ್ದು ಬಯೋಫಾರ್ಮಿನ ಸಾಹಸಕ್ಕೆ. ಇಂದು ಅವರ ಹಳ್ಳಿಯಾದ ಹೆಂಡಿಯಲ್ಲಿ ನಿಯಂತ್ರಿತ ಉಷ್ಣತೆಯ ವಾತಾವರಣದಲ್ಲಿ ಸುಮಾರು ಎಂಭತ್ತು ಸಾವಿರ ವಿವಿಧ ಜಾತಿಯ ಜಿಗಣೆಗಳ ಸಂಗ್ರಹವಿದೆ.

೧೯೭೭ರಲ್ಲಿ ವಿವಿಧ ತಳಿಯ ಜಿಗಣೆಗಳನ್ನು ಸಂಗ್ರಹಿಸಲು ಶೋಧಯಾತ್ರೆ ಕೈಗೊಂಡಾಗ ಅಷ್ಟಾಗಿ ಕಾಣಸಿಗದ ಹಿಮಂಟರಿಯಾ ಘಿಲಿಯಾನಿ ಎಂಬ ಪ್ರಭೇದವನ್ನು ಫ್ರೆಂಚ್ ಗಯಾನಾದ ಕಾಡುಗಳಲ್ಲಿ ಸಂಪಾದಿಸಿದರು. ಈ ಶೋಧಯಾತ್ರೆಯಲ್ಲಿ ಅವರಿಗೆ ಸುಮಾರು ಮೂವತ್ತು ಮಾದರಿಗಳು ದೊರಕಿದವು. ೧೯ನೆಯ ಶತಮಾನದಲ್ಲೆ ಇಟಲಿಯ ಪ್ರಕೃತಿತಜ್ಞರಾದ ವಿಟ್ಟೋರ್ ಘಿಲಿಯಾನಿ ಎಂಬುವರು ಅಮೇಜಾನಿನ ಮುಖಜ ಪ್ರದೇಶದಲ್ಲಿ ಈ ಜಿಗಣೆಗಳನ್ನು ಕಂಡುಹಿಡಿದದ್ದರಿಂದ ಇವುಗಳಿಗೆ ಅವರ ಹೆಸರನ್ನೇ ಇಡಲಾಯಿತು.

ದಕ್ಷಿಣ ಅಮೇರಿಕದ ಜವುಗು ಪ್ರದೇಶದ ವಾತಾವರಣವನ್ನು ಪ್ರಯೋಗಾಲಯದಲ್ಲಿ ಕೃತಕವಾಗಿ ಏರ್ಪಡಿಸಿ ಡಾ. ಸಾಯರ್ ಹಿಮಂಟರಿಯಾ ಘಿಲಿಯಾನಿ ಪ್ರಭೇದಕ್ಕೆ ಸೇರಿದ ಜಿಗಣೆಗಳ ಸಂಖ್ಯೆಯನ್ನು ಹತ್ತುಸಾವಿರಕ್ಕೆ ಏರಿಸಿದ್ದಾರೆ. ಈ ಜಿಗಣೆಗಳ ಜೊಲ್ಲಿನಲ್ಲಿ ಹೆಪ್ಪುಗಟ್ಟಿದ ರಕ್ತವನ್ನು ತಕ್ಷಣ ಕರಗಿಸುವ ಕಿಣ್ವಗಳಿವೆ. ಅವುಗಳಿಗೆ ಡಾ. ಸಾಯರ್ ಹಿಮಂಟಿನ್ ಎಂಬ ಹೆಸರು ಕೊಟ್ಟಿದ್ದಾರೆ. ಈ ವಸ್ತುವನ್ನು ಈಗಾಗಲೆ ಅನುವಂಶೀಯ ತಂತ್ರಜ್ಞಾನದ ಮೂಲಕ ಉತ್ಪಾದಿಸಲಾಗುತ್ತಿದೆ.

ಬಯೋಫಾರ್ಮಿನ ವಾರ್ಷಿಕ ವಹಿವಾಟು ಈಗ ಐದು ಲಕ್ಷ ಪೌಂಡುಗಳಷ್ಟಿದ್ದು ಆ ಪೈಕಿ ಶೇಕಡಾ ೮೦ರಷ್ಟು ಭಾಗ ಜಿಗಣೆಯ ಲಾಲಾರಸದಿಂದ ಪ್ರತ್ಯೇಕಿಸಿದ ಜೀವರಸಾಯನಗಳ ಮಾರಾಟದಿಂದಲೇ ಬರುತ್ತಿದೆ. ಹತ್ತಕ್ಕಿಂತ ಹೆಚ್ಚು ಔಷಧಗಳನ್ನು ಈಗಾಗಲೆ ಜಿಗಣೆಗಳಿಂದ ಪಡೆಯಲಾಗಿದ್ದು ಮುಂದೊಂದು ದಿನ ಎಂಬಾಲಿಸಮ್ (ರಕ್ತ ಹೆಪ್ಪುಗಟ್ಟುವುದರಿಂದ ಅಪಧಮನಿಗಳು ಕೆಟ್ಟುಹೋಗುವುದು) ಸಂಧಿವಾತ, ಗ್ಲಾಕೊಮಾ (ಕಣ್ಣು ಗುಡ್ಡೆಯಲ್ಲಿ ಒತ್ತಡ ಹೆಚ್ಚಿ ತನ್ಮೂಲಕ ಕ್ರಮೇಣ ದೃಷ್ಟಿನಾಶವಾಗುವ ಒಂದು ರೋಗ) ಮುಂತಾದ ವ್ಯಾಧಿಗಳನ್ನು ಈ ಔಷಧಗಳಿಂದಲೇ ಗುಣಪಡಿಸಲು ಸಾಧ್ಯವಾಗಬಹುದೆಂದು ಡಾ. ರಾಯ್ - ಸಾಯರ್ ಹೇಳುತ್ತಾರೆ.

"ನಮ್ಮ ಪೂರ್ವಜರು ಜಿಗಣೆಗಳ ಔಷಧೀಯ ಗುಣಗಳ ಬಗ್ಗೆ ಹೇಳಿದ್ದು ಅದೆಷ್ಟು ಸರಿ ಎಂಬುದೀಗ ವೈಜ್ಞಾನಿಕ ಹಿನ್ನೆಲೆಯಲ್ಲಿ ನಮಗೀಗ ಅರ್ಥವಾಗುತ್ತಿದೆ. ಒಂದು ರೀತಿಯಲ್ಲಿ ಜಿಗಣೆ ಒಂದು ಜೀವಂತ ಔಷಧಾಲಯವೇ ಸರಿ," ಎಂದವರು ಹೇಳುವುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ●

(ಆಧಾರ: 'ರೀಡರ್ಸ್ ಡೈಜೆಸ್ಟ್'ನಲ್ಲಿ ಪ್ರಕಟವಾದ ಅಲನ್ ರೋಡ್ ಅವರ ಲೇಖನ)

---

## "ಸೋನಾರೆಕ್ಸ್"

ನೀವು ಗೊರಕೆ ಹೊಡೆಯುವಿರಾ? ಚಿಂತಿಸದಿರಿ. ಇಂಗ್ಲೆಂಡಿನ ವಿಜ್ಞಾನಿಗಳು ಹಲವು ವರ್ಷಗಳ ಸತತ ಪ್ರಯತ್ನದ ನಂತರ ಗೊರಕೆಯನ್ನು ತಡೆಗಟ್ಟುವ ಒಂದು ಔಷಧವನ್ನು ಕಂಡುಹಿಡಿದಿದ್ದಾರೆ. ಅದರ ಹೆಸರು "ಸೋನಾರೆಕ್ಸ್". ಗೊರಕೆರಹಿತ ಸುಖ ನಿದ್ರೆಗೆ ಅದರ ಮೂರು ಹನಿಗಳು ಸಾಕು.

- ವಿಜಯ ಸಿ. ಪೂಜಾರಿ

---

## ಕಾಲೇಜಿನಲ್ಲಿ ಓದಿಲ್ಲವಲ್ಲ!

ಕಾಲೇಜಿನಲ್ಲಿ ಓದುತ್ತಿದ್ದ ನಾಲ್ಕಾರು ವಿದ್ಯಾರ್ಥಿಗಳು ಹಳ್ಳಿಯ ಜೀವನದ ಬಗ್ಗೆ ಹೆಚ್ಚಿನ ವಿಷಯ ತಿಳಿದುಕೊಳ್ಳಲು ಹತ್ತಿರವೇ ಇದ್ದ ಒಂದು ಹಳ್ಳಿಗೆ ಹೋದರು. ಅಲ್ಲಿ ಅವರು ಸಿಗರೇಟ್ ಸೇದಿಕೊಂಡು, ನಗುತ್ತಾ ಹರಟುತ್ತಾ, ಹಳ್ಳಿಗರೊಂದಿಗೆ ಮಾತನಾಡುತ್ತಾ ಕಬ್ಬಿನ ಬೆಳೆಯಿದ್ದ ಜಮೀನಿನ ಹತ್ತಿರ ಬಂದರು. ನೀರು ಎತ್ತಲು ಪಂಪ್ ಇರಲಿಲ್ಲ; ಬದಲು ಎತ್ತುಗಳಿಂದ ಆ ಕೆಲಸ ಮಾಡಿಸುತ್ತಿದ್ದರು. ಒಂದು ದೊಡ್ಡ ಚರ್ಮದ ಚೀಲ ನೀರಿನಲ್ಲಿ ಮುಳುಗಿ ತುಂಬಿಕೊಂಡು ಮೇಲಕ್ಕೆ ಎಳೆದಾಗ ಕಾಲುವೆಗೆ ನೀರನ್ನು ಬಿಡುತ್ತಿತ್ತು. ಈ ಚರ್ಮದ ಚೀಲಕ್ಕೆ ಕಟ್ಟಿದ ಹಗ್ಗವನ್ನು ನೊಗಕ್ಕೆ ಸಿಕ್ಕಿಸಿ ಎತ್ತುಗಳು ಎಳೆಯುವಂತೆ ಮಾಡಿದ್ದರು ಆ ರೈತರು. ಎತ್ತುಗಳ ಕುತ್ತಿಗೆಗೆ ಕಟ್ಟಿದ್ದ ಗಂಟೆಗಳು ಘಲ್ ಘಲ್ ಎಂದು ಶಬ್ದ ಮಾಡುತ್ತಿದ್ದವು. "ಇದರ ಉದ್ದೇಶ ಏನು?" ಎಂದು ಕೇಳಿದ ಹುಡುಗರಿಗೆ ಆ ರೈತ ಹೇಳಿದ-"ಎತ್ತುಗಳು ಹಗ್ಗ ಎಳೆದು ತಿರುಗಾಡುವಾಗ ಶಬ್ದ ಆಗುತ್ತಿರುತ್ತೆ ಅವು ನಿಂತು ಬಿಟ್ಟರೆ ಶಬ್ದವಿಲ್ಲದ್ದು ನೋಡಿ ಅವುಗಳನ್ನು ಎಚ್ಚರಿಸಲು ಸಹಾಯವಾಗುತ್ತೆ.

ಚುರುಕು ಬುದ್ಧಿಯ ಹುಡುಗನೊಬ್ಬ ಕೇಳಿದ: "ಅವು ಸೋಮಾರಿತನದಿಂದ ನಿಂತ ಕಡೆಯೇ ನಿಂತು ಕೆಲಸ ಮಾಡದೆ ಸುಮ್ಮನೆ ತಲೆ ಅಲ್ಲಾಡಿಸುತ್ತಿದ್ದರೆ ಶಬ್ದವಾಗುತ್ತಲ್ಲಾ!"

ಅದಕ್ಕೆ ಕಿಲಾಡಿ ರೈತ ಚಾಟಿಯೇಟಿನಂತೆ ಉತ್ತರಿಸಿದ-"ಅವಕ್ಕೆ ಅಷ್ಟು ತಿಳುವಳಿಕೆ ಇಲ್ಲ ಸ್ವಾಮಿ, ಅವೇನೂ ಕಾಲೇಜಿನಲ್ಲಿ ಓದಿಲ್ಲವಲ್ಲ!"

ಒಂದೇ ನಿಮಿಷದಲ್ಲಿ ಹುಡುಗರು ನಾಪತ್ತೆ.

- ಶಿವನಂಜಪ್ಪ

೩೩

# ನಮಸ್ತೇ ವಾಯೋ

ವಾಯುವಿನ ಹಿರಿಮೆಯನ್ನರಿತ ಮಹರ್ಷಿಗಳು- 'ನಮಸ್ತೆ ವಾಯೋ, ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ' ಎಂಬ ಮಂತ್ರೋಚ್ಚಾರದ ಮೂಲಕ 'ವಾಯುವೆ! ನಿನಗಿದೋ ನಮನ; ನೀನೇ ಪ್ರತ್ಯಕ್ಷ ಬ್ರಹ್ಮವಾಗಿರುತ್ತೀ' ಎಂದು ಸಾರಿದ್ದಾರೆ.

ಈಶೋಪನಿಷತ್ತಿನಲ್ಲಿಯ 'ತದೇಽಜತಿ ತನ್ನೈಜತಿ ತದ್ದೂರೇ ತದ್ವಂತಿಕೆ! ತದನಂತರಸ್ಯಾಸ್ಯ ಸರ್ವಸ್ಯ ತದುಸರ್ವಸ್ಯ ಬಾಹ್ಯತ! (ಅದು ಚಲಿಸುತ್ತದೆ; ಅದು ಚಲಿಸುವುದಿಲ್ಲ. ಅದು ದೂರದಲ್ಲಿದೆ; ಅದು ಹತ್ತಿರದಲ್ಲೂ ಇದೆ. ಅದು ಈ ಎಲ್ಲದರ ಒಳಗಿದೆ; ಅದು ಎಲ್ಲದರ ಹೊರಗೂ ಇದೆ.) ಎಂಬ ಮಂತ್ರವು ಆತ್ಮತತ್ವಕ್ಕೆ ಅನ್ವಯವಾಗುವಂಥದು. ವಾಯುವನ್ನು ಕುರಿತು ಕೂಡ ಇದೇ ಧಾಟಿಯಲ್ಲಿ ನಿವೇದಿಸಬಹುದೇನೋ.

ಭವಿಷ್ಯೋತ್ತರ ಪುರಾಣದಲ್ಲಿಯ ಕತೆಯೊಂದು ವಾಯುವಿನ ಮಹಿಮೆಯನ್ನು ಎತ್ತಿ ತೋರಿಸುವಂಥದು. ಒಂದು ಸಲ ಪೃಥ್ವಿಯನ್ನು ಹೊತ್ತು ಆದಿಶೇಷನಿಗೂ, ಜಗವನ್ನೆಲ್ಲ ಸುತ್ತಿ ಸುಳಿಯುವ ವಾಯುವಿಗೂ 'ನಾನು ಮೇಲು, ನಾನು ಮಿಗಿಲು' ಎಂಬ ವಾದ ತಲೆದೋರಿತಂತೆ. ತನ್ನ ಬಲವನ್ನು ತೋರ್ಪಡಿಸಲು ಶೇಷನು ಬೆಟ್ಟವೊಂದನ್ನು ಬಿಗಿಯಾಗಿ ಸುತ್ತಿಕೊಂಡು ಪೂತ್ಕರಿಸುತ್ತ ಕುಳಿತುಕೊಂಡನಂತೆ. ತನ್ನಿಂದಾಗಿ ಇದ್ದ ತಾಣದಲ್ಲಿಯೇ ಬೆಟ್ಟ ಗಟ್ಟಿಯಾಗಿ ಉಳಿದುಕೊಳ್ಳುವುದೆಂಬ ಲೆಕ್ಕಾಚಾರ ಆತನದು. ವಾಯುವು ಬಂದುದೇ ತಡ, ತನ್ನ ಪ್ರಚಂಡ ವೇಗದ ಪ್ರಭಾವದಿಂದಾಗಿ ಶೇಷ ಸಮೇತವಾದ ಪರ್ವತವನ್ನು ಚೆಣಿಯಂತೆ ದೂರಕ್ಕೆ ಚಿಮ್ಮಿಬಿಟ್ಟನಂತೆ. ಪಾಪ! ಬೆಟ್ಟದ ಅಡಿಯಲ್ಲಿ ಸಿಲುಕಿಕೊಂಡ ಶೇಷನು ಮೈಯೆಲ್ಲ ನುಜ್ಜು-ಗುಜ್ಜಾಗಿ ಬವಣೆ ಪಟ್ಟನಂತೆ. ವಾಯುವಿನ ಶಕ್ತಿ ಅಧಿಕತರವೆಂಬುದನ್ನು ಮನಗಂಡನಂತೆ.

ವಾಯು ಸ್ವಯಂ ಬಲಶಾಲಿಯಂತೂ ಸರಿಯೇ ಸರಿ. ಅದರ ಸರಿಯಾದ ಸೇವನೆಯಿಂದ ಸರ್ಪದಂಥ ಕ್ಷುದ್ರ ಜಂತು ಕೂಡ ಅತ್ಯಂತ ಗಟ್ಟಿಮುಟ್ಟಾಗಿರುತ್ತದೆ. 'ಸರ್ಪಾಃಪಿಬಂತಿ ಪವನಂ ನ ಚ ದುರ್ಬಲಾಸ್ತೇ' ಎಂಬ ಸಂಸ್ಕೃತ ಸುಭಾಷಿತ ಈ ಅಂಶವನ್ನು ಎತ್ತಿ ತೋರಿಸುತ್ತದೆ. ಬೇರೆ ಬೇರೆ ಗುರಿಯನ್ನು ಸಾಧಿಸ ಹೊರಟ ಪಾರ್ವತಿ, ಭಗೀರಥ, ಪಾರ್ಥರಂಥವರು ಸುದೀರ್ಘ ಸಮಯ ಅನ್ನ-ನೀರನ್ನು ತೊರೆದು ಘೋರ ತಪಸ್ಸಿನಲ್ಲಿ ನಿರತರಾದರು. ಅಂಥ ಕಾಲಕ್ಕೆ ಅವರು ಸೇವಿಸಿದುದು ಕೇವಲ ವಾಯುವನ್ನು. ಆರೋಗ್ಯವಂತರಿಗೂ ಜಡ್ಡು ತರಿಸುವಂಥ ಇಂದಿನ ನಗರ ಜೀವನದ ಜಡ್ಡುಗಟ್ಟಿದ ವಾತಾವರಣದಿಂದ ಒಂದೆರಡು ಗಂಟೆಯಷ್ಟಾದರೂ ದೂರ ಉಳಿಯಲೆಂದು ಜನ ವಾಯುಸೇವನೆಗೋಸುಗ ನಗರದ ಹೊರ ವಲಯಕ್ಕೆ ಶರಣು ಹೋಗುತ್ತಾರೆ.

ನಸುಕಿನ ಹೊತ್ತು, ಇಲ್ಲವೆ ಸಂಜೆ ಸಮಯ ಈ ತೆರನಾಗಿ ಕೈಕೊಳ್ಳುವ ವಾಯುವಿಹಾರ ಅವರನ್ನು ದಿನವಿಡೀ ಉಲ್ಲಸಿತರನ್ನಾಗಿ ಇಡುತ್ತದೆ; ವಾಯುವಿನ ಅನುಗ್ರಹದಿಂದ ಶಾಂತಿ-ಪುಷ್ಟಿ-ತುಷ್ಟಿ ಲಭಿಸುತ್ತವೆ ಎಂಬುದಕ್ಕೆ ಬೇರೆ ಪುರಾವೆ ಬೇಕೆ?

ಬಲವಾಗಿ ಬೀಸುವ ಗಾಳಿಯ ಸಹಾಯದಿಂದ ಪವನ ಚುಕ್ಕಿ ಕಾರ್ಯೋನ್ಮುಖವಾಗುವುದರಿಂದ ಆಳವಾದ ಬಾವಿಯ ನೀರನ್ನು ಮೇಲಕ್ಕೆ ಎತ್ತಲು ಸಾಧ್ಯ. ನೀರಿನಿಂದ ಟರ್ಬೈನ್ ತಿರುಗಿಸಿ ಹೇಗೋ ಹಾಗೆಯೇ ಗಾಳಿಯ ನೆರವಿನಿಂದ ವಿದ್ಯುತ್ತನ್ನು ಉತ್ಪಾದಿಸಬಹುದು.

ವಾಯುವೇನೂ ಚೋರನಲ್ಲ. ಆದರೆ ಕಳ್ಳನ ವ್ಯವಹಾರ ಅದಕ್ಕೂ ಸಾಕಷ್ಟು ಕರಗತ. ಮನೆಯ ಕಿಟಕಿ, ಬಾಗಿಲು ತೆರೆದಿದ್ದರಾಯಿತು. ಕಳ್ಳನಿಗೆ ಅದು ಕರೆಯೋಲೆ ಇದ್ದಂತೆ... ಕಬ್ಬಿಣದ ಸರಳುಗಳನ್ನು ಮಣಿಸಿ, ಇಲ್ಲವೆ ಮುರಿದು ಒಳಕ್ಕೆ ನುಸುಳಿಬಿಡುತ್ತಾನೆ. ಒಳಗಿದ್ದ ನಗ-ನಾಣ್ಯವನ್ನೆಲ್ಲ ಸ್ವಾಧೀನಪಡಿಸಿಕೊಂಡು ಪರಾರಿಯಾಗುತ್ತಾನೆ. ಹೋಗುವ ಮುನ್ನ ನಿರ್ವಾಹವಿಲ್ಲದೆ ಹೆಜ್ಜೆಯ ಕುರುಹುಗಳನ್ನೂ, ಬೆರಳ ಗುರುತುಗಳನ್ನೂ ಅಲ್ಲಲ್ಲಿ ಬಿಟ್ಟು ಹೋಗುತ್ತಾನೆ. ವಾಯುವಾದರೋ ಸಲಾಕಿಯನ್ನು ಕೀಳುವ ಮಟ್ಟಕ್ಕೆ ಇಳಿಯುವುದಿಲ್ಲ; ಒಳಕ್ಕೆ ಪ್ರವೇಶಿಸಿ ಎಲ್ಲದರ ಮೇಲೆ ಒಂದಿನಿತು ಕೈಯಾಡಿಸುತ್ತದೆ; ತನ್ನೊಂದಿಗೆ ತಂದ ಹುಡಿಯ ಕಣಗಳನ್ನು ಎಲ್ಲೆಡೆ ಕೊಡಹಿ, ತನ್ನನ್ನು ಬರಿದು ಮಾಡಿಕೊಂಡು ಸದ್ದಿಲ್ಲದೆ ಇನ್ನೊಂದೆಡೆಯಿಂದ ಹೊರಕ್ಕೆ ಪಾರಾಗುತ್ತದೆ. ಗಾಳಿಯ ಪ್ರವೇಶ ಕಿಟಕಿಯ ಮೂಲಕವೇ ಆಗುವುದರಿಂದ 'ವಾತಾಯನ' ಎಂಬ ಶಬ್ದ (ಗಾಳಿಯ ಸಾಗಾಟದ ದಾರಿ) ಕಿಟಕಿಗೆ ಪರ್ಯಾಯಪದವಾಗಿ ಬಳಕೆಯಲ್ಲಿ ಬಂದಿರಬೇಕು.

ಕಮ್ಮಾರನ ಕುಲಿಮೆಯಲ್ಲಿಯ ಬೆಂಕಿ ಆರದಂತೆ ನೋಡಿಕೊಳ್ಳುವ ಹೊಣೆಗಾರಿಕೆ 'ಭುಸ್ ಭುಸ್' ಎಂದು ಊದುತ್ತ ಗಾಳಿಯನ್ನು ಒದಗಿಸುವ ಚರ್ಮದ ಚೀಲವಾದ ತಿದಿಯದು. ಅದರಂತೆಯೆ ಜ್ಯೋತಿಃಸ್ವರೂಪನಾದ ಪರಮೇಶ್ವರನ ಕಿಡಿಯಂತಿರುವ ಜೀವವನ್ನು ಶರೀರದಲ್ಲಿ ಸುಸ್ಥಿತಿಯಲ್ಲಿ ಕಾಪಾಡಿಕೊಂಡು ಹೋಗುವ ಹೊಣೆ ವಾಯುವಿನದು. ಪುಪ್ಪುಸದೊಳಗೆ ನಿರಂತರ ಸೇರಿಕೊಳ್ಳುವ ಪ್ರಾಣವಾಯು ಜೀವದ ಕಿಡಿಯನ್ನು ಆರದಂತೆ ನೋಡಿಕೊಳ್ಳುತ್ತದೆ ಎಂದರೆ ತಪ್ಪಾಗದು. ಎಂತಲೇ ಮರಣಕಾಲಕ್ಕೆ ಪ್ರಾಣವಾಯುವಿನ ಅಂತಿಮ ನಿರ್ಗಮನದೊಂದಿಗೆ ಕಾಯದೊಳಗಣ ಕಾವು ಕೂಡ ತಣ್ಣಗಾಗುತ್ತದೆ. ಅಷ್ಟೇ ಏಕೆ? ಈ ಪ್ರಾಣಾನಿಲದೊಂದಿಗೆ ಜಲವು ಕೂಡ ಹೊರಹೊರಡಲು ಆತುರಪಡುತ್ತದೆ.

'ವಾಯು' ಶಬ್ದವೇ ಸೂಚಿಸುವಂತೆ ಅದು ಘನರೂಪವಲ್ಲ. ಆದರೆ ಘನರೂಪವನ್ನು ಪಡೆದ ಧಾನ್ಯವನ್ನು ತೂರಿ ಅದರೊಳಗೆ ಬೆರೆತ ಹೊಟ್ಟನ್ನು ಬೇರ್ಪಡಿಸಲು ಅನುಕೂಲ ಮಾಡಿಕೊಡುವ ಕೆಲಸ ಈ ವಾಯುವಿನದು. ಅದಕ್ಕೆಂದೆ 'ಗಾಳಿ ಬಿಟ್ಟಾಗ ತೂರಿಕೊ' ಎಂಬ ಹಿತವಚನ ಹಿಂದಿನಿಂದಲೇ ಇಂದಿನವರೆಗೂ ಬಳಕೆಯಲ್ಲಿ ಇದೆ. ಗಾಳಿಯಲ್ಲಿ ಬೀಜವನ್ನು ತೂರುವ ಕಾರ್ಯ ನಮ್ಮದು. ಆಂಗ್ಲರ ಧೈರ್ಯ ಇನ್ನೊಂದು ವಿಧ. ಪ್ರಪಂಚದ ಐದು ಭೂಖಂಡಗಳಲ್ಲಿ ತಮ್ಮ ಪ್ರಭುತ್ವವನ್ನು ಪ್ರಸ್ಥಾಪಿಸಿದವರು ಅವರು. ಬ್ರಿಟಿಶ್ ಸಾಮ್ರಾಜ್ಯದಲ್ಲಿ ಸೂರ್ಯನು ಎಂದೂ ಅಸ್ತಮಿಸುವುದಿಲ್ಲ ಎಂದು ಗರುವ ತಳೆದವರು. ವಾತವನ್ನು ಬೀಜವೆಂದು ಬಗೆದ ಬಂಟರು. ಎಂತಲೆ `Sow the wind and reap the whirl-wind' (ಗಾಳಿಯನ್ನು ಬಿತ್ತು: ಸುಂಟರಗಾಳಿಯನ್ನು ಕೊಯ್ಲು ಮಾಡು) ಎಂಬ ನಾಣ್ಣುಡಿಯೊಂದು ಆಂಗ್ಲಭಾಷೆಯಲ್ಲಿ ಪ್ರಚಲಿತವಾಗಿದೆ.

ವಾತ-ಪಿತ್ತ-ಕಫ ಎಂಬ ದೇಹದೊಳಗಿನ ತ್ರಿಧಾತುಗಳ ವ್ಯತ್ಯಾಸದಿಂದ ವಿವಿಧ ವ್ಯಾಧಿಗಳು ತಲೆದೋರುತ್ತವೆ ಎಂಬುದು ಶಾಸ್ತ್ರ ವಿಚಾರ. ಪ್ರಾಣ ಪೋಷಕವೆನಿಸಿದ ವಾಯು ವಿಕಾರಗೊಂಡಿತೋ ಪ್ರಾಣಕ್ಕೆ ಸಂಚಕಾರ ಬಂದಂತೆಯೇ ಸೈ. ವಾತಜ್ವರ, ವಾತರಕ್ತ, ಸಂಧಿವಾತ, ಪಾರ್ಶ್ವವಾಯುವಿನಂಥ ರೋಗಗಳಿಗೆ ಎಡೆಮಾಡಿಕೊಡುತ್ತದೆ. ಶರೀರಕ್ಕೆ ಪೋಷಕವೆನಿಸಿದ ವಾಯುವೆ ಅದಕ್ಕೆ ಮಾರಕವಾಗುತ್ತದೆ. ಶರೀರಕ್ಕೆ ಪುಷ್ಟಿಯನ್ನೀಯುವ ಅನ್ನವೇ ಅತಿ ಸೇವನೆಯಿಂದ ವಿಷವಾಗಿ ಪರಿಣಮಿಸುವಂತೆ ಇದು ಕೂಡ.

'ವಾಯುರ್ವಾಽ ಅಪಾಮಾಯತ ನಂ । ಆಯತನವಾನ್ ಭವತಿ ॥' ಎಂದು ಮೊದಲಾಗಿ ತೈತ್ತಿರಿಯಾರಣ್ಯಕದ ಅರುಣ ಪ್ರಶ್ನೆಯಲ್ಲಿ ಒಳಗೊಂಡ ಮಂತ್ರವು ವಾಯು-ನೀರುಗಳ ಅನ್ಯೋನ್ಯ ಆಧಾರ ಸ್ವರೂಪವನ್ನು ವಿವರಿಸುವಂಥದು. ವಾಯುವು ನೀರಿಗೆ ಆಧಾರವೋ, ನೀರು ವಾಯುವಿಗೆ ಆಧಾರವೋ ಇದೆಲ್ಲ ಪಂಚ ಮಹಾಭೂತಗಳ ನಿರ್ಮಾಣಕ್ಕೆ ಸಂಬಂಧಿಸಿದುದು. ಏನಿದ್ದರೂ ಈ ಮಹಾ ಭೂತಗಳ ಹಿಂದಣ ಸಹಯೋಗ-ಸಹಕಾರದಂತಹ ಅತಿ ಮಹತ್ವದ ಅಂಶ ನಮಗೆಲ್ಲ ಬೋಧಪ್ರದವಾದದ್ದು. ಅದನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದಾದರೆ ಇಂದು ಮಾನವ ಕುಲವನ್ನು ಕಾಡುತ್ತಿರುವ ಹಲವಾರು ಜಟಿಲ ಸಮಸ್ಯೆಗಳು ಪರಿಹಾರವನ್ನು ಕಂಡಾವು!

ಶ್ರೀನಿವಾಸ ತೋಪಖಾನೆ

# ಆ ವೇಳೆಯಲ್ಲಿ

ಏಕೆ ಈ ಪಿಶಾಚಿಗಳ ಮಧ್ಯೆ ಬದುಕುತ್ತಿದ್ದಾನೆ ಆತ? ಅದು ಧೈರ್ಯವೇ? ಅಲ್ಲ, ಭೀರುತ್ವ. ಈ ಕಾಡಿನಲ್ಲಿ ಬದುಕಬೇಕೆ? ಬೇರೆಲ್ಲಿಗಾದರೂ ಹೋಗಿ ಅದೃಷ್ಟ ಪರೀಕ್ಷಿಸಿಕೊಳ್ಳಬಾರದೆ?

ಮೂಲ: ಸಿ.ವಿ. ಶ್ರೀರಾಮನ್
ಕನ್ನಡಕ್ಕೆ: ಡಾ. ಅಶೋಕ್‌ಕುಮಾರ್

ಆತ ಕ್ಲಾಡಿಯಸ್ ರೇಂಜ್ ಬೆಟ್ಟದ ಸಾಲುಗಳನ್ನು ನೋಡುತ್ತ ಮಲಗಿದ ನಿದ್ರಿಸದಿರಲು ಪ್ರಯತ್ನಿಸುತ್ತಾ. ನೀರು ತಂದು ಕೊಡಲು ಆಫೀಸಿನ ಅಂಗಳದಲ್ಲಿ ತೋಟ ಮಾಡಲು, ಅಂಚೆಗಳನ್ನು ಕೊಂಡು ಹೋಗಲು ಹೀಗೆ ಸೆಟ್ಲ್‌ಮೆಂಟ್‌ನ ಸರ್ಕಾರಿ ಅಧಿಕಾರಿಗಳಿಗೆ ಕೆಲವು ಕೆಲಸಗಾರರನ್ನು ಕೊಟ್ಟಿರುತ್ತಾರೆ. ಇವರಲ್ಲದೆ ಒಬ್ಬ ಆರ್ಡರ್ಲಿ ಬೇರೆ. ಆದರೂ ಈ ಬ್ಯಾರಕ್‌ನಲ್ಲಿ ತಾನೊಬ್ಬನೇ. ಎಲ್ಲರೂ ಶಿಕಾರಿಗೆ ಹೋಗಿದ್ದಾರೆ. ಬೆಳಕು ಹರಿದ ನಂತರವೇ ಅವರು ಬರುವುದು. ಈ ವೇಳೆಯಲ್ಲಿ ಬಹುಶಃ ಅವರೆಲ್ಲ ಬಿದಿರಿನ ಮೆಳೆಗಳಲ್ಲಿ ಕಾಡುಹಂದಿಯನ್ನು ಹುಡುಕುತ್ತ ಅಲೆಯುತ್ತಿರಬೇಕು. ಈ ಪ್ರದೇಶಕ್ಕೆ ಹೊಸದಾಗಿ ಬಂದಾಗ ತಾನೊಬ್ಬನೇ ಕುಳಿತಿರಲು ಹಗಲಲ್ಲೂ ಭಯಪಡುತ್ತಿದ್ದ. ಆಗ ಕಾಡು ಸಹ ಇಷ್ಟು ಬೋಳಾಗಿರಲಿಲ್ಲ. ಈ ಕಿಟಕಿಯ ಪಕ್ಕದಲ್ಲಿ ಕುಳಿತರೆ ಕ್ಲಾಡಿಯಸ್ ಬೆಟ್ಟ ಇಷ್ಟು ಚೆನ್ನಾಗಿ ಕಾಣುತ್ತಿರಲಿಲ ರಾತ್ರಿಯ ವೇಳೆ ಈ ಕಿಟಕಿ ತೆರೆಯುವುದಕ್ಕೂ ಧೈರ್ಯ ಬರುತ್ತಿರಲಿಲ ಕ್ಲಾಡಿಯಸ್ ರೇಂಜ್ ಬೆಟ್ಟಗಳು ಸಂಧಿಸುವಲ್ಲಿ ಕಾಡು ಮನುಷ್ಯರು ವಾಸಿಸು ಲೇಪಿತ ಅಂಬುಗಳೊಂದಿಗೆ ಯಾವ ನಿಮಿಷದಲ್ಲೂ ಅವರು ಗುಂಪಾಗಿ ಇಲ್ಲಿಗೆ ಬರಬಹುದು ಎಂದು ಹಳ್ಳಿಯ ಜನ ನಂಬುತ್ತಾರೆ. ಒಂದು ಬಾಣವೂ ಈವರೆಗೆ ಗುರಿತಪ್ಪಿಲ್ಲ. ಕ್ಲಾಡಿಯಸ್ ಬೆಟ್ಟದ ಸಾಲುಗಳ ಉತ್ತುಂಗದಲ್ಲಿ ಕಾಡ ದೈವಗಳು ವಾಸಿಸುತ್ತವೆ. ಭಯ ಮೂಡುವ ಸಂದರ್ಭಗಳಲ್ಲೆಲ್ಲ ಅವರ ದೈವಗಳನ್ನು ಆವಾಹಿಸುವರು; ಆಗ ಅವು ಅಗ್ನಿಲೇಪಿತ ಶರಗಳನ್ನು ಮಳೆಯ ಎಸೆಯುವುವು. ಅವು ತಾಗಿ ಹಾಯಿಹಡಗುಗಳು ಸಹ ಉರಿದು ಬೂದಿಯಾ ಭಾವನೆ ಅಲ್ಲಿ ಸಾರ್ವತ್ರಿಕವಾಗಿದೆ. ಇವೆಲ್ಲವನ್ನೂ ಕಣ್ಣಾರೆ ಕ ಅವರಾರೂ ಈಗ ಬದುಕಿಲ್ಲ. ಅವರು ಹೇಳಿದ್ದನ್ನು ಕೇಳಿದವ ಬೆಂಕಿಯ ಬಾಣಗಳು ಕತ್ತಲನ್ನು ಸೀಳಿಕೊಂಡು ಹೋಗುವುದನ್ನು ಕ ಕ್ಲಾಡಿಯಸ್ ರೇಂಜ್ ಬೆಟ್ಟದ ಸಾಲುಗಳಿಂದ ಕಾಡುಕೋಣಗಳು ಹೊರ ಬಿದ್ದು ಆ ಹಳ್ಳಿಯನ್ನು ನಾಶಗೊಳಿಸುತ್ತಿದ್ದವು. ಅದನ್ನು ನೆನೆದು ಆ ಹಳ್ಳಿ ನರಳಿನಲ್ಲಿದೆ. ಈ ಪ್ರದೇಶಕ್ಕೆ ಮೊದಲಿಗೆ ಊರ ಮನುಷ್ಯರು ಬಂದ ಒಂದು ಶತಮಾನದ ಹಿಂದೆ; ಕಾಡನ್ನು ಕಡಿದು ಹಿಡಿದುಕೊಳ್ಳುವ ಬಯಕ ಬಂದಿದ್ದರವರು. ಆಗ ಮೂವತ್ತಕ್ಕೂ ಹೆಚ್ಚು ಕುಟುಂಬಗಳು ಈ ಕೆಲಸಕ್ಕೆ ಟೊ ಕಟ್ಟಿ ನಿಂತವು. ಕಾಡಿಗೆ ಹೋದವರೆಲ್ಲ ತಮ್ಮ ಜೊತೆಗೆ ಜ್ವ ತಂದರು. ಆದರಿಂದ ತಪ್ಪಿಸಿಕೊಳ್ಳಲು ಒಬ್ಬನಿಗೂ ಸಾಧ್ಯವಾಗಲಿಲ್ಲ. ಇ ಶತಮಾನ ಕಳೆದರೂ ರಾತ್ರಿಯಲ್ಲಿ ಯಾವಾಗಲಾದರೂ ಒಂದು ಆರವ ಮೊಳಗುತ್ತದೆ ಅದು ಸಮೂಹರೋಧನವೋ ಅಥವಾ ಸಮೂಹ ಪ್ರಾರ್ಥನೆಯೋ? ಎನ್ನುವುದ ದೇವರಿಗೇ ಗೊತ್ತು.

ಒಂದು ಶತಮಾನದ ಬಳಿಕ ಈ ವನಭೂಮಿಗೆ ಪುನಃ ಮನುಷ್ಯರು ಬಂದಿದ್ದಾರೆ. ಆದರೆ ಅವರು

# ಒಬ್ಬ ಅತಿಥಿ

ಸಾಹಸಿಗರಲ್ಲ. ಅದಕ್ಕೇ ಏನೋ ಬ್ಲ್ಯಾಕ್‌ಫೀವರ್ ಕೂಡ ಅವರನ್ನು ಮುಟ್ಟಲು ಅಸಹ್ಯಪಡುತ್ತಿರುವುದು. ಬೆಳದಿಂಗಳು ಮಸುಕಾಗತೊಡಗಿದೆ. ಕ್ಲಾಡಿಯಸ್ ಬೆಟ್ಟದ ಮೇಲೆ ಮೇಘಗಳು ದಟ್ಟೈಸುತ್ತಿವೆ. ಆಕಾಶ ಕಪ್ಪಾದಾಗ ಇಡಿ ಹಳ್ಳಿಯೇ ಭಯಪಡುತ್ತದೆ. ಎಷ್ಟೋ ವೇಳೆ ಸಿಡಿಲು ತಾಗಿ ಗ್ರಾಮದ ಮರದ ಬೊಡ್ಡೆಗಳಲ್ಲಿ ಬೆಂಕಿ ಭುಗಿಲೆದ್ದು ಉರಿಯುತ್ತದೆ. ಅರಣ್ಯ ಇಲಾಖೆಯು ಕಾಡು ಕಡಿದು ಭೂಮಿ ಕೊಟ್ಟಿದ್ದರೂ ಅದರಲ್ಲಿ ಕಾಡಿನ ಅವಶೇಷಗಳಾದ ಮರಗಳು ಇನ್ನೂ ಇವೆ. ಒಂದು ಶತಮಾನದ ಹಿಂದೆಯೇ ಇಲ್ಲಿಗೆ ಬಂದ ವಲಸಿಗರು ಬೆಂಕಿ ಹಾಕಲು ಯತ್ನಿಸಿದ ಮರಗಾಡುಗಳು ಇಂದೂ ಪೂರ್ತಿಯಾಗಿ ಉರಿಯದೆ ನಿಂತಿವೆ. ಅವುಗಳ ಬೇರುಗಳು ಮಣ್ಣಾಗಲು ಇನ್ನೂ ಎಷ್ಟೋ ಕಾಲ ಬೇಕು.

ಈ ಪ್ರದೇಶಕ್ಕೆ ಕಾಲಿಟ್ಟ ದಿವಸ ಸಂಜೆಯಾಗುವಾಗ ಕಿಟಕಿ ತೆರೆದು ಹಳ್ಳಿಯೆಡೆಗೆ ನೋಡಿದಾಗ ಆತ ಬೆಚ್ಚಿಬಿದ್ದ. ಎದುರಿಗೆ ಒಂದು ಬೆಂಕಿಯ ಕಡಲು. ತಕ್ಷಣ ಕಿಟಕಿ ಮುಚ್ಚಿ ಕೊಂಡಿ ಹಾಕಿದ. ಹಲವಾರು ಭಯಾವಹ ವಿಷಯಗಳು ಹೆದರಿಸಲಾರದೆ ಹೋದಾಗ ಹಳ್ಳಿಯ ಬೆಂಕಿಯ ಕಡಲು ಸಹ ಅವನನ್ನು ಕ್ರಮೇಣ ಹೆದರಿಸಲಾರದೆ ಹೋಯಿತು. ಅಂತೆಯೇ ಕಾಡಿನ ಕಥೆಗಳನ್ನು ಕೇಳಿ ಕೇಳಿ ಭಯ ಇಲ್ಲದಾಗಿದೆ. ಕೇಳಿದ ಕಥೆಗಳು ಹಲವಾರು. ಒಂದೊಂದೂ ನಿದ್ದೆಗೆಡಿಸುವಂಥವು. ಓಂಗ್‌ಸಾನ್ ಎಂಬ ಬರ್ಮಾದವನ ಪಿಶಾಚಿಯ ಕತೆ ಅವುಗಳಲ್ಲೊಂದು.

ಆತ ಈ ಕಾಡಿಗೆ ಎಂದು ಬಂದ ಎಂಬುದಾಗಲಿ ಏಕೆ ಬಂದ ಎಂಬುದಾಗಲಿ ಯಾರಿಗೂ ತಿಳಿಯದು. ಅಪರಾಧಗೈದು ಗಡೀಪಾರು ಮಾಡಲ್ಪಟ್ಟವನೋ ಎಂಬುದೂ ತಿಳಿಯದು. ಆತ ಕಾಡು ಕಾಂಟ್ರಾಕ್ಟರ್



ಆಗಿ ಮೇಲೆ ಬಂದ. ನೂರಿನ್ನೂರು ಕೂಲಿಯಾಳುಗಳನ್ನೂ ಹತ್ತಾರು ಬೋಟ್‌ಗಳನ್ನೂ ರ‍್ಯಾಫ್ಟ್‌ಗಳನ್ನೂ ಗಳಿಸಿದ. ಧರ್ಮಿಷ್ಠನಾಗಿದ್ದರಿಂದ ಅನೇಕ ಬುದ್ಧವಿಹಾರಗಳನ್ನು ಕಟ್ಟಿಸಿದ. ಬಡವರಿಗೆ ಸಹಾಯ ಮಾಡಿದ. ಬರ್ಮಾದವರಾದ ಬಡಮಕ್ಕಳಿಗೆ ಓದಲು ಹಾಸ್ಟೆಲ್ ಕಟ್ಟಿಸಿಕೊಟ್ಟ. ಆ ದೇಶದವರು ಆತನನ್ನು ಪುಣ್ಯ ಪುರುಷನೆಂದು ಆರಾಧಿಸಿದರು. ಓಂಗ್‌ಸಾನ್ ಪ್ರಾಯಾಧಿಕ್ಯ ಬಂದು ತೀರಿಕೊಂಡ. ಕಾಡಿನಲ್ಲಿ ಆತ ಇಷ್ಟಪಟ್ಟಿದ್ದ ಜಾಗದಲ್ಲಿ ದೇಹವನ್ನು ಮಣ್ಣು ಮಾಡಿದರು. ಆತನ ಆತ್ಮವನ್ನು ಬರ್ಮಾಕ್ಕೆ ಒಯ್ಯಲು ದೈವಗಣಗಳು ಬಂದಾಗ ಆತ, 'ನನಗೆ ತಕ್ಕದ್ದು ಈ ಕಾಡೇ, ನಾನು ಬರುವುದಿಲ್ಲ, ನಾನು ಕಾಡಿನಲ್ಲೇ ಇರುತ್ತೇನೆ' ಎಂದ. ಆಗ ಅವು 'ನೀನು ಪಿಶಾಚಿಯಾಗಿ ಹೋಗು' ಎಂದು ಶಪಿಸಿದವು. ಅಂದಿನಿಂದಲೂ ಓಂಗ್‌ಸಾನ್ ಪಿಶಾಚಿಯಾಗಿ ಕಾಡುಗಳಲ್ಲಿ ಅಲೆಯುತ್ತಿದ್ದಾನಂತೆ. ಶರೀರ ಹಸಿರ ತಲೆಗೂದಲೂ ಹಸಿರುಬಣ್ಣ. ಆತ ನಿಶಾಚರನಾದ. ಬೇಟೆಗೆ ಹೋಗುವವರ ಅನೇಕರು ಅವನನ್ನು ನೋಡಿದ್ದಾರಂತೆ ಬರ್ಮಾದವರಲ್ಲದವರನ್ನು ಆತ ಒಮ್ಮೆಯೂ ಹೆದರಿಸಿದ್ದಿಲ್ಲ. ಕೆಲವು ಸಲ ಓಂಗ್‌ಸಾನ್ ನಿಚ್ಚಳವಾದ ದಾರಿಯನ್ನೂ ತೋರಿಸಿಕೊಡುವನು. ಈ ಕಥೆ ಕೇಳಿದ ಮೊದಲ ದಿನಗಳಲ್ಲಿ ಹಸಿರೆಲೆಗಳನ್ನು ನೋಡಿದರೆ ಓಂಗ್‌ಸಾನ್‌ನ ಹಸಿರು ತಲೆಮುಡಿಯನ್ನೇ ಕಂಡಂತಾಗುತ್ತಿತ್ತು. ಹಾಗಾಗಿ ಮತ್ತೆ ನೋಡಲು ಹಳ್ಳಿಗಳಲ್ಲೂ ದಟ್ಟ ಕಾಡುಗಳಲ್ಲೂ ಕಾಲಿಡುವಾಗ ಓಂಗ್‌ಸಾನ್ ಪಿ ಹಸಿರು ರಂಗಿನ ತಲೆಗೂದಲುಳ್ಳ ಪಿಶಾಚಿ!

ಏಕೆ ಈ ಪಿಶಾಚಿಗಳ ಮಧ್ಯೆ ಬದುಕುತ್ತಿದ್ದಾನೆ. ಆತ? ಅದು ಧೈರ್ಯವೇ? ಅಲ್ಲ, ಭೀರುತ್ವ. ಈ ಕಾಡಿನಲ್ಲಿ ಬದುಕಬೇಕೇ? ಬೇರೆ ಎಲ್ಲಿಗಾದರೂ ಹೋಗಿ ಅದೃಷ್ಟ ಪರೀಕ್ಷಿಸಿಕೊಳ್ಳಬಾರದೇ? ಆದರೆ ಇಂತಹದೊಂದು ಕೆಲಸಕ್ಕೆ ಇನ್ನೊಂದು ಪರೀಕ್ಷೆಗೆ ಆತ ಸಿದ್ಧನಿಲ್ಲ, ಇಷ್ಟಕ್ಕೂ ಈ ಕೆಲಸದಲ್ಲಿ ಏನಿದೆ ಅಭಾವ? ಕಾಡು ಎಂದು ತಾನೇ? ಕಾಡೇ ತನ್ನ ಜೀವಸ್ಥಳ.... ತನಗೆ ಅದು ಸಾಕು ಎಂದು ಹೇಳುವ ಬಯಕೆಯನ್ನು ತೆರೆದು ಹೇಳಕೂಡದೇ? ಅದೇ ತನ್ನ ಹೇಡಿತನ. ಚಿಂತೆಗಳು ಹೋಗಿ ತಲುಪುವುದು ತುರಿಸುತ್ತಿರುವ ಎವೆಗಳಲ್ಲಿ ಕಣ್ಣೀರನ್ನೂರೆಸುವಾಗ ಮಾತ್ರ ಕಾಡಿನ ಬಗೆಗಿರುವ ಭಯ ಅಡಗುತ್ತದೆ. ಭಯವನ್ನು ಎದುರಿಸಿ ನಿಲ್ಲುವ ಶಕ್ತಿ ಗಳಿಸಲಿಲ್ಲ. ಹೊಂದಿಕೊಳ್ಳಲು ಇಂದು ಸಾಧ್ಯವಾಗಿದೆ. ಕ್ಲಾಡಿಯಸ್. ಬೆಟ್ಟಗಳ ಸಾಲಿಗೆ ಹೋಗಿದ್ದ ಮೇಘಮೇದಸ್ಸ ಮರಳಿ ಬರುತ್ತಿದೆ. ಗುರುಗುಟ್ಟುತ್ತ, ನರಳುತ್ತ ಕಾಲಕಳೆಯದೆ ಮಳೆ ಸುರಿಯಿತು. ಮೇಲ್ಛಾವಣಿಯ ಟಿನ್‌ಷೀಟ್‌ನ ಮೇಲೆ ಆಲಿಕಲ್ಲುಗಳಂತೆ ಹನಿ ಉದುರಿದವು. ಮಳೆಕಾಡಿನ ಮಳೆ. ಆಲಿಕಲ್ಲುಗಳು ಕರಗಿದ ನಂತರವೇ ನಿಂತಿತು. ಆಕಾಶ ಪೂರ್ತಿ ತಿಳಿಯಾಯಿತು. ಈಗ ದೃಶ್ಯ ನಿಚ್ತಿಳಿಯಾದ ಹಳ್ಳಿಯ ಕಡೆ ನೋಡುತ್ತ ಕುಳಿತ.

ಒಂದು ಪಕ್ಷಿ ರೆಕ್ಕೆ ಬಡಿಯುತ್ತ ಹಾರಿದಾಗ ಗಾಳಿ ಇಕ್ಕೆಲಕ್ಕೂ ಹೆದರಿ ಸರಿಯಿತು. ದೊಡ್ಡ ಪಕ್ಷಿ, ಪ್ರತಿಯೊಂದು ಚಲನೆಯನ್ನೂ ಅಂತರಿಕ್ಷ ಸ್ವೀಕರಿಸಿತು. ಗಾಳಿಯನ್ನು ಹಿಂದೆ ತಳ್ಳಿ ಪಕ್ಷಿ ಹಾರುತ್ತಾ ದೂರಾಗುತ್ತಿದೆ. ಅದು ಸ್ವಲ್ಪ ದೂರ ಹೋಗಿ ಆರ್ದ್ರವಾಗಿ ಕೂಗಿ ಕರೆಯಿತು. ಉತ್ತರವನ್ನು ಕಾಯ್ದು ಮತ್ತೆ ಒಂದು ಸಲ ದೀರ್ಘವಾಗಿ ಕೂಗಿ, ಜೊತೆಗೆ ಬರಲು ಒಪ್ಪದ ಜೋಡಿಗೆ ವಿದಾಯ ಹೇಳಿತು. ಇಲ್ಲಿ ಕುಳಿತರೆ ಎಲ್ಲ ಶಬ್ದಗಳೂ ಆತನಿಗೆ ಹೀಗೆಯೇ ಕೇಳಿಸುತ್ತವೆ. 'ಈ ಕಾಡಿನಿಂದ ಪಾರಾಗಬೇಕು ಇಬ್ಬರೂ, ಜೊತೆಗೆ ಬರುವುದಿಲ್ಲವೇ?' ಎಂದಂತಾಯಿತು. ಅದೀಗ ಮರದ ಕೊನೆಯನ್ನೇರಿ ಕುಳಿತಿರಬಹುದು. ಅಷ್ಟು ವೇಳೆಯ ನಂತರ ಆ ಪಕ್ಷಿ ಮತ್ತೆ ವಿದಾಯದ ನುಡಿಯನ್ನು ಪಠಿಸಿತ್ತು. ಮತ್ತೆ ಒಮ್ಮೆಯೂ ಆ ಧ್ವನಿ ಕೇಳಿಸಲಿಲ್ಲ.

ಮಳೆ ನಿಂತಾಗ ಬೇರೆಲ್ಲ ಶಬ್ದಗಳೂ ಎಚ್ಚರವಾದವು. ಹುಳಹುಪ್ಪಟೆಗಳು ಎಚ್ಚೆತ್ತು ದನಿಗೈದವು. ಹಾವಿನ ಬಾಯೊಳ ಹೋಗುತ್ತಿದ್ದ ಕಪ್ಪೆಗಳು ಪಾರಾಗಲಿಲ್ಲ, ಆ ಸತ್ಯವನ್ನು ಜಗತ್ತಿಗೆ ತಿಳಿಸಲೆಂಬಂತೆ ಶಕ್ತಿಮೀರಿ ದನಿಯೆತ್ತಿದ್ದವು. ಪ್ರತಿಭಟನೆಯಾಗಲಿ ರೋಧನವಾಗಲಿ ಅಲ್ಲದಂಥ ಬೇರೊಂದು ಬಗೆಯ ಸದ್ದು.

ಇವೆಲ್ಲವನ್ನೂ ಇಲ್ಲವಾಗಿಸುತ್ತ ಇನ್ನೊಂದು ಶಬ್ದ ಉರುಳಿಬಂದಿತು. ರೈಲು ಹಳಿಗಳಲ್ಲಿ ಟ್ರಕ್ ಉರುಳುವ ಶಬ್ದ. ಕಾಡಿನಿಂದ ನಾಟಾಗಳನ್ನು ತರಲು ಲೋಕೋ ಎಂಬ ಸಣ್ಣ ರೈಲುಬಂಡಿಗೋಸ್ಕರವಿ

ರುವ ರೈಲು ಹಳಿಗಳು. ಅದಕ್ಕೆ ಜೋಡಿಸುವ ತೆರೆದ ಸಣ್ಣ ಕಂಪಾರ್ಟ್‌ಮೆಂಟ್‌ಗೆ ಟ್ರಕ್ ಎನ್ನುತ್ತಾರೆ. ಒಂದು ಟ್ರಕ್ಕನ್ನು ರೈಲಿನ ಮೇಲೆ ಉರುಳಿಸುವ ಸದ್ದು. ಅರಣ್ಯ ಇಲಾಖೆಯ ಅಧಿಕಾರಿಗಳು ಟ್ರಕ್ಕನ್ನು ವ್ಯಾಪಾರಿಗಳಿಗೆ ಕೊಡುತ್ತಾರೆ. ರಾತ್ರಿಯಲ್ಲಿ ಮಾತ್ರ. ಬೋಟ್ ಜೆಟ್ಟಿಯಲ್ಲಿ ಇಳಿಸಿಟ್ಟ ಸಾಮಾನುಗಳನ್ನು ಟ್ರಕ್‌ನಲ್ಲಿ ಹೇರಿಕೊಂಡು ಮೈಲುಗಳಾಚೆ ಇರುವ ತಮ್ಮ ಅಂಗಡಿಗಳಿಗೆ ಅವರು ತಳ್ಳಿಕೊಂಡು ಹೋಗುವರು. ಇದುವರೆಗೂ ಈ ಕಾಡಿನ ಯಾವ ಪಿಶಾಚಿಯೂ ಟ್ರಕ್ಕನ್ನು ಕೆಣಕಿಲ್ಲ. ಏಕೆಂದರೆ, ಟ್ರಕ್‌ಗಳು ಕಬ್ಬಿಣದವಾಗಿದ್ದವು. ತಳ್ಳುವವರ ಮಾಡಲ್ಪಟ್ಟವರೇ:



"ನನ್ನ 'ವರದಕ್ಷಿಣೆ ವಿರೋಧಿ ನೀತಿ' ಯಿಂದ ಉಳಿದವರಿಗೆ ಪ್ರಯೋಜನ ಆಯಿತೋ ಇಲ್ಲವೋ ಗೊತ್ತಿಲ್ಲ. ನನಗೆ ಮಾತ್ರ ವಿವಾಹ ಯೋಗ ಕೂಡಿ ಬರಲಿಲ್ಲ."

ಟ್ರಕ್‌ನ ಶಬ್ದ ಸಮೀಪಿಸುತ್ತಿದೆ, ಜೆಟ್ಟಿಯಿಂದಲ್ಲ; ಎದುರು ದಿಕ್ಕಿನಿಂದ. ಆತನ ಬ್ಯಾರಕ್‌ನ ಹತ್ತಿರ ಬಂದಾಗ ಶಬ್ದ ಕಡಿಮೆಯಾಗುತ್ತದೆ., ಬಳಿಕ ನಿಲ್ಲುತ್ತದೆ.

ಕಬ್ಬಿಣದ ಮೇಲೆ ಕಬ್ಬಿಣ ಉರುಳುವ ಶಬ್ದ ನಿಂತಿತು. ಬಳಿಕ ಮನುಷ್ಯರ ಸದ್ದು.

"ಸಾರ್, ನಾವು ಜಿಂಕಾನಾಳಾದಿಂದ ಬರುತ್ತಿದ್ದೇವೆ. ಫಾರೆಸ್ಟ್ ಕೂಲಿಯಾಳುಗಳು, ಸಾರ್, ಒಮ್ಮೆ ಬಾಗಿಲು ತೆರೆಯಿರಿ..."

ಆತ ಹಗ್ಗದ ಮಂಚದ ಅಡಿಗೆ ಕೈ ಚಾಚಿ ತಂತಿಲಾಂದ್ರವನ್ನು ತೆಗೆದು ಬತ್ತಿ ಉದ್ದವಾಗಿಸಿದ. ಮೇಲೆದ್ದು ನಿಂತು, ಲುಂಗಿಯನ್ನು ಸರಿಯಾಗಿ ಉಟ್ಟು ಬಿಗಿದುಕೊಂಡು ಬಾಗಿಲು ತೆರೆದ. ಮೇಜಿನ ಮೇಲೆ ಉರಿಯುತ್ತಿದ್ದ ತಂತಿಯ ಲಾಂದ್ರಕ್ಕೆ ಎದುರಾಗಿದ್ದುದರಿಂದ ಇಬ್ಬರು ವರಾಂಡದಲ್ಲಿ ನಿಂತಿರುವುದು ಸರಿಯಾಗಿ ಕಾಣಿಸುತ್ತಿತ್ತು. ಇಬ್ಬರೂ ಒಟ್ಟಿಗೆ ಮುಂಡಾಸು ಬಿಚ್ಚಿ ಸಲಾಮ್ ಮಾಡಿದರು. ನೋಡಿದಾಕ್ಷಣ ಗೊತ್ತಾಯಿತು. ರಾಂಚಿಯವರು, ಫಾರೆಸ್ಟ್ ಮರ ಕಡಿವ ಕೂಲಿಗಾರರು; ಬಿಹಾರಿನ ಗಿರಿವರ್ಗದವರು ಎಂದು.

"ಸಾರ್, ಸಾರ್, ನಾವು ಮಳೇಲಿ ನೆನೆದು ಒದ್ದೆಯಾಗಿ ಹೋಗಿದ್ದೇವೆ. ಸ್ವಲ್ಪ ಹೊತ್ತು ಇಲ್ಲಿರಲು ಅನುಮತಿ ಕೊಡಿ. ನಾವು 'ರಂಗಂ'ಗೆ ಹೋಗುತ್ತಿದ್ದೇವೆ... ತಮ್ಮನ್ನು ಕಂಡು ಒಂದು ವಿಷಯ ಹೇಳಲು ಬಂದೆವು".

ಅವರ ಬನಿಯನ್‌ಗಳು ತೊಯ್ದು ಮೈಗೆ ಅಂಟಿಕೊಂಡಿವೆ. ಮಳೆಮಾತ್ರವಲ್ಲ ತೊಯ್ದಿರುವುದು, ಬೆವರು ಕೂಡ. ಉಪ್ಪಾಗಿ ಕರಗಿದ ಬೆವರಿನ ಕೊರೆಯುವ ಗಂಧ. ಇಪ್ಪತ್ತಕ್ಕೂ ಹೆಚ್ಚು ಮೈಲಿಗಳು ಟ್ರಕ್ ಉರುಳಿಸಿದುದರ ಗಂಧ. ಮಾಂಸಖಂಡಗಳು ಸಹ ಸಡಿಲಾಗಿ ಜೋತಿವೆ, ಹರೆಯವನ್ನು ಮರೆತು.

"ಒಳಗೆ ಬಂದು ಕುಳಿತುಕೊಳ್ಳಿ...."

ಆತ ಬ್ಯಾರಕ್‌ನ ತನ್ನ ಕೋಣೆಗೆ ಹೊರಟಾಗ ಅವರಿಬ್ಬರೂ ಸಲಾಮ್ ಮಾಡಿದರು. ಕತ್ತಿನಲ್ಲಿ ಗಂಡೆಯಿರುವ ವ್ಯಕ್ತಿ ಹೇಳಿದ,

"ನಮ್ಮ ಜೊತೆಗಾರನನ್ನು ಆ ಟ್ರಕ್‌ನಲ್ಲಿ ಮಲಗಿಸಿದ್ದೇವೆ. ಅವನನ್ನೂ ಇಲ್ಲಿ ತಂದು ಮಲಗಿಸೋಣವೇ ಸಾರ್..."

"ಆತನಿಗೇನು ಕಾಯಿಲೆ?"

"ಅಲ್ಲ ಸಾರ್, ಸತ್ತವನು."

"ಕಾಡಿನ ಜ್ವರ ಹಿಡಿದು ಸತ್ತದ್ದೇ?"

"ಅಲ್ಲ ಸಾರ್."

"ಕಾಮಾಲೆ ರೋಗ?"

"ಅಲ್ಲ ಸಾರ್."

"ಮರ ಬಿದ್ದು ಸತ್ತದ್ದೇ?"

ಬಹಳ ಹೊತ್ತು ನಿಂತು ಮೀನಮೇಷ ಎಣಿಸಿದ ನಂತರ ಅವರು ಹೇಳಿದರು,

"ನೇಣು ಹಾಕಿಕೊಂಡು ಸತ್ತ."

ಈ ಮಾತುಗಳನ್ನು ಕೇಳಿ ಆತ ಜೋಮುಗಟ್ಟಿ ನಿಂತ. ಈ ರಾತ್ರಿಯ ಹೊತ್ತು ನೇಣುಹಾಕಿಕೊಂಡು

ಸತ್ತವನ ಶವವನ್ನು ನೋಡಲು ಅವನಿಗೆ ಬಲವಿರಲಿಲ್ಲ.

ತಟ್ಟನೆ ಮಳೆ ಸುರಿಯಿತು. ಬಲು ದೊಡ್ಡ ಹನಿಗಳು. ಟ್ರಕ್‌ಗೆ ಬಡಿದು ಚೆದುರುತ್ತಿವೆ. ಮೃತದೇಹವಾದರೂ ಮಳೆಯಲ್ಲಿ ನೆನೆಯುವುದನ್ನು ನೋಡಲು ಆತನಿಗೆ ಭಯವೆನಿಸಿತು.

"ಇಲ್ಲಿ ತಂದು ಮಲಗಿಸಿ."

ಬ್ಯಾರಕ್‌ನ ಕೊನೆಯ ಕೋಣೆಯತ್ತ ಆತ ಬೆರಳು ಮಾಡಿ ತೋರಿದ.

ಅವರು ಮೃತದೇಹವನ್ನು ತೆಗೆದುಕೊಂಡು ವರಾಂಡಕ್ಕೆ ಬಂದಾಗ ಆತ ತನಗರಿಯದಂತೆ ಒಳಕ್ಕೆ ಸೇರಿಕೊಂಡ. ಅವರು ಕೊನೆಯ ಕೋಣೆಗೆ ಹೋದರು. ಶವವನ್ನು ಕೆಳಗಿರಿಸಿ ಕೋಣೆಯೊಳಕ್ಕೆ ಟಾರ್ಚ್ ಬೆಳಗಿಸಿದರು. ಬಳಿಕ ಅದನ್ನು ಹೊತ್ತುಕೊಂಡು ಆತನ ಬಳಿಗೆ ಬಂದರು.

"ಆ ಕೋಣೆಯ ತುಂಬ ಹಾವುಗಳಿವೆ."

"ಹಾವು ಏನೂ ಮಾಡೋದಿಲ್ಲ. ವಿಷವಿಲ್ಲದ ಹಾವುಗಳಲ್ಲವೇ? ಬೆದರಿಸಿ ಓಡಿಸಿರಿ..."

"ಬೆದರಿಸಿ ಓಡಿಸಿದರೂ ಹೋಗಲ್ಲ. ಅಷ್ಟು ಜಾಸ್ತಿ ಬಿದ್ದುಕೊಂಡಿವೆ..."

ಆ ಕೋಣೆ ತುಂಬ ಹಾವುಗಳಿವೆ, ನೆಲದಿಂದ ಹಿಡಿದು ಛಾವಣಿಯವರೆಗೆ ಎನ್ನುವುದು ಆತನಿಗೂ ಗೊತ್ತು. ಅವು ಸೆಣಸಾಡುತ್ತವೆ. ಆ ಶಬ್ದ ಆತನನ್ನು ನಿದ್ದೆ ಮಾಡಲು ಬಿಡುವುದಿಲ್ಲ. ಮಳೆಗಾಲದಲ್ಲಿ ಅದೇ ಹಾವುಗಳ ಠಿಕಾಣ.

"ಇಲ್ಲಿ ಮಲಗಿಸೋಣವೇ ಸಾರ್?..."

ಹೆಣವಾದರೂ ಅದರ ಮೇಲೆ ಹಾವುಗಳು ಹರಿದಾಡುವುದನ್ನು ಕಾಣುವುದು ಆತನಿಗೂ ಭಯ ತರಿಸಿತು. ಆತ ತನಗರಿಯದೆ ತಲೆಯಾಡಿಸಿದ. ಅವರು ಮೃತದೇಹವನ್ನು ಆತನ ಕೋಣೆಯ ಪಕ್ಕ ಮಲಗಿಸಿದರು. ಆತ ನಡುಗುವ ಕೈಗಳಿಂದ ಪೆಟ್ರೋಮ್ಯಾಕ್ಸ್ ಹೊತ್ತಿಸಿದ. ಪೆಟ್ರೋಮ್ಯಾಕ್ಸ್ ಬೆಳಗಿದಂತೆ ಮೃತದೇಹದ ಮುಖ ಸ್ಪಷ್ಟವಾಯಿತು.

ಇಪ್ಪತ್ತೈದು ವರ್ಷಕ್ಕಿಂತ ಹೆಚ್ಚು ಪ್ರಾಯವಿಲ್ಲ. ಬಿಳಿ ಬಣ್ಣ, ರಾಂಚಿ ಗಿರಿವರ್ಗದ ಜನರಲ್ಲಿ ಬಿಳಿಬಣ್ಣವಿರುವವರು ಬಹಳ ಕಡಿಮೆ. ಜೊತೆಗೆ ಬಂದವರು ಕಪ್ಪು ಬಣ್ಣದವರು.

"ಕಾಡಿನ ಕೆಲಸಕ್ಕೆ ಒಂದು ವರ್ಷದ ಕರಾರಿನ ಮೇಲೆ ಬಂದಿದ್ದೆವು. ಒಂಭತ್ತು ತಿಂಗಳು ಕಳೆಯಿತು. ಮೂರು ತಿಂಗಳು ಕಳೆದರೆ ಊರಿಗೆ ವಾಪಸು ಹೋಗಬಹುದು".

"ಸಾಯಲು ಏನು ಕಾರಣ?" ಆತ ಮೃತದೇಹದ ಮುಖವನ್ನೇ ನೋಡುತ್ತ ಕೇಳಿದ.

"ಗೊತ್ತಿಲ್ಲ ಸಾರ್."

"ಏನಾದರೂ ಬರೆದಿಟ್ಟಿದ್ದನೇ?"

"ಏನು ಬರೆದಿಡುವುದು ಸಾರ್? ನಮಗೆಲ್ಲ ಓದು ಬರಹ ಬರುತ್ತಾ?..."

ಆತ ಪುನಃ ಶವದ ಮುಖವನ್ನೇ ನೋಡುತ್ತಿದ್ದ. ಮುಖದಲ್ಲಿ ಈ ಮಾತುಗಳನ್ನೆಲ್ಲ ಆಲಿಸುತ್ತಿರುವ ಭಾವ.

ಜೊತೆಗೆ ಬಂದಿದ್ದವರಲ್ಲಿ ಒಬ್ಬಾತ ಎದ್ದು ಟ್ರಕ್‌ನ ಬಳಿ ಹೋಗಿ, ಒಂದು ಡಾಲ್ಡಾ ಟಿನ್‌ನೊಂದಿಗೆ ವಾಪಸು ಬಂದ. ಬಂದವನೆ ಹೆಗಲಲ್ಲಿದ್ದ ಚೀಲದಿಂದ ಒಂದು ಅಲ್ಯುಮಿನಿಯಂ ಲೋಟ ಹೊರತೆಗೆದ.

"ಒಳ್ಳೇ ಒಂದನೆ ದರ್ಜೆ ಹಡಿಯ ಸಾರ್. ಎರಡು ಲೋಟ ಕುಡೀತೀರಾ?"

"ಬೇಡ."

ಹಡಿಯ ಎಂಬ ಬಿಹಾರೀ ಮದ್ಯದ ಗಂಧ ಅಲ್ಲೆಲ್ಲ ಹಬ್ಬಿತು. ಅವರು ಲೋಟದ ಮೇಲೆ ಲೋಟ ಕುಡಿದರು. ಆಗಲೂ ಆತ ಮೃತದೇಹವನ್ನೇ ನೋಡುತ್ತ ಕುಳಿತ.

"ಇವನಿಗೆ ಯಾರಿದ್ದಾರೆ?"

"ಗೊತ್ತಿಲ್ಲ ಸಾರ್."

"ಹಾಗಾದರೆ ನೀವು ಇವನ ಊರಿನವರಲ್ಲವೇ?"

"ನಮ್ಮ ಹಳ್ಳಿಗಳ ನಡುವೆ ಎರಡು ಹಗಲು ನಡೆಯಬೇಕಾದಷ್ಟು ದೂರವಿದೆ..."

"ಇವನ ಊರಿಗೆ ವಿಷಯ ತಿಳಿಸಿದ್ದೀರಾ..."

"ಗೊತ್ತಿಲ್ಲ ಸಾರ್, ರೇಂಜರ್ ಸಾಹೇಬ್ ತಿಳಿಸಬಹುದು".

ಆತ ಅವರ ನಿಸ್ಸಂಗತೆಯ ಬಗ್ಗೆ ಮಾತ್ರ ಯೋಚಿಸಿದ.

"ಸಾರ್, ನೀವು ಹೋಗಿ ಮಲಕ್ಕೊಳ್ಳಿ. ಪೆಟ್ರೋಮ್ಯಾಕ್ಸ್ ಆರಿಸಿಬಿಡಿ. ಮಳೆ ಕಮ್ಮಿ ಆದರೆ ನಾವು ಹೋಗ್ತೀವಿ..."

ಆತ ಮೇಜಿನ ಡ್ರಾಯರ್ ಎಳೆದು ವಾಚ್ ತೆಗೆದು ವೇಳೆ ನೋಡಿದ. ಅವರೂ ಸಮಯ ಕೇಳಿದರು.

"ಎರಡು ಗಂಟೆ."

"ಸಾರ್, ಮಲಕ್ಕೊಳ್ಳಿ..."

ಆತನಿಗೆ ಮೃತದೇಹದ ಬಗ್ಗೆಯೂ ಅವರ ಬಗ್ಗೆಯೂ ಅನುಕಂಪ ಮೂಡತೊಡಗಿತ್ತು.

"ನೀವು ರಾತ್ರಿಯೇ ಯಾಕೆ ಬಂದಿರಿ?"

ಅವರಲ್ಲಿ ಒಬ್ಬ ಹೇಳತೊಡಗಿದ. ಇನ್ನೊಬ್ಬ ತಲೆಯಾಡಿಸಿ ಜೊತೆಗಾರ ಹೇಳುವುದನ್ನು ಒಪ್ಪಿದ. "ನಿನ್ನೆ ಸಬ್‌ಇನ್‌ಸ್ಪೆಕ್ಟರ್ ಮತ್ತು ಇಬ್ಬರು ಪೊಲೀಸರು ಜಂಕ್ಷನಾಲಾಕ್ಕೆ ಬಂದಿದ್ದರು. ಹೆಣವನ್ನು ರಂಗಂ ಪೊಲೀಸ್ ಸ್ಟೇಷನ್‌ಗೆ ತರಬೇಕು ಎಂದವರು ಹೇಳಿದರು. ರೇಂಜರ್ ಸಾಬ್ ಈ ಟ್ರಕ್ಕನ್ನು ಕೊಟ್ಟರು. ಟ್ರಕ್ಕನ್ನು ನಾಳೆ ಬೆಳಗ್ಗೆ ಲೋಕೋ ಹೊರಡುವುದಕ್ಕೆ ಜಂಕಾನಾಳಾಕ್ಕೆ ತಲುಪಿಸಬೇಕು."

ಆರಂಭದ ದಿನಗಳಲ್ಲಿ ಇಂತಹ ಅಸ್ವಾಭಾವಿಕ ಮರಣ ವರದಿ ಮಾಡಲ್ಪಟ್ಟರೆ ಆತನೇ ಅಲ್ಲಿ ಮೊದಲು ತಲುಪುತ್ತಿದ್ದವನು. ಈಗ ಹಳ್ಳಿಗಳಲ್ಲಿ ಚೌಕಿದಾರರನ್ನು ಸರ್ಕಾರ ನೇಮಿಸಿದೆ.

ಆದರೂ ಆತ ಕೇಳಿದ,

"ಸಬ್ ಇನ್ಸ್‌ಪೆಕ್ಟರ್ ಏನಾದರೂ ನನಗೆ ಹೇಳಲು ಹೇಳಿಕಳಿಸಿದ್ದಾರಾ?"

"ಹೌದು ಸಾರ್, ನಾವು ಮರೆತವು. ರಂಗಂ ಚೌಕಿದಾರ್‌ಗೆ ಒಂದು ಪತ್ರ ಕೊಡುವಂತೆ ಹೇಳಿದಾರೆ ಸಾರ್. "ಆತ ಮೇಜಿನ ಮೇಲಿನ ಪ್ಯಾಡ್ ತೆಗೆದ. ಬರೆಯ ತೊಡಗಿದಾಗ ಕೈ ಬಹಳ ನಡುಗುತ್ತಿತ್ತು. ಬರೆದು ಮುಗಿಸಲು ಕಷ್ಟಪಟ್ಟ ಇನ್‌ಕ್ವೆಸ್ಟ್ ವೇಳೆಯಲ್ಲಿ ಜೊತೆಗೆ ನಿಲ್ಲಬೇಕು. ಒಂದು ಕಾಪಿ ತೆಗೆದುಕೊಳ್ಳಬೇಕು.

ಪತ್ರವನ್ನಾತ ಅವರಿಗೊಪ್ಪಿಸುತ್ತಾ, "ನೆನೆಸಬೇಡಿ" ಎಂದು ಹೇಳಿದ.

ಅವರಲ್ಲೊಬ್ಬ ಪತ್ರವನ್ನು ಒಂದು ಹೊಗೆಸೊಪ್ಪು ಡಬ್ಬದಲ್ಲಿ ತುರುಕಿರಿಸಿದ.

ಆತ ಹೆಣದ ಮುಖದೆಡೆಗೆ ನೋಡಿದ. ಈಗ ಭಯ ಅಷ್ಟು ಇಲ್ಲ. ಇರುವಂಥದು ಬರಿ ಸಂಶಯ ಮಾತ್ರ. ಈ ಯುವಕ ಯಾಕೆ ಜೀವನ ಕೊನೆಗೊಳಿಸಿದ? ಚಿಂತೆಗಳು ತನ್ನನ್ನು ತಟ್ಟಿ ಎಬ್ಬಿಸದಿರಲು ಆತ ಹೆಣಗಿ ನಿಯಂತ್ರಿಸಿದ.

"ನೀವು ಬೆಳಗಾದ ಮೇಲೆ ಹೋದರೆ ಸಾಲದೆ?"

ಹೆಣದೊಂದಿಗೆ ಇದ್ದರಾದರೂ ಅವರ ಸಾನ್ನಿಧ್ಯ ಆಗ ಆತನಿಗೆ ಅಗತ್ಯ ಎನಿಸಿತು.

"ಇಲ್ಲ, ಸಾರ್ ಬೆಳಗಾದರೆ ಇನ್ನೊಂದು ಅಪಾಯವಿದೆ. ಹಳ್ಳಿಗರು ನಮ್ಮನ್ನು ಅಡ್ಡಗಟ್ಟಿ ಹಗ್ಗ ಕೊಳ್ಳೆ ಹೊಡೆದುಕೊಂಡು ಹೋಗುತ್ತಾರೆ. ಹಗ್ಗವೇನಾದರೂ ಕಳೆದುಹೋದರೆ ನಮ್ಮ ಮೇಲೆ ಕೇಸ್ ಹಾಕುತ್ತೇನೆ ಅಂತ ಸಬ್‌ಇನ್‌ಸ್ಪೆಕ್ಟರ್ ಹೇಳಿದ್ದಾರೆ".

ಅವರು ಹೇಳುವುದೂ ನಿಜವೆ. ಹಳ್ಳಿಗಳ ಪಾಲಿಗೆ ನೇಣು ಹಾಕಿಕೊಂಡ ಹಗ್ಗವೊಂದು ವಿಚಿತ್ರವಾದ ಔಷಧ. ಒಂದು ತುಂಡು ಕತ್ತರಿಸಿ ತಲೆದಿಂಬಿನಡಿಯಲ್ಲಿ ಇಟ್ಟುಕೊಂಡರೆ ಅಸ್ತಮಾ ಆ ಕ್ಷಣವೇ ಇಲ್ಲದಾಗುತ್ತದೆಂಬ ದೃಢವಾದ ನಂಬಿಕೆ ಹಳ್ಳಿಗರಲ್ಲಿ ಇದೆ. ಯಾರಾದರೂ ನೇಣುಹಾಕಿಕೊಂಡು ಸತ್ತರೆಂದು ಗೊತ್ತಾದರೆ ಸಾಕು, ಆ ಹಗ್ಗವನ್ನವರು ಕೊಳ್ಳೆ ಹೊಡೆಯುವುದು ಖಂಡಿತ.

ಅವರು ಹೆಣವನ್ನು ಮೆಲ್ಲಗೆ ಹೊತ್ತುಕೊಂಡು ಟ್ರಕ್‌ನೆಡೆಗೆ ನಡೆದರು. ಆತನಿಗೆ ಬಹಳ ಭಯವೆನಿಸಿತು. ರಾತ್ರಿ ಕೊನೆಗೊಳ್ಳಲು ಇನ್ನೂ ಬಹಳ ಕಾಲಬೇಕು.

ದೇಹವಿಡೀ ಹಬ್ಬಿಕೊಳ್ಳುತ್ತಿರುವ ನಡುಕದೊಂದಿಗೆ ಆತ ಒಳಕ್ಕೆ ನಡೆದ.

---

"ಗ್ರಂಥ ರಚನೆಗೆ ೨೦ ವರ್ಷ"

'ದಿ ಡಿಕ್ಲಾಯ್ನ್ ಆಂಡ್ ಫಾಲ್ ಆಫ್ ದಿ ರೋಮನ್ ಎಂಪೈರ್,' ಎಂಬ ಗ್ರಂಥವನ್ನು ಬರೆಯಲು ಗಿಬ್ಬನ್ನರಿಗೆ ೨೦ ವರ್ಷ ಬೇಕಾಯಿತು.

– ವಿಜಯ ಸಿ. ಪೂಜಾರಿ

---




- 'ಪ್ರಿಯತಮ'

ದನ ಒಂದು ಉಪಯುಕ್ತ ಪ್ರಾಣಿ. ಅದರ ಹಾಲು ಸಸ್ಯಾಹಾರಿಗಳಿಗೆ ಮಾತ್ರವಲ್ಲದೆ ಮಾಂಸಾಹಾರಿಗಳಿಗೂ ಬೇಕು. ದನಗಳಲ್ಲಿ ಈ ಹಾಲಿನ ಪ್ರಮಾಣವನ್ನು ಹೇಗೆ ಹೆಚ್ಚಿಸಬಹುದು ಎಂಬ ಬಗ್ಗೆ ಸಂಶೋಧನೆ ನಡೆದು ಅದಕ್ಕಾಗಿ ಒಂದು ಚುಚ್ಚುಮದ್ದನ್ನೂ ಕಂಡುಹಿಡಿಯಲಾಯಿತು. ಅಂತೆಯೆ ಅಲ್ಲಿ ಮಾತ್ರವಲ್ಲ, ಇತರ ಯೋರೋಪಿಯನ್ ದೇಶಗಳಲ್ಲೂ ಗೋಮಾಂಸವನ್ನು ತಿನ್ನುವವರು ಸಾಕಷ್ಟು ಸಂಖ್ಯೆಯಲ್ಲಿರುವುದರಿಂದ ಅದಕ್ಕೆ ತುಂಬಾ ಬೇಡಿಕೆಯಿದೆ. ಈ ದನಗಳಲ್ಲಿ ಮಾಂಸವನ್ನು ಹೇಗೆ ಹೆಚ್ಚಿಸಬಹುದು? ಎಂಬ ಬಗೆಗೂ ಇಂಗ್ಲೆಂಡಿನಲ್ಲಿ ಸಂಶೋಧನೆ ನಡೆದು ಸಸ್ಯಾಹಾರಿಗಳಾಗಿದ್ದ ಅಲ್ಲಿನ ದನಗಳನ್ನು ಮಾಂಸಾಹಾರಿಗಳನ್ನಾಗಿ ಮಾಡಲಾಯಿತು. ಅರ್ಥಾತ್ ಆಹಾರಕ್ಕಾಗಿ ಬಳಸಲ್ಪಡುವ ಇತರ ಪ್ರಾಣಿಗಳ ತ್ಯಾಜ್ಯವಾದ ಅಂಶಗಳನ್ನು ಪುಡಿಮಾಡಿ ಅದನ್ನು ದನಗಳ ಆಹಾರದಲ್ಲಿ ಬೆರೆಸಿ ತಿನ್ನಲು ಕೊಟ್ಟಾಗ ಅವುಗಳ ದೇಹದಲ್ಲಿ ಮಾಂಸ ಎರಡುಪಟ್ಟು ಹೆಚ್ಚಾಯಿತು.

ದುಪ್ಪಟ್ಟು ಲಾಭ ಬರುವುದೆಂದಮೇಲೆ ಕೇಳುವುದೇನು? ಎಲ್ಲ ಕಡೆಯೂ ದನಗಳಿಗೆ ಇದೇ ಆಹಾರವನ್ನು ಕೊಡುವ ಪದ್ಧತಿ ಬೆಳೆದು ಬಂತು. ಇಂಗ್ಲೆಂಡಿನ ಖಜಾನೆ ತುಂಬತೊಡಗಿತು. ಆದರೆ ನಂತರದ ದಿನಗಳಲ್ಲಿ ಯಾರೂ ಕನಸುಮನಸಿನಲ್ಲಿಯೂ ಊಹಿಸದ ಒಂದು ಸಮಸ್ಯೆ ಉದ್ಭವಿಸಿತು. ಅಲ್ಲಿ ಶಾಲೆಗೆ ಹೋಗುತ್ತಿರುವ ಅನೇಕ ಮಕ್ಕಳಿಗೆ ಒಂದು ರೀತಿಯ ವಿಚಿತ್ರವಾದ ಮಿದುಳಿನ ಕಾಯಿಲೆ ಬಂತು. ಹತ್ತು ಜನ ಮಕ್ಕಳು ಮೃತವಾದವು. ಅದಕ್ಕೆ ಕಾರಣ ಆ ಮಕ್ಕಳಿಗೆ ಕೊಡುತ್ತಿದ್ದ ಮಾಂಸಾಹಾರಿ ದನಗಳ ಮಾಂಸ ಎಂದು ಅನೇಕ ಡಾಕ್ಟರರು ಹೇಳಿದರು.

ಬ್ರಿಟನ್ನಿನ ಈ ದನಗಳಿಗೆ ಒಂದು ತೆರನಾದ ರೋಗ ಅಂಟಿಕೊಂಡಿದೆ. ಇಂಗ್ಲೀಷ್ ಭಾಷೆಯಲ್ಲಿ ಅದಕ್ಕೆ ಬಿ.ಎಸ್.ಇ. (ಬೋವೈನ್ ಸ್ಪೊನ್‌ಜಿಫಾರ್ಮ ಇನ್‌ಸೆಫೆಲೋಪಥ) ಎಂದು ಹೆಸರು. ಇಂತಹ ದನಗಳಿಂದ ಮಕ್ಕಳಿಗೆ ಈ ರೋಗ ಬಂದಿದೆ ಎಂಬ ಸುದ್ದಿ ಹಬ್ಬುವುದೇ ತಡ, ಎಲ್ಲೆಲ್ಲೂ ಹಾಹಾಕಾರ ಪ್ರಾರಂಭವಾಯಿತು. ಬ್ರಿಟನ್ನಿನ ಹತ್ತು ಸಾವಿರ ಶಾಲೆಗಳಲ್ಲಿ ಮಕ್ಕಳಿಗೆ ಉಪಾಹಾರವಾಗಿ ಕೊಡುತ್ತಿದ್ದ ಗೋಮಾಂಸವನ್ನು ಕೂಡಲೆ ನಿಲ್ಲಿಸಲಾಯಿತು.

ಈ ವರೆಗೆ ಬ್ರಿಟನ್ನಿನಿಂದ ಯೂರೋಪಿನ ದೇಶಗಳಿಗಲ್ಲದೆ ಅಮೇರಿಕ, ಅರ್ಜೆಂಟೈನಾ, ಸಿಂಗಾಪುರ ಹಾಗೂ ಪಾಕಿಸ್ತಾನಗಳಿಗೂ ಗೋಮಾಂಸ ರಫ್ತಾಗುತ್ತಿತ್ತು. ಈ ಸುದ್ದಿ ಹಬ್ಬುತ್ತಲೇ ಆ ದೇಶಗಳೆಲ್ಲ ಬ್ರಿಟನ್ನಿನಿಂದ ಮಾಂಸ ತರಿಸಿಕೊಳ್ಳುವುದನ್ನು ನಿಲ್ಲಿಸಿದವು. ಈ ಬಾಬತ್ತಿನಿಂದ ಇಂಗ್ಲೆಂಡಿಗೆ ಬರುತ್ತಿದ್ದ ೮೭ ಕೋಟಿ ಪೌಂಡುಗಳಷ್ಟು ಆದಾಯ ನಿಂತು ಹೋಯಿತು.

ಕೆಲವು ವೈಜ್ಞಾನಿಕರು ಹಾಗೂ ಡಾಕ್ಟರರು ದನಗಳಿಗೆ ಹಿಡಿದಿರುವ ಈ ರೋಗ ಮನುಷ್ಯರಿಗೆ ಹಬ್ಬುವಂತಹುದಲ್ಲ. ಆದ್ದರಿಂದ ಇಂಗ್ಲೆಂಡಿನ ಮಕ್ಕಳು ತೀರಿಕೊಂಡಿದ್ದಕ್ಕೆ ಬೇರೆ ಯಾವುದೋ ಕಾರಣವಿರಬೇಕು. ಆದುದರಿಂದ ಪರೀಕ್ಷಿಸಿದ ನಂತರವೇ ಗೋಮಾಂಸವನ್ನು ಮಾರಬೇಕು ಎಂದು

ಸಲಹೆ ನೀಡಿದ್ದು ಅದನ್ನು ವಿಶ್ವಸಂಸ್ಥೆಯೂ ಅನು ಮೋದಿಸಿದೆ. ಆದರೆ ಇಷ್ಟರಿಂದ ಆಮದು ಮಾಡಿ ಕೊಳ್ಳುವ ರಾಷ್ಟ್ರಗಳಿಗೆ ವಿಶ್ವಾಸ ಬರಬೇಕಲ್ಲ? ಈ ಹುಚ್ಚುಹಿಡಿದ ದನಗಳನ್ನೆಲ್ಲ ಸಾರಾಸಗಟಾಗಿ ನಾಶ ಗೊಳಿಸದಿದ್ದರೆ ಗೋಮಾಂಸವನ್ನು ತರಿಸಿಕೊಳ್ಳು ವುದೇ ಇಲ್ಲ ಎಂದು ಅವು ಪಟ್ಟುಹಿಡಿದಿವೆ.

ಆದ್ದರಿಂದ ಈ ಹುಚ್ಚುದನಗಳನ್ನು ಕೊಂದುಬಿ ಡುವುದಾಗಿ ಬ್ರಿಟಿಶ್ ಸರಕಾರ ನಿರ್ಧರಿಸಿದೆ. ಆದರೆ ಈ ಕೆಲಸ ಹೇಳಿದಷ್ಟು ಸುಲಭವಲ್ಲ. ನುಡಿದಂತೆ ನಡೆಯಬೇಕೆಂದರೆ ಅಲ್ಲಿನ ಸರಕಾರ ಒಂದು ಕೋಟಿ ಹತ್ತುಲಕ್ಷ ದನಗಳನ್ನು ನಾಶ ಗೊಳಿಸಬೇಕು. ಆದರೆ ಬೇಕಾಬಿಟ್ಟಿಯಾಗಿ ದನಗ ಳನ್ನು ನಾಶಗೊಳಿಸಬಹುದೆ? ಅದಕ್ಕಾಗಿ ದನಗಳ ಮಾಲಿಕರಿಗೆ ಪರಿಹಾರಧನ ಕೊಡಬೇಡವೆ? ಪರಿ ಹಾರ ಧನದ ಮೊತ್ತವೇ ಏನಿಲ್ಲವೆಂದರೂ ನಲವತ್ತು ಕೋಟಿ ಪೌಂಡುಗಳಷ್ಟಾಗುತ್ತದೆಂದು ಒಂದು ಅಂದಾಜು. ಅಲ್ಲದೆ ಹೀಗೆ ಮಾಡುವುದರಿಂದ ದೇಶದಲ್ಲಿ ಹಾಲಿನ ಉತ್ಪಾದನೆ ಶೇಕಡಾ ೫ರಷ್ಟು ಕಡಿಮೆಯಾಗುತ್ತದೆ. ಮಾಂಸಾಹಾರವನ್ನೇ ಹೆಚ್ಚಾಗಿ ಅವಲಂಬಿಸಿದ ಜನರಿರುವ ಆ ದೇಶದಲ್ಲಿ ಮಾಂಸದ ಉತ್ಪಾದನೆ ಕಡಿಮೆಯಾಗುವುದರಿಂದ ಜನರಿಗೆ ಇನ್ನಷ್ಟು ಕಷ್ಟ. ಇಷ್ಟಕ್ಕೂ ದನಗಳನ್ನು ಕೊಲ್ಲಬೇಕೆಂದು ನಿರ್ಧರಿಸಿದರೂ ಇಷ್ಟೆಲ್ಲ ದನಗಳನ್ನು ಕೊಲ್ಲುವುದು ಹೇಗೆ? ಅದಕ್ಕೆ ತಗಲುವ ವೆಚ್ಚವನ್ನು ನಿಭಾಯಿಸು ವುದು ಹೇಗೆ? ಇದೆಲ್ಲ ಬ್ರಿಟಿಶ್ ಸರಕಾರಕ್ಕೆ ನುಂಗಲಾರದ ತುತ್ತಾಗಿದೆ.

ಆದರೆ ಕಥೆ ಇಷ್ಟಕ್ಕೇ ಮುಗಿಯುವುದಿಲ್ಲ. ವಿಶ್ವ ಹಿಂದೂ ಪರಿಷತ್ತಿನ ಬ್ರಿಟಿಶ್ ಶಾಖೆಯ ಪ್ರತಿನಿಧಿ ಯಾಗಿರುವ ಹಸಮುಖ ಶಾಹರು, "ದನಗಳನ್ನು ಸಾಯಿಸಬೇಡಿ, ನಮ್ಮ ಭಾರತಕ್ಕೆ ಕಳುಹಿಸಿಕೊಡಿ," ಎಂದು ಹೇಳಿ ಅವುಗಳ ಪಾಲನೆಗೆ ಮುಂದಾಗಿ ದ್ದಾರಂತೆ. ಅವರಿಗೆ ಭಾರತದ ಎರಡು ರಾಜ ಕೀಯ ಪಕ್ಷಗಳ ಬೆಂಬಲವೂ ಇದೆಯಂತೆ.

ದನ ಉಪಯುಕ್ತ ಪ್ರಾಣಿ ಎನ್ನುವುದು ನಿಜವೆ. ಅದಕ್ಕೆ ದಯೆತೋರಿಸಬೇಕೆನ್ನುವುದೂ ಸರಿಯೆ. ಆದರೆ ಈ ಸಂಗತಿ ದನಗಳ ವಿಷಯದಲ್ಲಿ ಮಾತ್ರ ಏಕೆ? ಎಮ್ಮೆ ಕೋಣ, ಆಡು, ಕುರಿ, ಹಂದಿಗಳ ಬಗ್ಗೆ ಏಕೆ ಇಲ್ಲ? ಎಂಬ ವಿಚಾರ ಯಾವುದೇ ಮಾನವತಾವಾದಿ ಇಲ್ಲವೆ ಪ್ರಾಣಿದಯಾಪರನ ಮನ ಸ್ಸಿನಲ್ಲಿ ಬಂದಿಲ್ಲ ಎನ್ನುವುದು ಆಶ್ಚರ್ಯ.

ಗೋಹತ್ಯೆ ನಡೆಯಕೂಡದು - ತತ್ವವೆಂದು ಅದು ಸರಿ. ಆದರೆ ಕಾರ್ಯಾಚರಣೆಗೆ ಬರುವಾಗ ಇತರ ಕೆಲವು ವಿಷಯಗಳನ್ನೂ ಗಮನಕ್ಕೆ ತೆಗೆದು ಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಈ ದನಗಳ ವಿಷಯವನ್ನೇ ತೆಗೆದುಕೊಳ್ಳಿ. ಬ್ರಿಟಿಶ್ ಸರಕಾರ ನಾಶಮಾಡಲು ಹೊರಟಿರುವ 'ಹುಚ್ಚುರೋಗದ,' ಜಗತ್ತಿನಲ್ಲಿ ಯಾರೂ ಆಸರೆಕೊಡಲು ಮುಂದೆ ಬಾರದ ಈ ದನಗಳನ್ನು ಭಾರತಕ್ಕೆ ಏಕೆ ಬರಮಾ ಡಿಕೊಳ್ಳಬೇಕು? ಅದಕ್ಕಾಗಿ ಲಕ್ಷಾಂತರ ರೂಪಾ ಯಿಗಳು ವ್ಯಯವಾಗುತ್ತವೆ. ಈ ಖರ್ಚನ್ನು ಭರಿಸಲು ಬ್ರಿಟಿಶ್ ಸರಕಾರ ಸಿದ್ಧವಿದೆ. ಆದರೆ ಆ ಜನ ನಮ್ಮಂತೆ ಭಾವನೆಗೆ ಸುಮ್ಮನೆ ಬಲಿಯಾಗುವ ವರಲ್ಲ. ಎಲ್ಲವನ್ನೂ ವ್ಯಾವಹಾರಿಕವಾಗಿಯೆ ಯೋಚಿ ಸುವವರು. ಈ ದನಗಳನ್ನು ನಾಶಗೊಳಿಸಲು ಬ್ರಿಟಿಶ್ ಸರಕಾರಕ್ಕೆ ಇನ್ನೂರು ಕೋಟಿ ರೂಪಾಯಿ ಗಳಷ್ಟು ಖರ್ಚಾಗುವುದಂತೆ. ಆದರೆ ಇದಕ್ಕಿಂತ ಕಡಿಮೆ ವೆಚ್ಚದಲ್ಲಿ ಅವುಗಳನ್ನು ಭಾರತಕ್ಕೆ ಸಾಗಿಸಬ ಹುದಂತೆ!

ಕೇವಲ ಗೋವು ನಮ್ಮ ಮಾತೆ ಎಂದುಕೊಂಡು ಯಾರಿಗೂ ಬೇಡವಾದ, ಹುಚ್ಚು ಹಿಡಿದ ಈ ಲಕ್ಷಾವಧಿ ದನಗಳನ್ನು ಬರಮಾಡಿಕೊಂಡರೆ ಅವು ಗಳನ್ನು ಇಡುವುದೆಲ್ಲಿ? ಅವುಗಳಿಗೆ ಬೇಕಾದ ಆಹಾ ರವನ್ನು ಎಲ್ಲಿಂದ ತರುವುದು? ಅವುಗಳ ಪೋಷಣೆಯ ಖರ್ಚನ್ನು ಯಾರು ವಹಿಸಿಕೊಳ್ಳು ವರು? ಕೇವಲ ಗೋಮಾತೆ ಎಂದು ಪೂಜಿಸುವು ದರಿಂದ ಈ ಕೆಲಸಗಳಾಗುವುದಿಲ್ಲ. ಬೇರೆಯವರಿಗೆ ಬೇಡವಾದ ದನಗಳನ್ನು ಸುಮ್ಮಸುಮ್ಮನೆ ನಮ್ಮ ಅಂಗಳಕ್ಕೆ ಕರೆತರುವಾಗ ಇಷ್ಟಾದರೂ ವಿವೇಕ ಪೂರ್ಣ ವಿಚಾರಮಾಡಬೇಡವೆ? ಇಲ್ಲವಾದರೆ ಹುಚ್ಚು ಹಿಡಿದಿರುವುದು ಬರೇ ದನಗಳಿಗಲ್ಲ, ನಮಗೂ ಎಂದು ತಿಳಿಯುವಂತಾಗಲು ಹೆಚ್ಚು ಸಮಯ ಬೇಕಾಗುವುದಿಲ್ಲ. ●

('ಕರ್ನಾಟಕ ಮಲ್ಲ'ದಿಂದ ಸಂಗ್ರಹೀತ)

# ನೆನಪು ನೆರಳಿನಲ್ಲಿ

ನನಗೆ ಆಗ ಆರು ವರ್ಷ ವಯಸ್ಸು. ಅಪ್ಪ ವ್ಯಾಪಾರಕ್ಕೆಂದು ವಾರಕ್ಕೆರಡು ಸಾರೆ ರಾಯಚೂರಿಗೆ ಹೋಗಿ ಬರುತ್ತಿದ್ದರು. ರಾಯಚೂರಿನಿಂದ ಮಾನ್ವಿಗೆ ಹಿಂದಿರುಗಿ ಬರುವಾಗ ಏನಾದರೂ ತಿನ್ನಲಿಕ್ಕೆ ತರುತ್ತಿದ್ದರು. ಏನು ತಂದಾರೋ ಎಂದು ಖಾತ್ರಿ ಮಾಡಿಕೊಳ್ಳಲು ಚೀಲತಟ್ಟಿ ನೋಡುತ್ತಿದ್ದೆ. ಎಷ್ಟೋ ಸಾರಿ ಕಾರ, ಸಿಹಿ ತಿನುಸುಗಳು, ಬಾಳೆಹಣ್ಣು, ಪೇಡೆ, ಇನ್ನೂ ತರ ತರಹದ ತಿನುಸುಗಳನ್ನು ತರುತ್ತಿದ್ದರು. ಮನೆಗೆ ಆಗ ನಾನೊಬ್ಬನೆ ಮಗನಾಗಿದ್ದೆ. ಹೀಗಾಗಿ ಏನು ತಂದರೂ ನನಗೇ ಅಲ್ಲವೆ? ಒಮ್ಮೆ ಅಪ್ಪ ರಾಯಚೂರಿನಿಂದ ಬಂಗಾರದ ಸಾಮಾನಿನ ಜೊತೆ ಪೇಡೆಯಂತಹ ವಸ್ತುವನ್ನು ತಂದಿದ್ದರು. ಅದನ್ನು ಇಲ್ಲೇಕೆ ಇಟ್ಟಿದ್ದಾರೆಂದು ಬಾಯಿಗೆ ಹಾಕಿಕೊಂಡೆ. ಬಾಯಿ ಜುಮುಜುಮು ಎಂದಿತು. ಅಪ್ಪನಲ್ಲಿಗೆ ಹೋಗಿ, "ಈ ಪೇಡಾ ತಿಂದ್ರೆ ಜುಮುಜುಮು ಅಂತದೆ," ಎಂದು ತಿಳಿಸಿದೆ. ಅಪ್ಪ ಗಾಬರಿಯಾಗಿ, "ತಿಂದೇನೋ?" ಎಂದು ಕೇಳಿದರು. 'ಹೌದು' ಅಂದದ್ದೇ ತಡ, ನನ್ನನ್ನು ಎತ್ತಿಕೊಂಡು ಓಡಿದರು. ಕಣ್ಣುಬಿಟ್ಟು ನೋಡಿದೆ. ಅಪ್ಪ ಡಾಕ್ಟರ್ ಮನೆಗೆ ಬಂದಿದ್ದರು. "ಡಾಕ್ಟ್ರೇ, ನನ್ನ ಮಗ ಸೈನ್ ಪಟಾಸ್ ತಿಂದಾನೆ, ಪರೀಕ್ಷೆ ಮಾಡ್ರಿ," ಎಂದು ಹೇಳಿದರು. ಡಾಕ್ಟರ್ ನನ್ನನ್ನು ಕೂಡಿಸಿ ಪರೀಕ್ಷೆ ಮಾಡಿ ನೋಡಿದರು. ಸೈನ್ ಪಟಾಸ್ ನಾಲಿಗೆಗೆ ಅಂಟಿತ್ತು. "ಪೇಡಾ ಅಂದು ನುಂಗಿದೆಯೋ ಅಥವಾ ಉಗುಳಿದೆಯೋ?" ಎಂದು ಡಾಕ್ಟರ್ ನನ್ನನ್ನು ಕೇಳಿದರು. ನಾನು "ಪೇಡಾ ತಿಂದೆ, ಜುಮುಜುಮು ಅಂತು, ಉಗುಳಿದೆ" ಎಂದು ಉತ್ತರಿಸಿದೆ. ಗಂಟಲಲ್ಲಿ ಪರೀಕ್ಷೆ ಮಾಡಿನೋಡಿ, ಸೈನ್ ಪಟಾಸ್ ಹೊಟ್ಟೆಯೊಳಗೆ ಹೋಗಿಲ್ಲ ಎಂದು ನಿರ್ಣಯಿಸಿದರು. ಡಾಕ್ಟರ್ ಹೇಳಿದ್ದನ್ನು ಕೇಳಿ ಸಮಾಧಾನದ ನಿಟ್ಟುಸಿರು ಬಿಟ್ಟರು ಅಪ್ಪ. ಡಾಕ್ಟರು, "ಸೈನ್ ಪಟಾಸ್ ಹೊಟ್ಟೆಯೊಳಗೆ ಹೋಗಿದ್ದರೆ ಮಗ ದಕ್ಕುತ್ತಿದ್ದಿಲ್ಲ. ನಿಮ್ಮ ಪುಣ್ಯ" ಎಂದರು. ಅಪ್ಪ ನನ್ನನ್ನು ಮನೆಗೆ ಕರೆದುಕೊಂಡು ಬಂದರು. ಯಾವಾಗಲಾದರೂ ಪೇಡೆ ತಿನ್ನುವಾಗ ಈ ಘಟನೆ ನೆನಪಾಗದೆ ಇರುವುದಿಲ್ಲ. ●ಕೆ. ಮನೋಹರ ವಿಶ್ವಕರ್ಮ

ಸುಮಾರು ಮೂವತ್ತು ವರ್ಷದ ಹಿಂದಿನ ಮಾತು. ನಮ್ಮ ಸ್ನೇಹಿತರೊಬ್ಬರ ತಾಯಿಗೆ ಅಜಾರಿಯಾಗಿತ್ತು. ಆರಂಭದಲ್ಲಿ ಅದು ಹೊಟ್ಟೆನೋವು ಎನಿಸಿತು. ಇದೇನು ಸಣ್ಣ ಕಾಯಿಲೆಯೆಂದು ಮನೆಯಲ್ಲಿಯೇ ಉಪಚಾರ ಮಾಡಿದರು. ಆದರೆ ದಿನದಿನಕ್ಕೆ ಹೆಚ್ಚಾಗಿ ನೋವು ತಾಳಲಾರದೆ ಆ ತಾಯಿ ಉರುಳಾಡಹತ್ತಿದಳು. ನಮ್ಮ ಗೆಳೆಯ ಗಾಬರಿಯಾಗಿ ತಾಯಿಯನ್ನು ಕರೆದುಕೊಂಡು ಮಿರಜ್, ಹುಬ್ಬಳ್ಳಿ ಹೀಗೆ ಹತ್ತಾರು ಊರು ಸುತ್ತಿಬಂದರೂ ಗುಣವಾಗುವ ಲಕ್ಷಣ ಕಂಡುಬರಲಿಲ್ಲ. ಅನಿವಾರ್ಯವಾಗಿ ಮನೆಗೆ ತಂದುಹಾಕಿದಾಗ ಆಕೆ ನಿತ್ರಾಣಗೊಂಡು ಸಾಯುವುದು ಸಮೀಪ ಎಂಬ ನಿರ್ಧಾರಕ್ಕೆ ಬಂದೆವು.

ಅದೇ ಸಮಯಕ್ಕೆ ಅನಿರೀಕ್ಷಿತವಾಗಿ ಪಕ್ಕದೂರಿನ ಬಸವನಗೌಡರು ಎಂಬ ಆಯುರ್ವೇದ ಪಂಡಿತರು ಒಬ್ಬರ ಮನೆಗೆ ಬಂದಿದ್ದರು. ಆ ಮನೆಯವರಿಗೆ ಈ ನಮ್ಮ ಗೆಳೆಯನ ತಾಯಿ ಅಜಾರಿಯಲ್ಲಿದ್ದದ್ದು ಗೊತ್ತಿತ್ತು. ಅವರು ಮಾತಿಗೆ ಮಾತು ಬಂದಾಗ, "ಇಲ್ಲಿ ಒಬ್ಬರಿಗೆ ಹೊಟ್ಟೆ ಕಡಿತ ಅಂತ ಆರಂಭವಾದದ್ದು ವಿಪರೀತಕ್ಕಿಟ್ಟುಕೊಂಡಿದೆ. ಈಗ ಆಕೆ ಬದುಕುವ ಲಕ್ಷಣಗಳಿಲ್ಲ. ಮಿರಜ್-ಹುಬ್ಬಳ್ಳಿಯಲ್ಲಿ ತೋರಿಸಿದ್ದಾಯಿತು," ಅಂದರು.

"ಅವರು ಏನಂದರು?"

"ಉಪಚಾರ ಮಾಡಿದರು. ಆದರೆ ಗುಣವಾಗಲಿಲ್ಲ, ನೀವೂ ಅವಳನ್ನೊಮ್ಮೆ ನೋಡಿದರೆ ಒಳ್ಳೆಯದು."

"ಆಗಲಿ ನಡೆಯಿರಿ," ಎಂದರು ಬಸವನಗೌಡರು.

ಅವರು ಆ ತಾಯಿಯನ್ನು ನೋಡಿದ ತಕ್ಷಣ, "ಸುಮ್ಮನೇ ಹೈರಾಣ ಆಗೀರಪ್ಪ. ಇವಳಿಗೆ ಜಡ್ಡೇಯಿಲ್ಲ. ಬರೇ ದುಡ್ಡಿನಲ್ಲಿ ವಾಸಿಯಾಗುತ್ತದೆ," ಎಂದು ಹೇಳಿದಾಗ, ಎಲ್ಲರಿಗೂ ಆಶ್ಚರ್ಯವಾಯಿತು. ಹತ್ತು ಪೈಸೆಯ ಎರಡು ಬಿಲ್ಲೆ

ಕೊಟ್ಟು ಒಂದು ಜಂತಿನ ಪುಡಿಯ ಚೀಟಿಯನ್ನು ತರಿಸಿ, ಬಿಸಿನೀರಿನಲ್ಲಿ ಕಲಸಿ, ಅವಳಿಗೆ ಕುಡಿಯಲು ಕೊಟ್ಟರು. "ತಾಸೆರಡು ತಾಸು ತಡೆಯಿರಿ, ಅಷ್ಟರಲ್ಲಿ ಜಂತುಗಳು ಬೀಳುತ್ತವೆ. ತಿಂಗಳೆರಡು ತಿಂಗಳ ನಿದ್ರೆಯಿಲ್ಲದ್ದರಿಂದ ಆಕೆ ಮಲಗಿಬಿಡುತ್ತಾಳೆ. ಚಿಂತಿಸಬೇಡಿರಿ. ಎದ್ದ ಮೇಲೆ ಅನ್ನ ಕೊಡಿರಿ. ಊರಿಗೆ ಹೋಗುವ ಮೊದಲು ನಾನು ಬರುತ್ತೇನೆ." ಎಂದು ಹೇಳಿ ಹೊರಟರು.

ತಾಸು ಕಳೆದಿರಲಿಲ್ಲ, ಬಾಯಿಯಿಂದಲೂ ಸುರುಳಿ ಸುರುಳಿಯಾಗಿ ಜಂತುಗಳು ಹೊರಬಂದವು. ಅವು ಹೊರ ಬಂದ ಮೇಲೆ ಆಕೆ ಮಲಗಿಬಿಟ್ಟಳು. ಮುಂದೆ ಬಸವನಗೌಡರು ಬಂದಾಗ ನಾವೆಲ್ಲ ಅವರನ್ನು ಕೊಂಡಾಡಿದೆವು. ಯಾರು ಮೂಗಿನ ಮುಂದಿನ ಭಾಗವನ್ನು ಪದೇ ಪದೇ ತುರಿಸಿಕೊಳ್ಳುತ್ತಾರೋ ಅವರ ಹೊಟ್ಟೆಯಲ್ಲಿ ಜಂತುಗಳು ಇವೆಯೆಂದು ತಿಳಿಯಬೇಕು. ಅಂಥವರಿಗೆ ತಡ ಮಾಡದೆ ಜಂತಿನ ಪುಡಿಯನ್ನು ಕೊಡಬೇಕು ಎಂದು ಹೇಳಲು ಮರೆಯಲಿಲ್ಲ. ಮುಂದೆ ಆ ತಾಯಿ ಹತ್ತಿಪ್ಪತ್ತು ವರ್ಷ ಬದುಕಿದಳು.

- ಬಸವರಾಜ ತೆಗ್ಗಿನಮಠ.

..........................................

**ಸು**ಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನಾನಾಗ ೭-೮ ವರ್ಷದ ಬಾಲಕ. ತಂದೆಯವರು ಎಲ್ಲಿಯೇ ಹೋಗಲಿ, ಅವರ ಹಿಂದೆಯೇ ದುಂಬಾಲು ಬೀಳುವ ಗೀಳು. ಒಮ್ಮೆ ಮಾವಿನ ಸುಗ್ಗಿಯಲ್ಲಿ ತಂದೆಯವರು ಕಾಯಿ ಕೀಳಲು ತೋಪಿಗೆ ಆಳುಗಳೊಡನೆ ಹೊರಟು ನಿಂತರು. ಅತ್ತೂ ಕರೆದೂ ತಂದೆಯನ್ನು ಒಪ್ಪಿಸಿ ನಾನೂ ಅವರೊಡನೆ ಹೊರಟು ತೋಪು ತಲುಪಿದ್ದಾಯಿತು. ಅತಿ ವಯಸ್ಸಾದ ದೊಡ್ಡ ದೊಡ್ಡ ಮಾವಿನ ಮರಗಳು. ಆಳುಗಳೊಡನೆ ತಂದೆಯವರು ಕಾಯಿ ಕೀಳಲು "ಜೋಟಿ" (ಮಾವಿನ ಕಾಯಿ ಕೀಳಲು ಉಪಯೋಗಿಸುವ ಸಾಧನ) ಸಮೇತ ಮರದ ತುತ್ತ ತುದಿಗೆ ಏರಿ ಕಾಯಿ ಕೀಳಲು ಅಣಿಯಾದರು. ಇದನ್ನೆಲ್ಲಾ ನೋಡುತ್ತಾ ನಾನು ಬೇರೆ ಗಿಡದ ಕೆಳಗೆ ನಿಂತಿದ್ದೆ. ತಂದೆಯವರು ಒಂದು ದೊಡ್ಡದಾದ ಟೊಂಗೆಯ ಮೇಲೆ ಎರಡು ಕಾಲುಗಳನ್ನು ಭದ್ರವಾಗಿ ಊರಿ, ತಮ್ಮ ಒಂದು ಕೈಯನ್ನು ತಮ್ಮ ತಲೆಯ ಪಕ್ಕಕ್ಕಿದ್ದ ಟೊಂಗೆಗೆ ಆಸರೆಯಾಗಿ ಹಿಡಿದು, ಮತ್ತೊಂದು ಕೈಯಿಂದ ಜೋಟಿಯನ್ನು ಹಿಡಿದು, ಸಾವಧಾನವಾಗಿ ಒಂದೊಂದೇ ಕಾಯಿಯನ್ನು ಕೆಳಗೆ ಕೆಡವುವುದನ್ನೇ ತದೇಕ ಚಿತ್ತನಾಗಿ ಗಮನಿಸುತ್ತಾ ನಿಂತಾಗ ಒಮ್ಮೆಲೇ "ಫಟಲ್ ಫಟಲ್" ಎನ್ನುವ ಶಬ್ದ ಕೇಳಿಬಂತು. ಏನಾಗುತ್ತಿದೆ ಎಂದು ಯಾರಿಗೂ ತಿಳಿಯದು. ಏನಾಯಿತು? ಏನಾಯಿತು? ಎಂಬ ಆಳುಗಳ ಕೂಗನ್ನು "ಅಪ್ಪಾ! ಅಪ್ಪಾ!" ಎನ್ನುವ ನನ್ನ ರೋದನದ ಮಧ್ಯೆಯೇ ಆಲಿಸಿದೆ. ಅಯ್ಯೋ ದೇವರೆ! ತಂದೆಯವರು ಭದ್ರವಾಗಿ ಕಾಲೂರಿ ನಿಂತಿದ್ದ ಟೊಂಗೆಯೇ ಮುರಿಯುತ್ತಿದೆ. ಭಯದಿಂದ ಕಣ್ಣುಮುಚ್ಚಿದ ನಾನು ಕಣ್ತೆರೆದು ನೋಡಿದಾಗ ದೊಡ್ಡ ಟೊಂಗೆ ಹಾಗೂ ಜೋಟಿ ಮಾತ್ರ ನೆಲದ ಮೇಲೆ ಬಿದ್ದಿವೆ. ನೆಲದಿಂದ ಸುಮಾರು ನಾಲ್ವತ್ತು ಅಡಿಗಳಷ್ಟು ಎತ್ತರದಲ್ಲಿ ಟೊಂಗೆ ಹಿಡಿದು ತಂದೆಯವರು ನೇತಾಡುತ್ತಿದ್ದಾರೆ. "ಅಪ್ಪಾ! ಅಪ್ಪಾ!" ಎನ್ನುವ ನನ್ನ ರೋದನ ಹಾಗೂ ಆಳುಗಳ ಚೀತ್ಕಾರದ ಮಧ್ಯೆ ಅದು ಹೇಗೋ ತಂದೆಯವರು ಸಾವರಿಸಿಕೊಂಡು ಮಗ್ಗುಲಿದ್ದ ಟೊಂಗೆಗಳ ಆಸರೆಯಿಂದ ನಿಧಾನವಾಗಿ ಕೆಳಗಿಳಿದು ಬಂದಾಗ ಎಲ್ಲರೂ ನೆಮ್ಮದಿಯ ನಿಟ್ಟುಸಿರು ಬಿಟ್ಟರು. ಹೊಲದ ಪಕ್ಕದ ಗುಡ್ಡದ ಮೇಲಿರುವ ದುರ್ಗಾ ಪರಮೇಶ್ವರಿ ಗುಡಿಯ ಕಡೆಗೆ ಕೈ ಮುಗಿದಿದ್ದೇ ಮುಗಿದದ್ದು. ಪ್ರತಿ ವರ್ಷ ಮಾವಿನ ಸುಗ್ಗಿ ಬಂದಾಗಲಾಗಲಿ ೬೦ ವರ್ಷ ತುಂಬಿದ ತಂದೆಯವರನ್ನು ಕಂಡಾಗಲಾಗಲಿ ಅಂದಿನ ಘಟನೆ ನೆನಪಾಗದೆ ಇರುವುದಿಲ್ಲ.

- ಶಿವರಾಜ ಹ. ಕರಡ್ಡಿ

..........................................

# ನಿಮ್ಮ ನೌಕರಿಯಲ್ಲಿ ನಿಮಗೆ ತೃಪ್ತಿಯಿದೆಯೇ?

ಸಮಯಕ್ಕೆ ತನ್ನದೇ ಆದ ಓಘವಿದೆ. ಅದೇ ಗತಿಯಲ್ಲೇ ಅದು ಸದಾ ಚಲಿಸುತ್ತಿರುತ್ತದೆ ಎಂದು ಹೇಳಲಾಗುತ್ತಿದೆ. ಈ ಹಳೆಗಾಲದ ಮಾತು ಇಂದಿನ ಸನ್ನಿವೇಶದಲ್ಲಿ ಅರ್ಥ ಕಳೆದುಕೊಳ್ಳುತ್ತಿದೆ ಎಂಬ ಭಾವನೆ ಕೆಲವರಿಗಾದರೂ ಬಂದರೆ ಆಶ್ಚರ್ಯವಿಲ್ಲ. ನಿಜವೆ. ಈಗಿರುವುದು ಗಡಿಬಿಡಿಯ ಕಾಲ. ಸಮಯ ಮೊದಲಿಗಿಂತ ತೀವ್ರವಾಗಿ ಓಡುತ್ತಿದೆ. ಕಾಲದೊಡನೆ ಹೆಜ್ಜೆಹಾಕದೆ ವಿಧಿಯೆ ಇಲ್ಲ ಎಂದು ಅನೇಕರು ಜೀವನ ವಿಧಾನವನ್ನೇ ಬದಲಿಸಿಕೊಂಡಿದ್ದಾರೆ. ಹೊಸ ಹೊಸ ಸರಕು ಸಾಮಗ್ರಿಗಳು ಪೇಟೆಯನ್ನು ಪ್ರವೇಶಿಸಿದಂತೆಲ್ಲ ಜನರ ಆಕಾಂಕ್ಷೆಗಳೂ ಬೆಳೆಯುತ್ತವೆ. ಇಂದಿನ ಆಕಾಂಕ್ಷೆಗಳೇ ನಾಳಿನ ಅವಶ್ಯಕತೆಗಳಾಗಿ ಮಾರ್ಪಾಟುಗೊಳ್ಳುತ್ತವೆ. ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾದರೂ ನೌಕರಿ ಮಾಡಬೇಕೆಂಬ ಭಾವನೆ ಬಲಿಯುತ್ತದೆ. ಹಿಂದೆ ಒಬ್ಬರು ನೌಕರಿ ಮಾಡಿದರೆ ಮನೆಯಲ್ಲಿ ಹತ್ತು ಜನ ಉಣ್ಣುತ್ತಿದ್ದರು. ಆದರೆ ಇಂದಿನ ಮಾತೇ ಬೇರೆ. ಮನೆಯಲ್ಲಿನ ಹತ್ತುಜನ ದುಡಿದರೂ ಅವಶ್ಯಕತೆಗಳನ್ನು ಪೂರೈಸಲಾಗುವುದಿಲ್ಲ.

ಹಾಗಾದರೆ ನೌಕರಿಯೆಂದರೆ ಏನು? ಅದಕ್ಕೊಂದು ಪರಿಭಾಷೆಯನ್ನು ಕೊಡುವುದೇ ಕಠಿಣ. ಮಾಡುತ್ತಿರುವ ನೌಕರಿ ದೊಡ್ಡದೋ ಅಥವಾ ಸಣ್ಣದೋ ಎಂಬ ಮಾತು ಬೇರೆ. ಆದರೆ ಮಾಡುತ್ತಿರುವ ಕೆಲಸದಲ್ಲಿ ತೃಪ್ತಿಯನ್ನು ಕಂಡುಕೊಂಡವರು ತುಂಬಾ ಕಡಿಮೆ. ಎಲ್ಲರೂ ಇನ್ನಷ್ಟು ಹೆಚ್ಚು ಗಳಿಸಬೇಕೆನ್ನುವವರೆ. ನೌಕರದಾರರಿಗೆ ವ್ಯಾಪಾರಿಗಳತ್ತ ಅಸೂಯೆಯ ದೃಷ್ಟಿ. ವ್ಯಾಪಾರಸ್ಥರಿಗೋ ನೌಕರಿಗಿಂತ ಆರಾಮದಾಯಕವಾದದ್ದು ಬೇರಾವುದೂ ಇಲ್ಲ ಎಂಬ ಭಾವನೆ. ಖಾಸಗಿ ನೌಕರಿಯಲ್ಲೇ ಉಜ್ವಲವಾದ ಭವಿಷ್ಯವನ್ನು ಕಂಡುಕೊಳ್ಳಬಹುದು ಎಂಬ ಭಾವನೆ ಸರಕಾರಿ

**ನೌಕರಿ ಬದಲಾವಣೆ ಕೆಲವರಿಗೆ ಒಂದು ಗೀಳಾಗಿರುವುದಕ್ಕೆ ಏನು ಕಾರಣ.**



- ಕೃಷ್ಣಸ್ವಾಮಿ

ನೌಕರರಲ್ಲಿದ್ದರೆ, ಸರಕಾರಿ ನೌಕರಿಯಲ್ಲೇ ಸ್ವರ್ಗಸುಖವಿದೆ ಎಂದುಕೊಳ್ಳುವವರು ಖಾಸಗಿರಂಗದಲ್ಲಿ ಕೆಲಸ ಮಾಡುವವರು. ಕೆಲಸದಲ್ಲಿ ಪದೋನ್ನತಿಯೆ ಇಲ್ಲ ಎಂದು ಕೆಲವರು ಕೆಲಸಕ್ಕೆ ತಕ್ಕ ಸಂಬಳವಿಲ್ಲ ಎಂದು ಅಸಮಾಧಾನ ಸೂಚಿಸುವವರು ಇನ್ನುಳಿದವರು.

ಆಸೆಯೇ ದುಃಖದ ಮೂಲ ನಿಜ. ಆದರೆ ಹೊಸ ಹೊಸ ಶೋಧಗಳಿಗೂ ಅದೇ ಮೂಲ ಎನ್ನುವುದನ್ನು ಮರೆಯುವಂತಿಲ್ಲ. ಇದ್ದುದರಲ್ಲೆ ಸಂತೃಪ್ತಿಯನ್ನು ಸುಖವನ್ನು ಕಾಣುವ ಜನ ಇಲ್ಲವೆಂದಲ್ಲ , ಇದ್ದಾರೆ. ಆದರೆ ಅಂಥವರ ಸಂಖ್ಯೆ ನಗಣ್ಯವೆನಿಸುವಷ್ಟು ಕಡಿಮೆ. ಸದಾ ಹೆಚ್ಚಿನದನ್ನು ಸಂಪಾದಿಸುವ ಹವಣಿಕೆಯಲ್ಲೆ ಇರುವ ಜನರೆ ಹೆಚ್ಚು. ಅವರಿಗೆ ತಮ್ಮ ನೌಕರಿಯ ಬಗೆಗೂ ತೃಪ್ತಿಯಿಲ್ಲ, ಇದರಿಂದಾಗಿ ತಮಗೂ ತೃಪ್ತಿಯಿಲ್ಲ. ಇನ್ನು ಕೆಲವರಿದ್ದಾರೆ ಮಾಡುವ ಕೆಲಸದಲ್ಲಿ ತುಂಬಾ ಚತುರರು. ಆದರೆ ಹೊಸದೇನಾದರೂ ಮಾಡಬೇಕೆಂಬ ಲವಲವಿಕೆ. ನೌಕರಿಯಲ್ಲಿ ಅಂತಹ ಅವಕಾಶವಿಲ್ಲದ್ದರಿಂದ ಆಗಾಗ ನೌಕರಿಯನ್ನೇ ಬದಲಿಸುತ್ತಿರುತ್ತಾರೆ. ಇದರಿಂದಾಗಿ ಕಾಲಾಂತರದಲ್ಲವರು ವಿಶ್ವಾಸಾರ್ಹತೆಯನ್ನೇ ಕಳೆದುಕೊಳ್ಳುತ್ತಾರೆ. ಹೀಗಾಗಿ ಅವರ ಜೀವನದಲ್ಲಿ ಮತ್ತೆ ನಿರಾಶೆಯ ಅತೃಪ್ತಿಯ ಸರಣಿಯೆ ಪ್ರಾರಂಭವಾಗುತ್ತದೆ.

ಅಪೇಕ್ಷಿಸಿದ್ದೆಲ್ಲ ದೊರಕಿಯೇ ತೀರಬೇಕೆಂದಿಲ್ಲ. ಆಧರೆ ಈ ಸರಳ ಸತ್ಯವನ್ನು ತಿಳಿದುಕೊಂಡವರೇ ಕಡಿಮೆ. ತಾವು ಮಾಡುತ್ತಿರುವ ನೌಕರಿಯಲ್ಲಿ ತೃಪ್ತಿಯನ್ನು ಕಾಣದೆ ಸಿಗಬಹುದಾದ ಸುಖದಿಂದಲೂ ತಾವಾಗಿಯೇ ವಂಚಿತರಾಗುತ್ತಾರೆ. 'ದೂರದ ಬೆಟ್ಟ 'ಕಣ್ಣಿಗೆ ನುಣ್ಣಗೆ, ಎನ್ನುವ'ಹಾಗೆ ಇನ್ನೊಬ್ಬರು ಮಾಡುತ್ತಿರುವ ನೌಕರಿಯನ್ನು ಕಂಡೋ ಬೇರೊಬ್ಬರಿಗೆ ಪದೋನ್ನತಿ ದೊರೆತಿದ್ದನ್ನು ಕಂಡೋ ಕರುಬುವವರೆ ಹೆಚ್ಚು. ಆ ನೌಕರಿಯಲ್ಲಿ ನಿಹಿತವಾದ ತೊಂದರೆಗಳಾಗಲಿ ಅದರೊಟ್ಟಿಗೆ ಬರುವ ಉದ್ವಿಗ್ನತೆಯಾಗಲಿ ಇಂಥವರ ಗಮನಕ್ಕೆ ಬರುವುದೇ ಇಲ್ಲ.

ಇಂದಿನ ದಿನಗಳಲ್ಲಿ ನೌಕರಿ ದೊರೆಯುವುದು ಎಷ್ಟು ಕಷ್ಟ ಎನ್ನುವುದು ಬವಣೆಯನ್ನು ಅನುಭವಿಸುತ್ತಿರುವ ನಿರುದ್ಯೋಗಿಗೇ ಗೊತ್ತು. ಒಂದು ವೇಳೆ ನೌಕರಿ ದೊರೆತರೂ ಇಂದಿನ ಪರಿಸ್ಥಿತಿಯಲ್ಲಿ ಅದನ್ನು ಸರಿಯಾಗಿ ನಡೆಸಿಕೊಂಡು ಹೋಗುವುದು ಇನ್ನೂ ಕಷ್ಟ. ಪೆನ್‌ಶನ್ ಆದವರಲ್ಲಿ ಕೂಡ "ಹೇಗೋ ಪಾರಾಗಿ ಬಂದೆನಪ್ಪಾ" ಎನ್ನುವವರೇ ಹೆಚ್ಚು. ಇದ್ದುದರಲ್ಲಿಯೇ ಸುಖ ಕಾಣಬೇಕೆಂದರೆ ಸುತ್ತಮುತ್ತಲಿನ ಜನ ಹಾಗೆ ಮಾಡಲು ಬಿಡುವುದಿಲ್ಲ ಎನ್ನುವವರೂ ಇದ್ದಾರೆ. ಇಂಥವರಲ್ಲಿಯೂ ವೃತ್ತಿಯಲ್ಲಿ ತೃಪ್ತಿ ಕಾಣುವ ಜನರಿದ್ದಾರೆ. ಅವರ ಸಂಖ್ಯೆ ತೀರ ನಗಣ್ಯವಾಗಿರುವುದರಿಂದ ಅಂಥವರು ಇದ್ದದ್ದು ಸಹ ಬಹಳ ಜನರ ಗಮನಕ್ಕೆ ಬರುವುದಿಲ್ಲ.

ಬಹಳಷ್ಟು ಜನ ತಮ್ಮ ನೌಕರಿಯ ಬಗ್ಗೆ ಸದಾ ಗೊಣಗುತ್ತಲೇ ಇರುತ್ತಾರೆ. ರಾಜೀನಾಮೆ ಕೊಡುತ್ತೇನೆಂದು ಮೇಲಿಂದ ಮೇಲೆ ಬಡಾಯಿ ಕೊಚ್ಚಿಕೊಳ್ಳುತ್ತಾರೆ: ನೌಕರಿಯನ್ನು ಬಿಟ್ಟರೆ ಸಂಬಳಕ್ಕಿಂತ ಹೆಚ್ಚು ಹಣ ಬರುವ ಹೊಸ ಹೊಸ ಯೋಜನೆಗಳನ್ನು ಪ್ರತಿ ವರ್ಷವೂ ರೂಪಿಸಿ ಲಕ್ಷಾಧೀಶರಾಗುವ ಕನಸು ಕಾಣುತ್ತಾರೆ. ಕನಸು ಕಾಣುತ್ತಿರುವಾಗಲೇ ವರ್ಷ ಮುಗಿದು ಹೋಗುತ್ತದೆ. ಹೊಸ ವರ್ಷಕ್ಕಾಗಿ ಮತ್ತೊಂದು ಯೋಜನೆಯನ್ನು ರೂಪಿಸಲು ಪ್ರಾರಂಭಿಸುತ್ತಾರೆ. ಈ ತರಹದ ಜನರಿಗೆ ಬರಿ ಕನಸುಗಳನ್ನು ಕಾಣುವುದರಲ್ಲೇ ತೃಪ್ತಿ. ಹೀಗೆ ನೌಕರಿ ಬಿಡುತ್ತೇನೆಂದು ಹೇಳಿಕೊಳ್ಳುತ್ತಾ ಓಡಾಡುವ ಜನ ಅಕಸ್ಮಾತ್ತಾಗಿ ಅಂತಹ ಅಧಿಕಾರ ಸಿಕ್ಕರೆ ನಿವೃತ್ತಿಯ ನಿಯಮವನ್ನೇ ಕಿತ್ತೊಗೆದು ಕಾಯಂ ಆಗಿ ಹುದ್ದೆಗೆ ಅಂಟಿಕೊಳ್ಳಲು ಪ್ರಯತ್ನಿಸುತ್ತಾರೆಯೆ ವಿನಾ ನೌಕರಿಯನ್ನೆಂದೂ ಬಿಡುವುದಿಲ್ಲ.

ಸರಕಾರಿ ನೌಕರಿಯನ್ನೇ ಮಾಡಲಿ, ಖಾಸಗಿ ಕೆಲಸವನ್ನೇ ಮಾಡಲಿ, ಅವರಿಗೆ ತಮ್ಮ ಸಂಬಳ ಸಾರಿಗೆಗಳತ್ತಲೇ ಹೆಚ್ಚು ಗಮನ. ಇತ್ತಿತ್ತಲಾಗಿ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶಕ್ಕೆ ಬಂದು ದೊಡ್ಡ ಸಂಬಳ, ಆಕರ್ಷಕ ಭತ್ತೆಗಳನ್ನು ನೀಡುತ್ತಿವೆ. ಭವಿಷ್ಯತ್ತಿನಲ್ಲಿ ಇಂತಹ ನೌಕರಿಗಳ ಗತಿ ಏನಾಗುವುದೆಂಬುದು ಬೇರೆ ವಿಷಯ. ಆದರೆ ನಮ್ಮ ತರುಣ ಜನಾಂಗ ಈ ನೌಕರಿಗಳಿಗಾಗಿ ಶತಾಯ ಗತಾಯ ಪ್ರಯತ್ನಿಸುತ್ತಿರುವುದು ಸುಳ್ಳಲ್ಲ. ಒಟ್ಟಿನ ಮೇಲೆ ಹೇಳಬೇಕೆಂದರೆ ನೌಕರದಾರ ಯಾರೇ ಆಗಿರಲಿ ಉರ್ದು ಕವಿತೆಯ ಈ ನುಡಿಯನ್ನು ಗುಣಗುಣಿಸುವಂತಾಗಿದೆ.

''ಹೊಗಳಲೊ ತೆಗಳಲೋ ತಿಳಿಯದೋ ಅಣ್ಣಾ
ಬದುಕು ಸಿಕ್ಕಿದೆ ನನಗೆ ಬದುಕುವುದೆ ಕಠಿಣ." ✪

# ಧರ್ಮದಲ್ಲಿ ಮಾತೆ ಮರಿಯ

● ಜಾನ್ ಮಥಾಯಿಸ್

ಸೆಪ್ಟೆಂಬರ್ ೮, ಕ್ರೈಸ್ತರಿಗೊಂದು ಸುದಿನ. ಅಂದು ಕ್ರಿಸ್ತನ ತಾಯಿ ಮರಿಯಳ ಹುಟ್ಟುಹಬ್ಬ. ಆ ದಿನದಂದು ಕುಟುಂಬದ ಸದಸ್ಯರೆಲ್ಲರೂ ಒಂದೆಡೆ ಸೇರುತ್ತಾರೆ. ಬಲಿಪೂಜೆ ಪ್ರಾರ್ಥನಾ ವಿಧಿಗಳಲ್ಲಿ ಭಾಗವಹಿಸಿ ಮರಿಯಳಿಗೆ ನಮನ ಸಲ್ಲಿಸುತ್ತಾರೆ. ಕೊಂಕಣಿ ಕ್ರೈಸ್ತರು ಈ ಹಬ್ಬವನ್ನು 'ಮೋಂತಿ ಸಾಯ್ಬಿಣಿಚೆಂ ಪೆಸ್ತ್' ಎಂದು ವಿಶೇಷವಾಗಿ ಭಕ್ತಿಪೂರ್ವಕವಾಗಿ ಆಚರಿಸುತ್ತಾರೆ. ಇದನ್ನು 'ಹೊಸ ಅಕ್ಕಿ ಹಬ್ಬ' ಎಂದೂ ಕರೆಯುತ್ತಾರೆ.

ಈ ಮಾತೆ ಮರಿಯ ಕ್ರಿಶ್ಚಿಯನ್ ಧರ್ಮದಲ್ಲಷ್ಟೇ ಅಲ್ಲ, ಕುರಾನ್‌ನಲ್ಲೂ ಇಸ್ಲಾಂ ಧರ್ಮದಲ್ಲೂ ಪ್ರಾಮುಖ್ಯವನ್ನು ಪಡೆದಿದ್ದಾಳೆ ಎಂದರೆ ನೀವು ಅಚ್ಚರಿಪಡಬಹುದು. ಕುರಾನ್ ಮತ್ತು ಬೈಬಲ್‌ನ ಒಂದೊಂದೇ ಪುಟವನ್ನು ತಿರುವಿ ಹಾಕಿದಾಗ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳೆರಡರಲ್ಲೂ ಮಾತೆ ಮೇರಿಗೆ ಪೂರಕವಾಗಿರುವ ಅಂಶಗಳು ಕಂಡುಬರುತ್ತವೆ.

ಹಿಂದೆ ಸ್ತ್ರೀಯರಿಗೆ ಇಂದಿನಷ್ಟು ಸ್ವಾತಂತ್ರ್ಯವಾಗಲಿ, ಗೌರವವಾಗಲಿ ದಕ್ಕುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಬರೆಯಲ್ಪಟ್ಟ ಕುರಾನ್‌ನಲ್ಲಿ ಮರಿಯಳ ಬಗ್ಗೆ ಪ್ರಸ್ತಾಪಿಸಿರುವುದು ಕಂಡಾಗ ಆಕೆ ಅಷ್ಟೊಂದು ಪ್ರಾಮುಖ್ಯವನ್ನು ಪಡೆಯಲು ಕಾರಣಗಳೇನು? ಎಂಬ ಸಂಶಯ ಕಾಡದೆ ಇರಲಾರದು.

## ಯಾರೀಕೆ ?

ಕುರಾನ್‌ನಲ್ಲಿ ಮರಿಯಳನ್ನು 'ಮರ್ಯಮ್' ಎಂದು ಕರೆಯಲಾಗಿದೆ. ಅದರಲ್ಲಿ ಆಕೆಯನ್ನು "ಯಾ ಉಖ್ತ್ ಹಾರೋನ್ ಸುರಃ ಮರ್ಯಮ್" (ಓ ಹಾರೋನನ ಸಹೋದರಿಯೆ) ಎಂದು ಉಲ್ಲೇಖಿಸಲಾಗಿದೆ. ಪ್ರತಿ ಉಲ್ಲೇಖದಲ್ಲೂ ಈ ಮರ್ಯಮ್ ಯೇಸುವಿನ ತಾಯಿಯಾದ ಮರಿಯಳನ್ನೇ ಹೋಲುತ್ತಾಳೆ. (ಬೈಬಲ್‌ನ ಹಳೇ ಒಡಂಬಡಿಕೆಯಲ್ಲಿ ಮೋಶೆ ಮತ್ತು ಆರೋನರಿಗೆ 'ಮಿರಿಯಮ್' ಎಂಬ ಸಹೋದರಿ ಇದ್ದುದಾಗಿ ಪ್ರಸ್ತಾಪವಿದೆ) ಈ ವಿಷಯವನ್ನು ವಿಮರ್ಶಿಸುತ್ತಾ ಕುರಾನ್ ಪರಿಣತರಾದ 'ಅಲ್ ಬೈಧಾವಿ' ಹೀಗೆನ್ನುತ್ತಾರೆ: "ಹಾರೋನನಿಗೂ ಮರ್ಯಮ್‌ಳಿಗೂ ಮಧ್ಯೆ ಸಾವಿರಾರು ವರ್ಷಗಳ ವ್ಯತ್ಯಾಸವಿದೆ. ಹಾರೋನನ ಸಹೋದರಿ ಎಂದ ಮಾತ್ರಕ್ಕೆ ಅವಳು ಸಹೋದರಿಯಾಗಬೇಕಿಲ್ಲ. ಯೇಸುಕ್ರಿಸ್ತರನ್ನು ನಾವು ದಾವಿದ ಪುತ್ರರೆಂದು ಕರೆಯುವುದಿಲ್ಲವೇ?"

ಮರ್ಯಮ್‌ಳ ತಂದೆಯ ಹೆಸರು ಇಮ್ರಾನ್ ಎಂದು ಕುರಾನ್ ತಿಳಿಸುತ್ತದೆಯಾದರೂ ಅವಳ ತಾಯಿಯ ಹೆಸರನ್ನು ಅದು ಹೇಳಿಲ್ಲ. ಆದರೆ ಕುರಾನ್ ಪಂಡಿತರು ಮತ್ತು ಅರಬ್ ಇತಿಹಾಸಕಾರರ ಪ್ರಕಾರ ಮರ್ಯಮ್‌ಳ ತಾಯಿಯ ಹೆಸರು ಹನ್ನಾ.

ಒಂದು ದಿನ ಹನ್ನಾ ಮರದ ನೆರಳಿನಲ್ಲಿ

---

**ಕುರಾನ್ ಪ್ರಕಾರ ಮೇರಿ ಅಥವಾ ಮರ್ಯಮ್**
**ಓರ್ವ ಅಸಾಧಾರಣ ಸ್ತ್ರೀ.**
**ಬೇರಾವ ಸ್ತ್ರೀಯೂ ಪಡೆಯದ ವರಗಳನ್ನು ದೇವರಿಂದ ಪಡೆದ ಭಾಗ್ಯವಂತೆ. ಆಕೆ ಪೂಜ್ಯಳು ಮಾತ್ರವಲ್ಲ, ಶ್ರೇಷ್ಠಳು.**

---

ವಿರಮಿಸುತ್ತಿದ್ದಾಗ ಆಕೆಯ ದೃಷ್ಟಿ ಮರದಲ್ಲಿದ್ದ ಗೂಡಿನ ಮೇಲೆ ಬೀಳುತ್ತದೆ. ಹಕ್ಕಿಯೊಂದು ಮರಿಗಳಿಗೆ ಗುಟುಕು ಕೊಡುವ ದೃಶ್ಯ ಅವಳಿಗೆ ತನ್ನ ಬಂಜೆತನವನ್ನು ನೆನಪಿಸುತ್ತದೆ. ಹತಾಶೆಯಿಂದ ದೇವಾಲಯಕ್ಕೆ ಬಂದ ಹನ್ನಾ ತಾನೊಂದು ಮಗುವಿನ ತಾಯಾಗುವ ಭಾಗ್ಯವನ್ನು ಕರುಣಿಸುವಂತೆ ದೇವರಲ್ಲಿ ಮೊರೆ ಹೋಗುತ್ತಾಳೆ. ಅಷ್ಟೇ ಅಲ್ಲದೆ ಮಗುವನ್ನು ದೇವರ ಸೇವೆಗೆ ಸಮರ್ಪಿಸುವ ಹರಕೆ ಹೊರುತ್ತಾಳೆ. ದಿನಗಳೆದಂತೆ ಗರ್ಭಿಣಿಯಾದ ಹನ್ನಾ ಹೆಣ್ಣು ಮಗುವೊಂದಕ್ಕೆ ಜನ್ಮ ನೀಡುತ್ತಾಳೆ. ತಾಯ್ತನ ಪ್ರಾಪ್ತವಾದರೂ ತನಗೆ ಹುಟ್ಟಿದ ಮಗು ಹೆಣ್ಣಾದದ್ದು ಆಕೆಗೆ ಬೇಸರ. ಹರಕೆಯನ್ನು ತೀರಿಸಲೇಬೇಕಾದ್ದರಿಂದ ಎಲ್ಲಾ ದೇವರ ಇಚ್ಛೆ ಎಂದೆಣಿಸಿ ಮಗುವನ್ನು ಬಟ್ಟೆಯಲ್ಲಿ ಸುತ್ತಿ ದೇವಾಲಯಕ್ಕೆ ತಂದರೆ ಅಲ್ಲಿನ ಯಹೂದ್ಯ ಗುರುಗಳು ಮಗು ಹೆಣ್ಣೆಂದು ಹಿಂಜರಿಯುತ್ತಾರೆ. ಹನ್ನಾ ಪರಿಪರಿಯಾಗಿ ಕೇಳಿಕೊಳ್ಳುತ್ತಾಳೆ, ಕಣ್ಣೀರಿಡುತ್ತಾಳೆ. ಕೊನೆಗೂ ಮಗುವನ್ನು ಸ್ವೀಕರಿಸಿ ಅದರ ಪಾಲನೆ-ಪೋಷಣೆಗೆ ತಮ್ಮಲ್ಲಿ ಯಾರೆಂಬುದನ್ನು ನಿರ್ಣಯಿಸಲು ಚೀಟಿ ಎತ್ತಿದಾಗ ಅದು ಜಕಾರಿಯನ ಪಾಲಿಗೆ ಬರುತ್ತದೆ. ಆತ ಮಗು ಮರಿಯಮ್‌ಳನ್ನು ಜೋಪಾನವಾಗಿ ಸಲಹಿ ನಂತರ ಯುರಾಯಿ (ಕ್ರೈಸ್ತ ಧರ್ಮದಲ್ಲಿ ಜೋಸೆಫ್)ಗೆ ವಿವಾಹ ಮಾಡಿದ ಎಂಬುದು ಅವರ ವಾದ.

ಕುರಾನ್ ಪ್ರಕಾರ ಮೇರಿ (ಮರ್ಯಮ್) ಓರ್ವ ಅಸಾಧಾರಣ ಸ್ತ್ರೀ. ಬೇರಾವ ಸ್ತ್ರೀಯು ಪಡೆಯದ ವರಗಳನ್ನು ದೇವರಿಂದ ಪಡೆದ ಭಾಗ್ಯವಂತೆ. ಹನ್ನಾಳ ಪ್ರಾರ್ಥನೆಯ ಫಲವಾಗಿ ಆಕೆ ದೇವರಿಂದ ಪಡೆದ ಅಸಾಮಾನ್ಯ ವರದ ಬಲದಿಂದ ಸೈತಾನನ ಪಾಪಮಯ ಕೈಗೆ ಸಿಲುಕದೆ ಜನಿಸಿದ ಈಕೆ ಪಾಪರಹಿತೆ. ದೈವಬಲದಿಂದ ಮರ್ಯಮ್ ಪ್ರಾಮುಖ್ಯ ಪಡೆದವಳಾದ್ದರಿಂದ ಆಕೆ ಪೂಜ್ಯಳು ಮಾತ್ರವಲ್ಲ ಶ್ರೇಷ್ಠಳು ಎಂದು ಕುರಾನ್ ಒತ್ತಿ ಹೇಳುತ್ತದೆ.

## ಮುಸ್ಲಿಂ ರೂಢಿಯಲ್ಲಿ...

ಮರ್ಯಮ್‌ಳ ಹೆಸರನ್ನು ಅನೇಕ ಮುಸ್ಲಿಂ ಹೆಣ್ಣುಮಕ್ಕಳಿಗೆ ಇಡಲಾಗಿದೆ. ಸುಖ ಪ್ರಸವಕ್ಕಾಗಿ ಮುಸ್ಲಿಂ ಸ್ತ್ರೀಯರು ಮರ್ಯಮ್‌ಳ (ಮೇರಿ) ಸಹಾಯ ಕೋರುತ್ತಾರೆ. ಪ್ರಸವವೇದನೆ ಅನುಭವಿಸುತ್ತಿರುವ ಮುಸ್ಲಿಂ ಸ್ತ್ರೀಯರಿಗೆ 'ಮರ್ಯಮ್-ಕಾ-ಪಾಂಜಾ' ಅಥವಾ 'ಪಾಂಜಾ-ವಿ-ಮರ್ಯಮ್' ಎಂಬ ಒಂದು ಬಗೆಯ ಕೈಬೆರಳುಗಳು ಪರಸ್ಪರ ಕೂಡಿಕೊಂಡಂತೆ ಕಾಣುವ ಸುವಾಸನೆಯುಳ್ಳ ಹುಲ್ಲನ್ನು ಅದ್ದಿದ ನೀರನ್ನು ಕುಡಿಸುತ್ತಾರೆ. ಇದರಿಂದ ಹೆರಿಗೆ ಸುಗಮವಾಗುವುದೆಂದು ಅವರ ನಂಬಿಕೆ. ಏಕೆಂದರೆ ತನ್ನ ಪುತ್ರನಿಗೆ ಜನ್ಮವೀಯುವುದಕ್ಕೆ ಮೊದಲು ಮರಿಯಮ್ ಇದೇ ಹುಲ್ಲನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳೆಂದೂ, ಆದುದರಿಂದಲೇ ಆಕೆಯ ಬೆರಳಗುರುತು ಅದರ ಮೇಲೆ ಮೂಡಿತೆಂದೂ ಮುಸ್ಲಿಮರ ನಂಬಿಕೆ.

## ರಾಜರಿಂದ ಗೌರವ

ಅಕ್ಬರನನ್ನು ಭೇಟಿ ಮಾಡಿದ 'ಯೇಸು ಸಭೆ'ಯ ಇಬ್ಬರು ಗುರುಗಳು ಅವನಿಗೆ ಯೇಸುವಿನ ಮತ್ತು ಕನ್ಯಾಮರಿಯಮ್ಮನವರ ಭಾವಚಿತ್ರಗಳನ್ನು ಉಡುಗೊರೆಯನ್ನಾಗಿ ನೀಡಿದ್ದರು. ೧೫೮೦ರಲ್ಲಿ ಕ್ರೈಸ್ತರು ಮೇರಿಯ ಸ್ವರ್ಗಾರೋಹಣ ಹಬ್ಬವನ್ನು ಕೊಂಡಾಡುತ್ತಿದ್ದರೆಂದು ತಿಳಿದ ಅಕ್ಬರ್ ಮೇರಿಯ ಭಾವಚಿತ್ರವನ್ನು ಎತ್ತರದ ಆಸನದ ಮೇಲಿಟ್ಟು, ಅದಕ್ಕೆ ಆತನೂ, ಆತನ ಹಿರಿಯ ಮಗನೂ ಸೇರಿ ಸಭಾಸದರೆಲ್ಲರೊಡನೆ ವಿಶಿಷ್ಟ ರೀತಿಯ ಗೌರವ ಸಲ್ಲಿಸುತ್ತಿದ್ದನು.

ಜಹಾಂಗೀರ್ ಚಕ್ರವರ್ತಿಯಂತೂ ಮೇರಿ ಮತ್ತು ಯೇಸುವಿನ ಭಾವಚಿತ್ರಗಳನ್ನು ಆಗ್ರಾದಲ್ಲಿದ್ದ ತನ್ನ ಅರಮನೆಯ ಗೋಡೆಗಳ ಮೇಲೆ ಬಿಡಿಸುವಂತೆ ಆದೇಶ ನೀಡಿದ್ದನು.

ಅದೇನೇ ಇರಲಿ, ಜಗತ್ತಿನಾದ್ಯಂತ ಕ್ರೈಸ್ತ ಭಕ್ತರ ಹೃದಯಾಂತರಾಳದಿಂದ ಹೊರಹೊಮ್ಮುವ "ನಮೋ ಮರಿಯ ಪ್ರಸಾದ ಪೂರ್ಣೆ" ಎಂಬ ಪ್ರಾರ್ಥನೆಯಲ್ಲಿ ಮರಿಯ ನಿತ್ಯ ನಾಲಗೆಯ ಮೇಲೆ ಕುಣಿಯುತ್ತಿರುತ್ತಾಳೆ.



ಒಂದು ನೈಜ ಘಟನೆ

# ಸಂಶಯ ಪಿಶಾಚಿ

ಕೆಲವರು "ಅವನಿಗೆ ಕೆಟ್ಟ ಗಾಳಿ ಹಿಡಿದಿದೆ" ಎಂದರು. ಗಾಳಿ ಬಿಡಿಸುವವರನ್ನು, ಮಾಟ-ಮದ್ದು ತೆಗೆಯುವವರನ್ನು ಕರೆತರಲಾಯಿತು. ಜನ ಹೇಳಿದ್ದನ್ನೆಲ್ಲ ಅವನ ತಂದೆ-ತಾಯಿಗಳು ಮಾಡಿದರು. ಆದರೆ ರವಿಯ ರೋಗ ಉಲ್ಬಣ ಗೊಳ್ಳುತ್ತಲೇ ಹೋಯಿತು.

- ಡಾ. ಕೆ.ಎಂ. ಧ್ರುವಕುಮಾರ್

'ವೈದ್ಯ ದೇವೋಭವ' ಎಂಬ ನಾಣ್ಣುಡಿಯನ್ನು ನಾವು ಆಗಾಗ್ಗೆ ಕೇಳುತ್ತಲೇ ಇರುತ್ತೇವೆ. ಈ ನಾಣ್ಣುಡಿ ಸಮಾಜದಲ್ಲಿ ವೈದ್ಯರ ಬಗ್ಗೆ ಇರುವ ಭಾವನೆಯನ್ನು ಎತ್ತಿತೋರುತ್ತದೆ. ಜನರಿಗೆ ವೈದ್ಯನು ಏನನ್ನಾದರೂ ಗುಣಪಡಿಸಬಲ್ಲ ಎಂಬ ಅಪಾರ ನಂಬಿಕೆ ಇರುತ್ತದೆ. ಉದಾಸೀನತೆಯಿಂದ ರೋಗವನ್ನು ಕಡೆಗಣಿಸಿ, ಕಡೆಗೆ ವೈದ್ಯನೂ ಏನೂ ಮಾಡಲಾಗದ ಪರಿಸ್ಥಿತಿ ನಿರ್ಮಿಸಿ, ಅವನನ್ನು ನಿಂದಿಸುವ ಸಂದರ್ಭಗಳೂ ಉಂಟು. ಆದರೆ ವೈದ್ಯನೇನೂ ದೇವರಲ್ಲ. ವೈಜ್ಞಾನಿಕವಾಗಿ ಏನು ಮಾಡಲು ಸಾಧ್ಯವೋ ಅಷ್ಟನ್ನು ಮಾತ್ರ ಆತ ಮಾಡಬಲ್ಲ. ಕೆಲವುಬಾರಿ ಜನರಿಗೆ ಇದನ್ನು ಒಪ್ಪಿಕೊಳ್ಳಲು ಕಷ್ಟವಾಗುತ್ತದೆ.

ಸಂಪೂರ್ಣವಾಗಿ, ತೃಪ್ತಿಕರವಾಗಿ ರೋಗಮುಕ್ತನಾದ ವ್ಯಕ್ತಿಯೊಬ್ಬ ಇನ್ನೊಬ್ಬ ರೋಗಿಯನ್ನು ತನ್ನ ವೈದ್ಯರಲ್ಲಿಗೆ ಕಳುಹಿಸುವುದು ಸಾಮಾನ್ಯ. ಇದೇ ರೀತಿ ನನ್ನ ಹಳೆಯ ರೋಗಿಯ ಹೆಸರು ಹೇಳಿಕೊಂಡು ಒಮ್ಮೆ ದೂರವಾಣಿ ಕರೆಯೊಂದು ಬಂದಿತು. ಅದರಿಂದ ವಿವರಗಳನ್ನು ತಿಳಿದ ನಾನು ರೋಗ ತೀರ ಉಲ್ಬಣಾವಸ್ಥೆಯಲ್ಲಿದೆಯೆಂದೂ ಕೂಡಲೇ ರೋಗಿಯನ್ನು ನರ್ಸಿಂಗ್ ಹೋಂಗೆ ಕರೆತರಬೇಕೆಂದೂ ಸೂಚಿಸಿದೆ. ರೋಗಿ ಬಸ್ಸಿನಲ್ಲಿ ಬರುವ ಸ್ಥಿತಿಯಲ್ಲಿರಲಿಲ್ಲವಾದ್ದರಿಂದ ಟ್ಯಾಕ್ಸಿಯಲ್ಲಿ ಬೆಳಿಗ್ಗೆ ಹನ್ನೊಂದರ ಸುಮಾರಿಗೆ ಕರೆತರಲಾಯಿತು.

ರವಿಗೆ ಮೂವತ್ತೆರಡು ವಯಸ್ಸು. ಮದುವೆಯಾಗಿ ಒಬ್ಬ ಮಗನಿದ್ದಾನೆ. ಅವನದು ಬಟ್ಟೆಯ ವ್ಯಾಪಾರ. ಅವನ ಜೊತೆಯಲ್ಲಿ ಸುಮಾರು

ಏಳೆಂಟು ಜನರು ಬಂದಿದ್ದರು. ಎಲ್ಲರ ಮುಖದಲ್ಲೂ ದುಗುಡವಿತ್ತು. ಪದೇ ಪದೇ ಕಣ್ಣೀರು ಒಸರುತ್ತಿತ್ತು.

ರವಿಯ ಸಮಸ್ಯೆ ಸುಮಾರು ನಾಲ್ಕು ತಿಂಗಳ ಹಿಂದೆ ಪ್ರಾರಂಭವಾಯಿತು. ಮೊದಲಿಗೆ ಭಯ. ನಂತರ ನಿದ್ರಾಹೀನ ಸ್ಥಿತಿ. ಕ್ರಮೇಣ ತನ್ನನ್ನು ಯಾರೋ ಕೊಲ್ಲಲು ಪ್ರಯತ್ನಿಸುತ್ತಿರುವರೆಂದು ಹೇಳಲಾರಂಭಿಸಿದ್ದ. ಮೊದಮೊದಲು ಅವನ ಪತ್ನಿ ಏನೂ ಹೇಳದೆ ಸುಮ್ಮನಿದ್ದುಬಿಡುತ್ತಿದ್ದಳು. ಪರಿಸ್ಥಿತಿ ಬಿಗಡಾಯಿಸಿದ ನಂತರ, "ನಿಮ್ಮನ್ನು ಯಾರೂ ಕೊಲ್ಲುವುದಿಲ್ಲ; ಭಯಪಡಬೇಡಿ" ಎಂದು ಸಮಾಧಾನ ಹೇಳುತ್ತಿದ್ದಳು. ಮೊದಲು ರವಿಗೆ ಇಷ್ಟರಿಂದ ಸಮಾಧಾನವಾಗುತ್ತಿತ್ತು. ಕ್ರಮೇಣ ಪತ್ನಿಯ ಸಮಾಧಾನ ಸಾಲಲಿಲ್ಲ. ರಾತ್ರಿಯೆಲ್ಲ ದೀಪಗಳನ್ನು ಆರಿಸುವುದಕ್ಕೆ ಬಿಡುತ್ತಿರಲಿಲ್ಲ. ದಿನಗಳುರುಳುತ್ತ ಅದೂ ಸಾಲದಾಯಿತು. ರಾತ್ರಿಯೆಲ್ಲಾ ಮಲಗುತ್ತಿರಲಿಲ್ಲ ಮತ್ತು ಪತ್ನಿಯನ್ನೂ ಮಲಗಲು ಬಿಡುತ್ತಿರಲಿಲ್ಲ. ಕಿಟಕಿಗಳನ್ನೆಲ್ಲ ಬಟ್ಟೆಗಳಿಂದ ಮುಚ್ಚುವನು. ಬಾಗಿಲಿನ ಕೀಲಿಯ ಸಂದಿಯನ್ನು ಕೂಡ ಮುಚ್ಚುವನು. ಯಾರೋ ಎಲ್ಲವನ್ನೂ ನೋಡುತ್ತಿದ್ದು ಸಮಯ ನೋಡಿ ತನ್ನನ್ನು ಮುಗಿಸಿಬಿಡುವರೆಂಬ ಭಯ ಆತನಿಗೆ.

ತಾನು ಮಾಡುವ ಪ್ರಯತ್ನಗಳೆಲ್ಲವೂ ವಿಫಲವಾದಾಗ ಅವನ ಪತ್ನಿ ಕುಟುಂಬದ ಎಲ್ಲಾ ಸದಸ್ಯರ ಗಮನಕ್ಕೆ ಈ ಸಮಸ್ಯೆಯನ್ನು ತಂದಳು.

ನಮ್ಮ ಜನರಲ್ಲಿ ಬುದ್ಧಿವಾದ ಹೇಳುವವರ ಕೊರತೆ ಇಲ್ಲ. ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳದೇ ಬುದ್ಧಿವಾದ ಹೇಳುತ್ತಾರೆ. ರವಿ ಸಣ್ಣಕ್ಕಿದ್ದರೂ ಬಲಶಾಲಿಯಾದ್ದರಿಂದ ಹೆದರುವ ಅವಶ್ಯಕತೆಯಿಲ್ಲವೆಂದು ಕೆಲವರು ಹೇಳಿದರೆ, ಮತ್ತೆ ಕೆಲವರು, "ನಾವೆಲ್ಲರೂ ಇರಬೇಕಾದರೆ ನಿನಗೆಂತಹ ಭಯ?" ಎಂದು ಕೇಳುವರು. ಇನ್ನು ಕೆಲವರು. ರವಿ ಬಹಳ ಒಳ್ಳೆಯ ಮನುಷ್ಯನಾದ್ದರಿಂದ ಅವನಿಗೆ ಶತ್ರುಗಳೇ ಇಲ್ಲವೆಂದರೆ, ಮತ್ತೆ ಕೆಲವರು, "ನೀನೇನು ಹೆಣ್ಣಲ್ಲ, ಗಂಡಸು; ಭಯಪಡುವುದೆಂದರೇನು?" ಎನ್ನುವರು. ಇಂತಹ ಬುದ್ಧಿವಾದ ಮತ್ತು ಆಶ್ವಾಸನೆಗಳು ಅವನಿಗೆ ಎಲ್ಲಾ ವಿಧದಲ್ಲೂ ದೊರೆತವು. ಆದರೂ ಅವನ ಸಂಶಯ ಹೆಚ್ಚಾಗುತ್ತಲೇ ಇತ್ತು.

ತಾನೊಬ್ಬನೇ ಇದ್ದಾಗ ರವಿಗೆ ಭಯಂಕರ ಧ್ವನಿಗಳು ಕೇಳಲು ಪ್ರಾರಂಭವಾಯಿತು. ಈ ಧ್ವನಿಗಳು "ನಿನ್ನ ಕಥೆ ಮುಗಿಯಿತು" ಎನ್ನುವವು. ರವಿಯ ಭಯಕ್ಕೆ ಎಲ್ಲೆ ಇಲ್ಲದಂತಾಯಿತು. ದೇವರು ಮುನಿಸಿಕೊಂಡರೆ ಹೀಗಾಗುವುದೆಂದು ಯಾರೋ ಹೇಳಿದಾಗ ರವಿಯ ತಂದೆ, ತಾಯಿಗಳು ಹೋಮ, ಪೂಜೆ ಇತ್ಯಾದಿಗಳನ್ನು ಮಾಡಿದರು. ಆದರೆ ಪ್ರಯೋಜನವಾಗಲಿಲ್ಲ.

ಕೆಲವರು ಅವನಿಗೆ ಕೆಟ್ಟ ಗಾಳಿ ಹಿಡಿದಿದೆ ಎಂದರು. ಗಾಳಿ ಬಿಡಿಸುವವರನ್ನು, ಮಾಟ-ಮದ್ದು ತೆಗೆಯುವವರನ್ನು ಕರೆತರಲಾಯಿತು. ಜನ ಹೇಳಿದ್ದನ್ನೆಲ್ಲ ಅವನ ತಂದೆ-ತಾಯಿಗಳು ಮಾಡಿದರು. ರವಿಯ ರೋಗ ಉಲ್ಬಣಗೊಳ್ಳುತ್ತಲೇ ಹೋಯಿತು. ಯಾರದೋ ಸಲಹೆಯ ಪ್ರಕಾರ ರವಿಯು ಯಾರು ತನ್ನನ್ನು ಕೊಲ್ಲುತ್ತಾರೆ ಎಂದು ಹೇಳುವನೋ ಅವರ ಬಳಿಗೆ ಕರೆದೊಯ್ದು ಅವನ ಮೇಲೆ ದ್ವೇಷವಿಲ್ಲವೆಂದು ಹೇಳಿಸಿದರು. ಹೀಗೆ ಮಾಡಿದಾಗ ರವಿ ಎರಡು ದಿನ ಸರಿಯಾಗಿದ್ದ. ಆಗ ಆ ಸಂಸಾರದ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಕಡೆಗೂ ಸಮಸ್ಯೆಗೆ ಪರಿಹಾರ ಕಂಡುಹಿಡಿದೆವೆಂದು ಮನೆಯ ಜನರೆಲ್ಲ ಹಿಗ್ಗಿದರು. ಅವರ ಸಂತೋಷ ಎರಡು ದಿನದ್ದು ಮಾತ್ರ. ಮೂರನೇ ದಿನ ರವಿಯು ಬೇರೊಬ್ಬರ ಹೆಸರನ್ನು ಹೇಳಿ ಅವರು ತನ್ನನ್ನು ಕೊಲ್ಲುತ್ತಾರೆಂದು ಹೇಳಲಾರಂಭಿಸಿದನು. ರವಿಯನ್ನು ಅವರಲ್ಲಿಗೆ ಕರೆದುಕೊಂಡು ಹೋಗಿ ಆಶ್ವಾಸನೆ ಕೊಡಿಸಿದರು. ಮತ್ತೆರಡು ದಿನಗಳ ನಂತರ ಇನ್ನೊಬ್ಬರ ಮೇಲೆ ಆರೋಪಿಸುವನು. ಇದೇ ರೀತಿ ಅನೇಕ ಜನರಲ್ಲಿಗೆ ಅವನನ್ನು ಕರೆದುಕೊಂಡು ಹೋದರೂ ಉಪಯೋಗವಾಗಲಿಲ್ಲ. ಅವನ ಸಂಶಯ ಬೇರೆಯವರ ಮೇಲೆ ತಿರುಗುವುದು. ಇದರಿಂದಾಗಿ ಎಲ್ಲರೂ ಬೇಸತ್ತು ಕಡೆಗೆ ರವಿಯನ್ನು ನನ್ನಲ್ಲಿಗೆ ಕರೆತರಲು ನಿರ್ಧರಿಸಿದರು.

ಬಹಳ ಹಿಂದೆಯೇ ನನ್ನನ್ನು ನೋಡುವಂತೆ ನನ್ನ ಹಳೆಯ ರೋಗಿ ತಿಳಿಸಿದ್ದರೂ ಅವರಿಗೆ ಒಂದು ರೀತಿಯ ಅಂಜಿಕೆ. ಅವರೆಲ್ಲರಿಗೂ ಇದು

ರೋಗವಲ್ಲವೆಂದು ಒಂದು ಕಡೆ ಅನ್ನಿಸಿದ್ದರೆ ಮನೋರೋಗ ತಜ್ಞರಿಗೆ ತೋರಿಸಿದರೆ ರವಿಗೆ ಹುಚ್ಚು ಎಂದು ಜನ ಆಡಿಕೊಳ್ಳುವರು ಎಂಬ ಅಳುಕು ಮತ್ತೊಂದು ಕಡೆ. ತಾವೇ ಸರಿಮಾಡಿ ಕೊಂಡುಬಿಡೋಣ ಎಂಬ ಭಾವನೆಯಿಂದ ನಿಧಾ ನಿಸಿದರು. ಪರಿಸ್ಥಿತಿ ಕೈ ಮೀರಿದಾಗ ಆ ರಾತ್ರಿ ಮನೆಯಲ್ಲಿ ಎಲ್ಲರೂ ಸೇರಿ, ವಿಚಾರ- ವಿನಿಮಯ ನಡೆಸಿ, ಮಾರನೇ ದಿನ ರವಿಯನ್ನು ನನ್ನಲ್ಲಿಗೆ ಕರೆತರಲು ನಿರ್ಧರಿಸಿದರು. ನಂತರ ರವಿಯ ರೋಗ ಬಹಳ ಉಲ್ಬಣವಾಯಿತು. ಅವನಿಗೆ ಧ್ವನಿಗಳ ಕಾಟ ಹೆಚ್ಚಾಯಿತು. ಭಯದಿಂದ ಧ್ವನಿ ಗಳು ಬರುವ ದಿಕ್ಕಿಗೆ ಕೈಗೆ ಸಿಕ್ಕ ವಸ್ತುಗಳನ್ನು ಎಸೆಯಲಾರಂಭಿಸಿದ.

ಎಲ್ಲರೂ ಸೇರಿ ಒಂದು ಕೊಠಡಿಯನ್ನು ಖಾಲಿ ಮಾಡಿ ರವಿಯನ್ನು ಅದರಲ್ಲಿ ಕೂಡಿಹಾಕಿದರು. ಸುಮಾರು ಮಧ್ಯರಾತ್ರಿಯ ವೇಳೆಗೆ ಕೊಠಡಿಯಿಂದ ಬಹಳ ಬಿರುಸಾದ ಶಬ್ದವಾಯಿತು. ಅವನಿರುವ ಪರಿಸ್ಥಿತಿಯಲ್ಲಿ ಕೊಠಡಿಯೊಳಗೆ ಹೋಗಲು ಎಲ್ಲ ರಿಗೂ ಭಯ. ಮಾರನೇ ದಿನ ಕೆಲವು ಜನರನ್ನು ಸೇರಿಸಿ ಬಾಗಿಲನ್ನು ತೆರೆದಾಗ ರವಿ ನೆಲದ ಮೇಲೆ ಬಿದ್ದಿದ್ದ. ಕೇಳಿದಾಗ ಕತ್ತು ನೋವೆಂದು ಹೇಳಿದನೇ ಹೊರತು ನೆಲಬಿಟ್ಟು ಮೇಲೇಳಲಿಲ್ಲ. ಕಾಫಿ ಕೊಟ್ಟರೂ ಅವನಿಗೆ ಕುಡಿಯಲಾಗಲಿಲ್ಲ, ನಂತರ ಟ್ಯಾಕ್ಸಿಯಲ್ಲಿ ಅವನನ್ನು ಬೆಂಗಳೂರಿಗೆ ಕರೆತಂದರು.

ರವಿಯನ್ನು ನರ್ಸಿಂಗ್ ಹೋಮ್‌ನಲ್ಲಿ ಮಾತ ನಾಡಿಸಿದೆ. ನನ್ನನ್ನು ಮುಗುಳ್ನಗೆಯಿಂದಲೇ ಸ್ವಾಗತಿ ಸಿದ. ತನ್ನ ಜೀವ ಅಪಾಯದಲ್ಲಿದೆಯೆಂದೂ ನಾನು ಅವನ ರಕ್ಷಣೆಗೆ ವ್ಯವಸ್ಥೆ ಮಾಡಬೇಕೆಂದೂ ಹೇಳಿದ. ಕೆಲವರು ತನ್ನನ್ನು ಮುಗಿಸಲು ಹೊಂಚು ಹಾಕಿದ್ದಾ ರೆಂದೂ ಹೇಳಿದ. ಕೆಲವೊಮ್ಮೆ "ನಿನ್ನ ಕಥೆ ಮುಗಿಯಿತು," ಎಂಬ ಧ್ವನಿ ಕೇಳುತ್ತಿದ್ದು ತನಗೆ ಚಿಕ್ಕ ವಯಸ್ಸಿನ ಮಗ ಮತ್ತು ಹೆಂಡತಿಯಿದ್ದು ಅವರನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂಬ ಆಸೆ ಯನ್ನು ಈ ಜನ ನೆರವೇರಲು ಬಿಡುವುದಿಲ್ಲ ಎಂದೂ ಹೇಳಿದ. ಆ ಜನರನ್ನು ತನ್ನ ಪಕ್ಕದ ಮಂಚದಲ್ಲಿರುವವರೇ ಕಳುಹಿಸಿರುವರೆಂದೂ, ನಾನು ಹೋದ ಮೇಲೆ ತನ್ನನ್ನು ಮುಗಿಸಿಬಿಡುವ ರೆಂದೂ ಹೇಳಿದ. ಇದರ ಹಿಂದೆ ಭಾರೀ ದೊಡ್ಡ ಗುಂಪು ಇರುವುದೆಂಬ ಅನುಮಾನ ಆತನದು. ದೂರದರ್ಶನದಲ್ಲಿ ತನ್ನ ಕಥೆಯನ್ನೆಲ್ಲಾ ಪ್ರಸಾರ ಮಾಡಲಾಗುವುದು ಎಂದ. ದೂರದರ್ಶನದಲ್ಲಿ ಬರುವ ಜನರು ತನ್ನನ್ನು ನೋಡಲು ಸಾಧ್ಯವಿದೆ ಯೆಂದು ಅದನ್ನು ಆರಿಸಿಬಿಡುತ್ತಿದ್ದ.

ರಾತ್ರಿ ಕಾಲದಲ್ಲಿ ಮನೆಯ ಛಾವಣಿಯ ಮೇಲೆ ಜನರು ಓಡಾಡುವುದು ಗೊತ್ತಾಗುತ್ತದೆ ಎಂದ. ಮನೆಯವರು ಅವನನ್ನು ಛಾವಣಿಯ ಮೇಲೆ ಕರೆದುಕೊಂಡು ಹೋಗಿ ಅಲ್ಲಿ ಯಾರೂ ಇಲ್ಲ ವೆಂದು ರುಜುವಾತುಪಡಿಸಿದ್ದರೂ ಪ್ರಯೋಜನವಾ ಗಿರಲಿಲ್ಲ. ಸ್ನಾನಕ್ಕೆ ಹೋದರೆ ಗೋಡೆಗಳಿಗೆಲ್ಲ ಕಣ್ಣವೆಯೆಂದೂ ಯಾರೋ ತನ್ನನ್ನು ನೋಡುತ್ತಿರು ವರೆಂದೂ ಹೇಳಿ ಬಟ್ಟೆಯನ್ನು ಬಿಚ್ಚದೆ ಸ್ನಾನ ಮಾಡಿ ಬರುತ್ತಿದ್ದ. "ಆ ಧ್ವನಿಗಳ ಯಾತನೆಯನ್ನು ತಡೆಯ ಲಾಗದೆ ನನ್ನ ತಲೆಯನ್ನು ಬಲವಾಗಿ ಗೋಡೆಗೆ ಚಚ್ಚಿಕೊಂಡೆ. ಅದರಿಂದಾಗಿ ತಲೆ ಮತ್ತು ಕತ್ತಿಗೆ ನೋವಾಗಿದೆ" ಎಂದ. ಅಲ್ಲೇನಾಗಿದೆಯೆಂದು ಪರೀ ಕ್ಷಿಸಿದೆ. ಕತ್ತು ಊದಿತ್ತು. ಕೈಕಾಲುಗಳ ಸ್ವಾಧೀನ ತಪ್ಪಿಹೋಗಿತ್ತು. ಕತ್ತಿನ ಮೂಳೆ ಮುರಿದಿದ್ದು ಬೆನ್ನಹುರಿಗೆ ಆಘಾತವಾಗಿತ್ತು. ಇಷ್ಟು ಆಘಾತವಾ ಗಬೇಕಿದ್ದರೆ ರವಿ ಎಷ್ಟು ರಭಸದಿಂದ ಗೋಡೆಗೆ ತಲೆ ಚಚ್ಚಿಕೊಂಡಿರಬೇಕೆಂಬುದನ್ನು ಊಹಿಸಬ ಹುದು. ಇದು ನನ್ನ ಅರಿವಿಗೆ ಬಂದ ಕೂಡಲೇ ಅವನನ್ನು ನಗರದ ನರಶಸ್ತ್ರಜ್ಞರಿರುವ ದೊಡ್ಡ ಆಸ್ಪತ್ರೆಗೆ ಕಳುಹಿಸಿದೆ. ರವಿಗೆ ಕೂಡಲೇ ಅವಶ್ಯಕತೆ ಇದ್ದುದು ನರಶಸ್ತ್ರಜ್ಞರ (Neuro Surgeon) ಚಿಕಿತ್ಸೆ. ಅವನಿಗಿದ್ದುದು ಮಾನಸಿಕ ಅಸ್ವಸ್ಥತೆ. ಆದರೆ ಆತ ಮಾಡಿಕೊಂಡ ಹಾನಿಗೆ ನರಶಸ್ತ್ರಜ್ಞರ ಚಿಕಿತ್ಸೆ ಆಗಿಂದಾಗ್ಗೆ ದೊರೆಯುವುದು ಅಗತ್ಯವಾಗಿತ್ತು. ನರ ಶಸ್ತ್ರಜ್ಞರು ತತ್‌ಕ್ಷಣ ಪರೀಕ್ಷಿಸಿದರು. ತಮ್ಮ ಇತರ ಸಹೋದ್ಯೋಗಿಗಳೊಂದಿಗೆ ಸಮಾಲೋಚನೆ ನಡೆ ಸಿದರು. ಬೆನ್ನಹುರಿಗೆ ಆದ ಹಾನಿಯನ್ನು ಸರಿಪಡಿ ಸುವಹಾಗಿರಲಿಲ್ಲ. ರೋಗಿ ಶಸ್ತ್ರಚಿಕಿತ್ಸೆಗೊಳಗಾಗುವ ಪರಿಸ್ಥಿತಿಯಲ್ಲೂ ಇರಲಿಲ್ಲ ಮತ್ತು ಬೆನ್ನಹುರಿಗೆ ಆದ ಹಾನಿ ಶಾಶ್ವತವಾಗಿತ್ತು. ಮಧ್ಯಾಹ್ನದಿಂದ ರಾತ್ರಿಯ ವರೆಗೆ ರವಿ ಕೊಂಚ ಕೊಂಚವೇ ಸಾವಿನೆಡೆಗೆ ಹೋಗುವುದನ್ನು ನಿಸ್ಸಹಾಯಕರಾಗಿ ವೀಕ್ಷಿಸುವ ಯಾತನೆಯನ್ನು ನಾವೆಲ್ಲರೂ ಅನುಭವಿಸಬೇಕಾ

ಯಿತು.

ಈ ವ್ಯಾಧಿಗೆ ಸ್ಕಿಜೋಫ್ರೇನಿಯ ಎಂದು ಕರೆಯುತ್ತೇವೆ. ಈ ವ್ಯಾಧಿಯಲ್ಲಿ ಕೆಲವು ವಿಧಗಳಿವೆ. ರವಿಯದು ಪ್ಯಾರಾನಾಯಿಡ್ ಮಾದರಿಯದು. ಈ ವ್ಯಾಧಿ ಸುಮಾರು ನೂರು ಜನಗಳಲ್ಲಿ ಒಬ್ಬರಿಗಿರುತ್ತದೆ. ಇದು ಸಾಧಾರಣವಾಗಿ ಇಳಿವಯಸ್ಸಿನಲ್ಲಿ ಬರುವುದೇ ಹೆಚ್ಚು. ಇದು ಯಾವ ಕಾರಣಕ್ಕಾಗಿ ಬರುತ್ತದೆ ಎಂಬುದು ಇನ್ನೂ ಖಚಿತವಾಗಿ ತಿಳಿದಿಲ್ಲವಾದರೂ ಶರೀರದಲ್ಲಿ ಜೀವ ರಸಾಯನಿಕಗಳ ಉತ್ಪಾದನೆ ಕುಗ್ಗುವುದರಿಂದ ಬರಬಹುದೆಂಬುದಕ್ಕೆ ಬಲವಾದ ಆಧಾರಗಳು ದೊರಕಿವೆ. ಈ ರೋಗಕ್ಕೆ ಮಿದುಳಿನ ಕೆಲವು ಭಾಗಗಳಲ್ಲಿ ಆಗುವ ಕುಂದೂ ಕಾರಣ ಎಂದು ಆಧುನಿಕ ವಿಜ್ಞಾನದಿಂದ ತಿಳಿದು ಬಂದಿದೆ. ಸ್ಕಿಜೋಫ್ರೇನಿಯವನ್ನೇ ಸಾಮಾನ್ಯವಾಗಿ ಜನರು ಹುಚ್ಚೆಂದು ಕರೆಯುವುದು. ಮನೋರೋಗತಜ್ಞರ ಬಳಿಗೆ ಹೋಗುವರಿಗೆಲ್ಲ ಹುಚ್ಚು ಎಂಬ ತಪ್ಪು ಕಲ್ಪನೆ ನಮ್ಮಲ್ಲಿದೆ. ಮನೋರೋಗ ತಜ್ಞರ ಬಳಿ ಬರುವವರಲ್ಲಿ ಕೇವಲ ಶೇ. ಹದಿನೈದರಷ್ಟು ಜನರಿಗೆ ಮಾತ್ರ ಸ್ಕಿಜೋಫ್ರೇನಿಯ ಇರುತ್ತದೆಂಬುದು ಬಹು ಜನರಿಗೆ ತಿಳಿದಿಲ್ಲ.

ಒಂದಾನೊಂದು ಕಾಲದಲ್ಲಿ ಸ್ಕಿಜೋಫ್ರೇನಿಯಕ್ಕೆ ಹೆದರಬೇಕಾದ ಪರಿಸ್ಥಿತಿ ಇತ್ತು. ವಿಜ್ಞಾನ-ತಂತ್ರಜ್ಞಾನಗಳು ಮುಂದುವರೆದಿರುವ ಈ ಇಪ್ಪತ್ತನೇ ಶತಮಾನದಲ್ಲಿ ಹೆದರುವ ಪ್ರಮೇಯವಿಲ್ಲ. ಈಗ ಬಹಳ ಒಳ್ಳೆಯ ಔಷಧಿಗಳಿವೆ. ಈ ಔಷಧಿಗಳನ್ನು ಮನೋರೋಗತಜ್ಞರ ಆದೇಶದಂತೆ ಸರಿಯಾಗಿ ಬಳಸಿದರೆ ಸ್ಕಿಜೋಫ್ರೇನಿಯಕ್ಕೆ ಬಲಿಯಾಗಿರುವ ವ್ಯಕ್ತಿ ಎಲ್ಲರಂತೆಯೇ ಜೀವನ ನಡೆಸಲು ಸಾಧ್ಯ.

ಸ್ಕಿಜೋಫ್ರೇನಿಯದ ಒಂದು ಲಕ್ಷಣವೆಂದರೆ ತನಗೆ ಕಾಯಿಲೆಯೇ ಇಲ್ಲ ಎಂಬ ಭಾವನೆ. ಈ ಭಾವನೆಯಿಂದ ರೋಗಿ ಚಿಕಿತ್ಸೆಯನ್ನು ಸಮರ್ಪಕವಾಗಿ ಅನುಸರಿಸುವುದಿಲ್ಲ. ಈ ರೋಗಕ್ಕೆ ತಿಂಗಳುಗಟ್ಟಲೆ, ಕೆಲವೊಮ್ಮೆ ವರ್ಷಗಟ್ಟಲೆ ಚಿಕಿತ್ಸೆ ನಡೆಸಬೇಕಾಗುವುದು. ರೋಗಿ ಗುಣವಾದ ಮೇಲೆ ಅವನು ಸರಿಯಾಗಿರುವನೆಂದು ಔಷಧ ನಿಲ್ಲಿಸಲು ಸಂಸಾರದ ಇತರರೂ ಕಾತರರಾಗಿರುತ್ತಾರೆ. ಇದರಿಂದ ರೋಗ ಮರುಕಳಿಸಬಹುದು. ಕೆಲವರಿಗೆ ಔಷಧ ಮಾತ್ರವಲ್ಲದೆ ವಿದ್ಯುತ್ ಕಂಪನ ಚಿಕಿತ್ಸೆ ಸಹ ಬೇಕಾಗಬಹುದು. ಕೆಲವರಿಗೆ ದೈನಂದಿನ ಪ್ರಕ್ರಿಯೆಗಳಿಗೆ ಬೇಕಾದ ವಿಷಯಗಳನ್ನು ಕೂಡ ನಾವು ಕಲಿಸಬೇಕಾಗಬಹುದು.

ಈ ಘಟನೆ ನಡೆದು ವರ್ಷಗಳೇ ಉರುಳಿದರೂ ಅದು ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದುಕೊಂಡಿದೆ. ರವಿಯನ್ನು ಒಂದು ದಿನ ಮುಂಚೆ ನನ್ನಲ್ಲಿಗೆ ಕರೆತಂದಿದ್ದರೆ ಬಹುಶಃ ಅವನನ್ನು ಉಳಿಸಬಹುದಾಗಿತ್ತು. ಅಜ್ಞಾನ, ಮೂಢನಂಬಿಕೆ ಮತ್ತು ಔದಾಸೀನ್ಯದಿಂದಾಗಿ ಅವನ ಪತ್ನಿ ಪತಿವಿಯೋಗದಿಂದಲೂ ಮಗ ಪಿತೃ ಶೋಕದಿಂದಲೂ ಜೀವನ ಪರ್ಯಂತ ನರಳುವಂತಾಯಿತು. ನನ್ನ ವೃತ್ತಿಜೀವನದಲ್ಲಿ ಇದೇ ಮೊದಲ ಘೋರ ಘಟನೆ. ಇದೇ ಕಡೆಯದೂ ಆಗಲಿ ಎಂದು ಆಶಿಸುತ್ತೇನೆ.

### ಸಾಹೇಬ್ ಸಪ್ಲೈಯರ್‌ಗಳು !

'ಅನ್ನಪೂರ್ಣೇಶ್ವರಿ' ಎಂಬ ಶಾಕಾಹಾರಿ ಹೋಟೆಲೊಂದು ಮದ್ರಾಸಿನಲ್ಲಿದೆ. ಇಲ್ಲಿಗೆ ಪ್ರತಿದಿನವೂ ಸಾವಿರಾರು ಗ್ರಾಹಕರು ರುಚಿಕಟ್ಟಾದ ಊಟ, ತಿಂಡಿ, ಪಾನೀಯಗಳಿಗೆಂದು ಬರುತ್ತಾರೆ. ಬೆಲೆಯೂ ಹೆಚ್ಚಾಗಿಲ್ಲ. ಇಲ್ಲಿ ಈ ಹೋಟೆಲ್‌ನ ಕೆಲಸಗಾರರೆಲ್ಲ ದೊಡ್ಡ ಉದ್ದಿಮೆದಾರರೂ ಖಾಸಗಿ ಕಂಪನಿಗಳ ಉಚ್ಚ ಅಧಿಕಾರಿಗಳೂ, ಸೈನ್ಯಾಧಿಕಾರಿಗಳೂ, ಸ್ಕೂಲು ಕಾಲೇಜುಗಳ ಅಧ್ಯಾಪಕರುಗಳೂ ಆಗಿರುವುದೊಂದು ಅನುಪಮ ವೈಶಿಷ್ಟ್ಯ. ಇವರೆಲ್ಲರೂ ತಮ್ಮ ಸೇವೆಯನ್ನು ಪ್ರತಿಫಲವಿಲ್ಲದೆ ಸ್ವ ಇಚ್ಛೆಯಿಂದ ಮಾಡುತ್ತಾರೆ. ಇಲ್ಲಿ ಲಿಂಗಭೇದವಿಲ್ಲದೆ ಹೆಣ್ಣು, ಗಂಡು ಇಬ್ಬರೂ ದುಡಿಯುತ್ತಾರೆ. ಈ ಹೋಟೆಲ್‌ನಿಂದ ಬರುವ ಲಾಭವನ್ನು ವೈದ್ಯ ಸೇವಾ ಕೇಂದ್ರ, ಕರ್ನಾಟಕ ಸಂಗೀತ ಮತ್ತು ಭರತ ನಾಟ್ಯ ಕಲೆಯ ತರಬೇತಿ ಕೇಂದ್ರಗಳನ್ನು ನಡೆಸಲು ಬಳಸುತ್ತಾರೆ.

– ಕೆ.ಗಣೇಶ್

# ಹುಬ್ಬು-ಬುಬ್ಬು

ಲಘು ಪ್ರಬಂಧ

ಇಲ್ಲಿ
ಕೇವಲ ಪ್ರಾಸವಿಲ್ಲ.
ಅವು ಒಂದಕ್ಕೊಂದು
ಹಾಸು-ಹೊಕ್ಕಾಗಿರುವುದು
ನಿಜ
ಎಂಬುದು ನಿಮ್ಮೆಲ್ಲರ
ಅನುಭವಕ್ಕೆ
ಒಮ್ಮೆಲ್ಲೊಮ್ಮೆ ಬರಲೇಬೇಕು

ಚಿಕ್ಕಂದಿನಲ್ಲಿ ಶಾಲೆಯಲ್ಲಿ ಕಲಿಯುತ್ತಿರುವಾಗ "ಬುದ್ಧ ಭೃಕುಟಿತ ತೇರೇ" ಅಂತಲೋ ಏನೋ ಒಂದು ಶ್ಲೋಕ ಹೇಳುತ್ತಿದ್ದ ನೆನಪು ನನಗಿದೆ. ಚಿಕ್ಕ ವಯಸ್ಸು. ತಿಳಿಯದ ಈ ಪದಗಳ ಅರ್ಥ ಕೇಳದೇ ನನ್ನ ಪಾಡಿಗೆ ನಾನು ಈ ಶ್ಲೋಕವನ್ನು ಉಳಿದ ವಿದ್ಯಾರ್ಥಿಗಳೊಂದಿಗೆ ಹೇಳಿ ಕ್ಲಾಸಿನ ಒಳಗೆ ಓದುತ್ತಿದ್ದೆ. ಆದರೂ ಈ 'ಬುದ್ಧ ಭೃಕುಟಿತ...' (ಇವೇ ಪದಗಳಿರಬಹುದು ಎಂದು ನನ್ನ ನಂಬಿಕೆ. ಅಕ್ಷರಗಳ ಅಲ್ಲಟಪಲ್ಲಟ ಆಗಿದ್ದರೂ ಭೃಕುಟ ಎಂಬ ಪದವಂತೂ ಇದ್ದೇ ಇತ್ತು, ಎಂದು ನನ್ನ ನಂಬಿಕೆ) ಪದಗಳು ನನ್ನ ಮಿದುಳಿನ ಒಳಪದರದಲ್ಲಿ ಆಳವಾಗಿ ಸೇರಿಕೊಂಡು ಒಮ್ಮೊಮ್ಮೆ ಬಚ್ಚಲು ಮನೆಯಲ್ಲಿ, ಹಾಸಿಗೆಯಲ್ಲಿ ಈ ಶ್ಲೋಕ ಹೇಳಲು ಪ್ರೇರೇಪಿಸುತ್ತಿತ್ತು. ಹಾಗೆ ನೋಡಿದರೆ ಅದೆಷ್ಟೊ ತಮಿಳು ಮತ್ತು ಹಿಂದಿ ಹಾಡುಗಳ ಅರ್ಥವೇ ನನಗೆ ತಿಳಿಯದು; ಆದರೂ ಅವುಗಳನ್ನು ಗುಣುಗುಣಿಸುತ್ತ ಇರುವುದು ಒಂದು ರೀತಿಯ ಖುಷಿ ಕೊಡುವುದು ನನ್ನ ಅನುಭವ. 'ಭೃಕುಟ'ದ ಕತೆ ಎಲ್ಲಿಂದ ಎಲ್ಲಿಗೋ ಹೋಗುತ್ತಿರುವುದಕ್ಕೆ ಕ್ಷಮಿಸಿ.

ಕೊಂಚ ವಯಸ್ಸಾದಂತೆ ಭೃಕುಟ ಎಂದರೆ 'ಹಣೆ' ಎಂದೋ 'ಹುಬ್ಬು' ಎಂದೋ ಅರ್ಥವಿರುವುದಾಗಿ ತಿಳಿಯಿತು. ಹದ್ದೆ ವಯಸ್ಸಿನಲ್ಲಿ ಸೆಂಟ್ರಲ್ ಕಾಲೇಜಿನಲ್ಲಿನ ಕ್ಯಾಂಟೀನಿಗೆ ಹೋಗುತ್ತಿದ್ದೆ. ಅದರ ಎದುರಿನ ಕಾಲೇಜೇ ನನ್ನ ಕಾಲೇಜು. ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದ ಕೆಲವು ಹುಡುಗಿಯರು ನಮ್ಮನ್ನು ಯಾವಾಗಲೂ ಕೆಣಕುವರು. ಈ ಕೆಣಕುವವರ ಪೈಕಿ ಕೆಲವು ಸೊಗಸುಗಾತಿಯರು ನನಗೆ ಪರಿಚಿತರಾಗಿದ್ದು ಈ ಸಮಯದಲ್ಲೇ. ಮತ್ತು ಅವರ ಅಫೆಕ್ಷನ್ ಗಳಿಸಿಕೊಳ್ಳಲು ಆಗಾಗ್ಗೆ ಅವರಿಗೆ ಆ ಕಾಲದ ಪ್ರಸಿದ್ಧ ಸಿನಿಮಾ ಪತ್ರಿಕೆಗಳನ್ನು ನಾನೇ ಕೊಂಡುಕೊಡುತ್ತಿದ್ದೆ. ನಮ್ಮ ಕಾಲದಲ್ಲಿ ತರುಣಿಯರನ್ನು ಗೆಲ್ಲುವುದು ಹೀಗೆ ಸಿನಿಮಾ ಪತ್ರಿಕೆ ಕೊಡುವುದರ ಮೂಲಕ ಎಂಬ ಅಪ್ರಬುದ್ಧ ನಂಬಿಕೆ ಬೆಳೆದಿತ್ತು. ಸಿನಿಮಾ ಪತ್ರಿಕೆ ನೋಡಿದ ಕೂಡಲೇ ಕೈಚಾಚಿ ಅದನ್ನು ಕಸಿಯುತ್ತಿದ್ದ ಹುಡುಗಿಯರು ಒಳಗಿನ ಹಾಳೆ ತೆರೆದು ತಾರೆಯರ ಫೋಟೋಗಳನ್ನು ಕಣ್ಣವೆ ಮಿಟುಕಿಸದ ಹಾಗೆ ನೋಡುತ್ತಿದ್ದರು

-ಪ್ರಭಾ

ಹಾಗೆ ನೋಡಬೇಕಾದರೇನೇ "ಆಹಾ! ಹುಬ್ಬು ಅದೆಷ್ಟು ಚೆನ್ನಾಗಿದೆ!" ಎಂದು (ಇಂಗ್ಲಿಷಿನಲ್ಲಿ, ಕನ್ನಡ ದಲ್ಲಿ, ತಮಿಳಿನಲ್ಲಿ) ಉದ್ಗಾರ ತೆಗೆಯುತ್ತಿದ್ದರು. ಸಿನಿಮಾ ಪತ್ರಿಕೆ ಅವರೆಲ್ಲರ ಕೈಹಾದು ನನ್ನ ಕೈಗೆ ಬಂದ ನಂತರ ನಾನೂ ಪುಟ ತೆರೆದು ತಾರೆಯರ ಫೋಟೋಗಳ ಹುಬ್ಬು ಗಮನಿಸುತ್ತಿದ್ದೆ. ನನ ಗೇಕೋ ಆ ಹುಬ್ಬುಗಳು ಅಷ್ಟು ಅಂದವಾಗಿ ಕಾಣಿಸುತ್ತಿರಲಿಲ್ಲ. ಬದಲಿಗೆ ಈ ತಾರೆಯರಿಗೆ ಹುಬ್ಬು ಇದೆಯೆ ಎಂದು ಅನಿಸುತ್ತಿತ್ತು. ಹಾಗೆ ನೋಡಿದರೆ ಗಂಡು ಪ್ರಾಣಿಗಳ ಹುಬ್ಬು ಢಾಳಾಗಿ ಎದ್ದು ತೋರುವಂತೆ ಹೆಣ್ಣು ಪ್ರಾಣಿಗಳ ಹುಬ್ಬು ಢಾಳಾಗಿ ಎದ್ದು ತೋರುತ್ತಿರಲಿಲ್ಲ. ಮತ್ತು ಗಂಡ ಸರ ಹುಬ್ಬಿಗಿರುವ ಆಕರ್ಷಣೆ ಹೆಂಗಸರ ಹುಬ್ಬುಗ ಳಿಗೆ ಇರಲಿಲ್ಲ ಎಂದೇ ಹೇಳಬೇಕು.

ಕಾದಂಬರಿಗಾರ್ತಿಯರು ಹೆಣ್ಣನ್ನು ವರ್ಣಿಸು ವಾಗ ತಿದ್ದಿ ತೀಡಿದ ಹುಬ್ಬು ಎಂದೇ ಬರೆಯುತ್ತಾರೆ ಮತ್ತು ಯಾವುದೇ 'ಹೆಣ್' ಲೇಖಕಿಯ ಪುಸ್ತಕವನ್ನೇ ನೀವು ಗಮನಿಸಿದರೂ ಈ 'ತಿದ್ದಿ ತೀಡಿದ ಹುಬ್ಬು'ಗಳ ವಿವರಣೆ ಇರದೇ ಒಂದೇ ಒಂದು ಪ್ರಸಂಗವೂ ಮುಂದುವರೆಯುವುದಿಲ್ಲ.

ಹುಬ್ಬುಗಳು ಬಿಲ್ಲಿನ ಹಾಗೆ ಬಾಗಿರುವುದು, ತೆಳು ಬೆಂಕಿ ಕಡ್ಡಿಯ ಹಾಗಿರುವುದು, ಹುಬ್ಬು ನೋಡಿಯೇ ಹುಡುಗಿ ಸುಂದರವಾಗಿದ್ದಾಳೆ ಅಥವಾ ಇಲ್ಲ ಎಂದು ತೀರ್ಮಾನಿಸುವುದು ಈ ಕಾದಂಬರಿ ಗಳ ಅಪೂರ್ವವಾದ ಕೊಡುಗೆ ಎಂದು ನನ್ನ ಅಭಿಮತ. 'ಹ'ಕಾರ ಹೊರಡದ ಬೆಂಗಳೂರು ದೂರದರ್ಶನದ ಕಿರುತಾರೆಗಳು ಹುಬ್ಬುಗಳನ್ನು 'ಉಬ್ಬು' ಎಂದು ಹೇಳುವುದನ್ನು ನೀವು ಗಮನಿಸಿ ರಲು ಸಾಕು. 'ಉಬ್ಬು' ಎಂದ ಕೂಡಲೇ ನಮಗೆ ಹೊಳೆಯುವುದು ರಸ್ತೆಯ ಉಬ್ಬುತಗ್ಗುಗಳು ಮತ್ತು ಹೆಣ್ಣನ್ನು ಭೂಮಾತೆಗೆ ಹೋಲಿಸಿ ಪರ್ವತ, ಬೆಟ್ಟ, ಗುಡ್ಡಗಳನ್ನು ಹೆಣ್ಣುಗಳ ಭೂಕಕ್ಷೆಗೆ ಸಮೀಕರಿಸುವಂ



ತಹ ಬರಹಗಳು.

ಈ ಹುಬ್ಬುಗಳೇ ರಸ್ತೆಯ ಉಬ್ಬುಗಳಿಗೆ ಪ್ರೇರೇಪಿಸಿದೆ ಎಂದು ನನ್ನ ಬಲವಾದ ಅಭಿಮತ. ರಸ್ತೆಯ ಉಬ್ಬುಗಳನ್ನು 'ಹಂಪು' (Humps)ಗಳು ಎಂದು ಕರೆಯುತ್ತಾರೆ. ರಸ್ತೆಯ ಹಂಪುಗಳ ಆಕಾರ ನೋಡಿ. ಒಂದು ಕೋನದಿಂದ ನೋಡಿದರೆ ಇವುಗಳು ಹುಬ್ಬುಗಳಂತೆಯೇ ಕಾಣುವುದನ್ನು ನೀವು ಗಮನಿಸಿದ್ದೀರಾ? ವೇಗವಾಗಿ ಬರುವ ವಾಹನಗಳ ನಿಯಂತ್ರಣಕ್ಕೆ ಈ ಉಬ್ಬುಗಳು ಕಡಿವಾಣ ಹಾಕುತ್ತವೆ ಎಂದು ನಮ್ಮ ಟ್ರಾಫಿಕ್ ಪೊಲೀಸರ ಅಭಿಮತ. ಅದೇ ರೀತಿ ಹೆಣ್ಣಿನ ಸೌಂದರ್ಯೋಪಾಸನೆ ನಡೆಸುವಾಗ ಈ ಹುಬ್ಬುಗಳು ಒಂದು ರೀತಿ ಕಡಿವಾಣ ಹಾಕಬಹುದು ಮತ್ತು ಹಾಕಲೇಬೇಕು!

ಕೆಲಕಾಲದ ನಂತರ ಈ ರಸ್ತೆ ಉಬ್ಬುಗಳು ಚಪ್ಪಟೆಗೊಳ್ಳುವುದೋ ಅಥವಾ ಉಬ್ಬುಗಳ ಪಕ್ಕದಲ್ಲೇ ತಗ್ಗುಗಳು ಬೀಳುವುದೋ ಸರ್ವೇಸಾಮಾನ್ಯ ಸಂಗತಿ. ಅದೇ ರೀತಿ ಹುಬ್ಬುಗಳ ಬಗೆಗೆ ಕೊಂಚ ಆಲಸ್ಯ ತೋರಿದಲ್ಲಿ ಅವು ತಮ್ಮ ಆಕಾರ ಕಳೆದುಕೊಂಡು ಮತ್ತೇನೋ ಆಗುವ ಭೀತಿ ಹೆಂಗಳೆಯರಿಗೆ ಇದೆ ಎಂದು ಸೌಂದರ್ಯ ನಿಮಂತ್ರಕರು ಅಭಿಪ್ರಾಯಪಡುತ್ತಾರೆ. ಈ ಕಾರಣಕ್ಕಾಗಿಯೆ ಕೆಲವರ್ಷಗಳ ಹಿಂದೆ ಹೆಸರೇ ಕೇಳಿರದಿದ್ದ ಅಸಂಖ್ಯಾತ ಬ್ಯೂಟಿ ಪಾರ್ಲರುಗಳು ಈಗ ಹುಟ್ಟಿವೆ ಮತ್ತು ಹೆಂಗಳೆಯರು ವಾರ ಎರಡು ವಾರಗಳಿಗೆ ಹುಬ್ಬುಗಳಿಗೆ ಷೇಪು ತರಲು ಇಲ್ಲಿಗೆ ಭೇಟಿ ನೀಡಲೇಬೇಕು. ಒಂದೊಂದು ಕೂದಲಿಗೇ ದಾರ ಬಿಗಿದು ಅವುಗಳನ್ನು ಬ್ಯೂಟಿ ಪಾರ್ಲರುಗಳ ಪರಿಣತರು ಕೀಳುವುದನ್ನು ನೋಡುವುದೇ ಒಂದು ಸೊಗಸು. ಇದಕ್ಕೆ ಪರ್ಯಾಯವಾಗಿ ಕೆಲವು ಬುದ್ಧಿವಂತ ಮಹಿಳೆಯರು ಬಳೆ ಅಂಗಡಿಗಳಲ್ಲಿ ಸಿಗುವ ಚಿಮ್ಮುಟ (ಅಂದರೆ ಟ್ವೀಜರ್-Tweezer) ಖರೀದಿಸಿ ತಮ್ಮ ಹುಬ್ಬುಗಳ ಷೇಪು ತೆಗೆಯುವುದನ್ನು ನಾನು ಅರಿತಿದ್ದೇನೆ.

ನಮ್ಮ ದೇವಾನುದೇವತೆಗಳ ಈಚಿನ ಫೋಟೋಗಳನ್ನು ಗಮನಿಸಿದರೆ ನಿಮಗೆ ಈ ಹುಬ್ಬುಗಳು ಎಷ್ಟು ಅಲಂಕೃತವಾಗಿವೆ ಎಂಬ ಅಂಶ ಹೊಳೆಯುತ್ತದೆ. ವಯಸ್ಸಾದಂತೆ ಹುಬ್ಬು ಬೆಳ್ಳಗಾಗಲು ಮತ್ತು ಉದುರಲು ಆರಂಭವಾದಾಗ ಹೆಂಗಳೆಯರ ಮಾನಸಿಕ ಸಮತೋಲನ ಏರುಪೇರಾಗುತ್ತದೆ. ಬಿಳಿದಾಗುತ್ತಿರುವ ಹುಬ್ಬುಗಳಿಗೆ ತೀಕ್ಷ್ಣವಾದ ಚಿಕಿತ್ಸೆಗಳು ಆರಂಭವಾಗುತ್ತವೆ; ಕೆಲವು ಬಾರಿ ಈ ಚಿಕಿತ್ಸೆಯ ಹಿಂಸೆಯಿಂದ ಹುಬ್ಬೇ ಇಲ್ಲದಿದ್ದರಾಗಿರುತ್ತಿತ್ತು ಎಂದೂ ಅನಿಸುವುದುಂಟು. ಹುಬ್ಬು ಪೂರ್ತಿ ಉದುರಿದಾಗಲಂತೂ ಈ ಅಸಮತೋಲನ ಪರಮಾವಧಿ ಮಟ್ಟ ಮುಟ್ಟಿರುತ್ತದೆ ಮತ್ತು ಹುಬ್ಬು ಇದ್ದ ಜಾಗದಲ್ಲಿ ಅದೇ ಆಕಾರದಲ್ಲಿ ಕಪ್ಪು ಬಣ್ಣ ಹಚ್ಚಿ ವಿಕಾರವಾಗಿ ಕಾಣಿಸಿಕೊಳ್ಳುವ ಲಲನೆಯರನ್ನು ನಾನು ಕಂಡಿದ್ದೇನೆ. ಆದರೆ ಗಂಡಸರು ಹುಬ್ಬು ಬೆಳ್ಳಗಾಗಲೀ ಉದುರಿ ಹೋಗಲೀ ಅದನ್ನು ಕೇರ್ ಮಾಡುವ ಸತ್‌ಸಂಪ್ರದಾಯಸ್ಥರಲ್ಲ. ಇದಕ್ಕೆ ಕಾರಣವೆಂದರೆ ಇವರಿಗೆ ಹಾಸಿ ಹೊದೆಯುವಷ್ಟು ತೊಂದರೆಗಳು ಇರುತ್ತವಂತೆ! ಇದು ತಜ್ಞರು ಪರಿಶೀಲಿಸಬೇಕಾದ ಸಂಗತಿ.

ಹುಬ್ಬು-ಉಬ್ಬುಗಳಿಗೆ ಪರಿವರ್ತಿತವಾದ ರೀತಿಯಿದೆಯಲ್ಲ, ಅದು ಕಾರಣವಾಗಿಯೆ ಹುಬ್ಬಿನ ಮೇಲಿನ ಕಾವ್ಯ-ಮಹಾಕಾವ್ಯಗಳು ಉಬ್ಬುಗಳ ಮೇಲೂ ಪ್ರಯೋಗವಾಗುವ ಸಾಧ್ಯತೆ ಇದ್ದೇ ಇದೆ. ಇದನ್ನು ಮೊನ್ನೆ ನಾನು ನನ್ನ ಕವಿಮಿತ್ರರೊಬ್ಬರಿಗೆ ಹೇಳಿದೆ. ಕವಿಮಿತ್ರರು ಎರಡು ನಿಮಿಷ ಕಣ್ಣುಮುಚ್ಚಿ ಒಂದು ಕವನ ಹೊಸೆದೇಬಿಟ್ಟರು:

ಇಂತಹ ಮಹಾಕಾವ್ಯದ ಹುಟ್ಟಿಗೆ ಪ್ರೇರೇಪಣೆ ನೀಡಬಹುದಾದಂಥ ರಸ್ತೆಯ ಉಬ್ಬುಗಳು ಬೇಡ ಎಂದು ನಾಗರಿಕರು ಅಪೀಲು ಕೊಡಲಿದ್ದಾರಂತೆ. ಇದು ಕವಿಗಳ ಮೂಲಭೂತ ಹಕ್ಕುಗಳಿಗೇ ಧಕ್ಕೆ ಎಂದು ನನ್ನ ಕವಿಮಿತ್ರನ ಅಭಿಪ್ರಾಯ. ಅದರಿಂದ ಹುಬ್ಬಿನ ಪಾಡಿಗೆ ಹುಬ್ಬನ್ನೂ, ಉಬ್ಬಿನ ಪಾಡಿಗೆ ಉಬ್ಬನ್ನೂ ಬೆಂ.ದೂ.ದರ್ಶನದ ಪಾಲಿಗೆ ಬೆಂಗಳೂರು ದೂರದರ್ಶನವನ್ನೂ ಬಿಡುವಂತಹ ಬುದ್ಧಿವಂತಿಕೆ ನಮ್ಮಲ್ಲಿ ಬೆಳೆಯಲಿ! ಪ್ರಕೃತಿಯ ಸೌಂದರ್ಯವನ್ನು ಆರಾಧಿಸಲು ಒಂದು ರೀತಿಯ ಅಭಿರುಚಿ ಮನುಷ್ಯನಲ್ಲಿರಬೇಕಂತೆ. ಆದರೆ ಪೂರ್ವಜನ್ಮದ ಸಂಸ್ಕಾರವಿರುವಂಥ ಮನುಷ್ಯ ಪ್ರಕೃತಿ ಸೌಂದರ್ಯ ಆಸ್ವಾದಿಸಬಲ್ಲನಂತೆ. ಇದೇ ತತ್ವವನ್ನು ಹುಬ್ಬುಗಳ ಬಗೆಗೂ ಹೇಳಬಹುದು. ಆದ್ದರಿಂದಲೇ ಹುಬ್ಬುಗಳಂತೆಯೇ ಉಬ್ಬುಗಳೂ ಜನಪ್ರಿಯವಾಗಿವೆ.

★

**ವ್ಯವಹಾರದಲ್ಲಿ ಯಶಸ್ಸನ್ನು ಸಂಪಾದಿಸಬೇಕೆಂದರೆ ಹೊಸದಾದ ಸಂಶೋಧನೆಯಾಗಲಿ ವ್ಯಾಪಾರಿ ರಹಸ್ಯವಾಗಲಿ ನಿಮ್ಮ ಬಳಿ ಇರಬೇಕು**

ತಪ್ಪು. ಸಣ್ಣ ಸಣ್ಣ ಕಂಪನಿಗಳು ದೊಡ್ಡದಾಗಿ ಬೆಳೆದದ್ದು ಕಾರ್ಯಕ್ಷಮತೆಯನ್ನು ಹೆಚ್ಚಿಸಿಕೊಳ್ಳುವ ಮೂಲಕ ಅಥವಾ ಗ್ರಾಹಕರಿಗೆ ಹೆಚ್ಚಿನ ಸವಲತ್ತನ್ನು ಒದಗಿಸುವ ಮೂಲಕ.

ನೀವು ವ್ಯವಹಾರದಲ್ಲಿ ಯಶಸ್ಸನ್ನು ಸಾಧಿಸಲೇ ಬೇಕೆಂದಿದ್ದರೆ, ವ್ಯವಹಾರವನ್ನು ಪ್ರಾರಂಭಿಸುವುದಕ್ಕಿಂತ ಮೊದಲು, ಗ್ರಾಹಕರಿಗೆ ಅಗ್ಗವಾದ, ಅದೇ ಶ್ರೇಣಿಯಲ್ಲಿ ಲಭ್ಯವಿರುವ ಉಳಿದ ಕಂಪನಿಗಳ ಉತ್ಪಾದನೆಗಿಂತ ಹೆಚ್ಚಿನ ಪ್ರಯೋಜನ ಒದಗಿಸುವ ವಸ್ತುವನ್ನು ಒಮ್ಮೆ ನೀವು ನಿರ್ಮಿಸಿದಿರೆಂದರೆ ಬಂಡವಾಳ ದೊರಕಿಸಲು ನಿಮಗೇನೂ ಕಷ್ಟವಾಗದು. ಅದನ್ನು ಸರಿಯಾಗಿ ಉಪಯೋಗಿಸಿಕೊಂಡು ಬೆಳೆಯುವ ಯೋಗ್ಯತೆ ಮಾತ್ರ ನಿಮ್ಮಲ್ಲಿರಬೇಕು.

'ಹಣವು ಜಾಣ್ಮೆಯನ್ನು ಕೊಂಡುಕೊಳ್ಳಬಲ್ಲದು' ಎಂಬ ಮಾತೊಂದಿದೆ. ಒಂದು ಸೀಮಿತ ಮಿತಿಯವರೆಗೆ ಮಾತ್ರ ಈ ಮಾತು ಸತ್ಯ. ನಿಜವಾಗಿಯೆಂದರೆ ಜಾಣ್ಮೆಯಿಂದಲೆ ಹಣವನ್ನು ಉತ್ಪಾದಿಸಬಹುದು.

**''ವ್ಯವಹಾರದಲ್ಲಿ ಯಶಸ್ಸನ್ನು ಸಾಧಿಸಬೇಕೆಂದರೆ ಕಾಲೇಜು ಶಿಕ್ಷಣವನ್ನು ಪಡೆದಿರಬೇಕು.''**

-ಎಷ್ಟೋ ಪ್ರಸಂಗಗಳಲ್ಲಿ ಕಾಲೇಜು ಶಿಕ್ಷಣ ಅಡ್ಡವಾಗುವುದೂ ಇದೆ. ಅದು 'ಇಂಥಾ ಸಣ್ಣ ಕೆಲಸವನ್ನೇಕೆ ಮಾಡಿಯೇನು?' ಎಂಬ ಅಹಂಭಾವವನ್ನಾದರೂ ಹುಟ್ಟಿಸೀತು ಇಲ್ಲವೆ 'ಇದೇನು ಮಹಾ! ಬೇಕಾದ ಹಾಗೆ ಮಾಡಬಹುದು' ಎಂಬ ಅತಿಯಾದ ವಿಶ್ವಾಸವನ್ನಾದರೂ ನಿರ್ಮಿಸೀತು. ಮೊದಲನೆಯದರಿಂದ ಕೆಲಸವೇ ಆಗುವುದಿಲ್ಲ, ಎರಡನೆಯದರಿಂದ ಹುಚ್ಚು ಧೈರ್ಯವುಂಟಾಗಿ ಕೊನೆಯಲ್ಲಿ ಮಣ್ಣು ಮುಕ್ಕುವಂತಾಗುತ್ತದೆ.

ವಾಸ್ತವವಾಗಿ ನಿಮಗೆ ಅಗತ್ಯವಾದದ್ದು, ನೀವು ಹೊರತರಲಿಚ್ಛಿಸುವ ಉತ್ಪಾದನೆಗೆ ಬೇಡಿಕೆ ಬಂದೇ ಬರುವುದೆಂಬ ವಿಶ್ವಾಸ ಹಾಗೂ ವಿಶ್ವಾಸವನ್ನು ಸಾಕಾರಗೊಳಿಸಲು ಮೈಮುರಿದು ದುಡಿಯುವ ಮನಸ್ಸು ಮತ್ತು ಹೊಸ ಹೊಸ ಸಂದರ್ಭಗಳನ್ನು

# ವ್ಯಾವಹಾರಿಕ ಯಶಸ್ಸಿನ ಬಗೆಗೆ ಹತ್ತು ತಪ್ಪು ಕಲ್ಪನೆಗಳು

ಉತ್ಪಾದನೆಯನ್ನು ಉತ್ಪಾದಿಸಲು ಸಾಧ್ಯವೆ? ಎಂಬುದನ್ನು ಯೋಚಿಸಿ. ಹೌದೆಂದಾದರೆ ವ್ಯವಹಾರದಲ್ಲಿ ಮುನ್ನುಗ್ಗಿ. ಯಶಸ್ಸು ಖಂಡಿತ.

**ವ್ಯವಹಾರದಲ್ಲಿ ಹಣ ಮಾಡಬೇಕೆಂದರೆ ತೊಡಗಿಸಲು ಬಹಳ ಹಣ ಬೇಕು.**

ಸಾರ್ವತ್ರಿಕವಾಗಿರುವ ಭ್ರಮೆಗಳಲ್ಲಿ ಇದ್ದೂ ಒಂದು. ಜಗತ್ತಿನಲ್ಲೆ ಅತಿ ಶ್ರೀಮಂತನೆಂದು ಪರಿಗಣಿಸಲ್ಪಡುವ ಕಂಪ್ಯೂಟರ್ ದೊರೆ ಬಿಲ್‌ಗೇಟ್ ವ್ಯವಹಾರ ಪ್ರಾರಂಭಿಸಲು ಬಹಳ ಹಣವನ್ನೇನೂ ತೊಡಗಿಸಲಿಲ್ಲ. ಅವನ ಬಳಿ ಇದ್ದದ್ದು ದೂರದೃಷ್ಟಿ ಹಾಗೂ ಶ್ರಮವಹಿಸಿ ದುಡಿಯುವ ಮನಸ್ಸು ಮಾತ್ರ.

ಪೇಟೆಯಲ್ಲಿ ಶೀಘ್ರವಾಗಿ ಮಾರಾಟವಾಗುವ

ತಕ್ಷಣ ಗುರುತಿಸಿ ಅವುಗಳಿಂದ ಪ್ರಯೋಜನ ಪಡೆಯುವ ಬುದ್ಧಿ.

"ಹಣವೆಂಬುದು ಮಾಯೆ"

-ಸುಳ್ಳು. ಸಂನ್ಯಾಸಿಗಳನ್ನೂ ಹಣದ ಮೋಹ ಬಿಟ್ಟಿಲ್ಲ. ದುರ್ಮಾರ್ಗದಿಂದ ಹಣ ಸಂಪಾದಿಸುವುದು ಕೆಟ್ಟ. ಆದರೆ ಈಗಿನ ಕಾಲದಲ್ಲಿ ಹಣವಿದ್ದವರಿಗೇ ಅಗ್ರಪಟ್ಟ. ಆದ್ದರಿಂದ ಆದಾಯದತ್ತ ಯಾವಾಗಲೂ ಒಂದು ಕಣ್ಣಿಡಿ. ಆದಾಯ ಹೆಚ್ಚಿದಂತೆ ಸಮಾಜದ ದೃಷ್ಟಿಯಲ್ಲಿ ನೀವು ಹೆಚ್ಚಿನ ಯಶಸ್ಸನ್ನು ಸಾಧಿಸುವಿರಿ.

"ದೊಡ್ಡವರ ಹಾದಿ ತುಳಿಯಬೇಕು"

-ನೀತಿಮಾರ್ಗದಲ್ಲಿ ಈ ಮಾತು ಸರಿ. ವ್ಯವಹಾರದಲ್ಲಲ್ಲ. ವ್ಯವಹಾರದಲ್ಲಿ ನೀವು ಒಬ್ಬ ಗುರುವನ್ನು ಗುರುತಿಸಿಕೊಂಡರೆ ಅವನ ಮಾನದಂಡವನ್ನೇ ಅನುಸರಿಸಬೇಕಾಗುತ್ತದೆ. ಆದರೆ ಪರಿಸ್ಥಿತಿ, ಸಂದರ್ಭಗಳು ಭಿನ್ನವಾಗಿರುವುದರಿಂದ ಮಾನದಂಡಗಳೂ ಬೇರೆಯಾಗಿರಬೇಕಾದದ್ದು ಅನಿವಾರ್ಯ. ನಿಮ್ಮ 'ಗುರು'ವನ್ನು ಯಶಸ್ಸಿನ ಶಿಖರಕ್ಕೊಯ್ದ ಮಾನದಂಡವೇ ನಿಮ್ಮನ್ನು ಪಾತಾಳಕ್ಕೊಯ್ಯಬಹುದು. ತದ್ವಿರುದ್ಧವಾಗಿ, ಆತ ನಿಷ್ಪ್ರಯೋಜಕವೆಂದು ಭಾವಿಸಿದ್ದು ನಿಮ್ಮ ವ್ಯವಹಾರದಲ್ಲಿ ಪ್ರಯೋಜನಕಾರವಾಗಲೂಬಹುದು.

**ಇವನ್ನು ಅರಿತುಕೊಳ್ಳಿ. ಯಶದ ಸೋಪಾನಗಳು ತಂತಾವೆ ಗೋಚರಿಸುತ್ತವೆ.**

"ಯಶಸ್ವಿ ಉದ್ದಿಮೆದಾರರಿಗೆ ಯಾವಾಗಲೂ ಕೆಲಸ"

ಹಾಗೇನೂ ಅಲ್ಲ. ಕೆಲಸದಲ್ಲಿ ಅವರಿಗೆ ಉತ್ಸಾಹವಿರುತ್ತದಾದರೂ ಶ್ರದ್ಧೆಯಿಂದ ಇನ್ನಷ್ಟು ಹೆಚ್ಚು ಕೆಲಸಮಾಡಬೇಕೆಂದು ತಮ್ಮಲ್ಲಿ ಕೆಲಸ ಮಾಡುವವರನ್ನು ಪ್ರೇರಿಸುವುದರಲ್ಲೇ ಹೆಚ್ಚಿನ ಆಸಕ್ತಿಯಿರುತ್ತದೆ. ಯಶಸ್ವಿ ಉದ್ದಿಮೆದಾರರು ತಮಗೆ ದೊರೆತ ಸಮಯವನ್ನು ಕುಟುಂಬದ ಸದಸ್ಯರೊಂದಿಗೋ ಆಪ್ತ ವರ್ಗದೊಂದಿಗೋ ಕಳೆಯಲು ಹೆಚ್ಚು ಇಷ್ಟಪಡುತ್ತಾರೆ. ಅದೇ ಅವರ ಕಾರ್ಯಕ್ಷಮತೆಯನ್ನು ಇನ್ನಷ್ಟು ಉದ್ದೀಪನಗೊಳಿಸುತ್ತದೆ.

"ಯಶಸ್ಸಿಗೂ ಗ್ಲಾಮರಿಗೂ ಅವಿನಾಭಾವ"

-ಅಲ್ಲ. ಅವರೆಡಕ್ಕೂ ಎಣ್ಣೆ-ಸೀಗೇಕಾಯಿಯ ಸಂಬಂಧ. ಯಶಸ್ಸಿನಿಂದ ಉಚ್ಚಮಟ್ಟದ ಜೀವನ ನಿರ್ವಹಣೆ ಸಾಧ್ಯವಾಗುವುದು.

ಇದನ್ನೇ ಎಷ್ಟೋ ಜನ ಉಚ್ಚಮಟ್ಟದ ಜೀವನ, ಅದರೊಟ್ಟಿಗೆ ಬರುವ ಗ್ಲಾಮರನ್ನು ಯಶಸ್ಸಿನೊಂದಿಗೆ ತಳಕು ಹಾಕುವುದುಂಟು. ನಿಜವಾಗಿಯೆಂದರೆ ಯಶಸ್ವಿ ಉದ್ದಿಮೆದಾರ ಇದಾವುದರ ಪರಿವೆಯೇ ಇಲ್ಲದೆ ಆಡಳಿತದಲ್ಲಿನ ಅದಕ್ಷತೆ, ಅಸಾಮರ್ಥ್ಯಗಳನ್ನು ನಿವಾರಿಸುವತ್ತಲೇ ಹೆಚ್ಚು ಗಮನ ಹರಿಸಿರುತ್ತಾನೆ.

"ವ್ಯಾವಹಾರಿಕತೆ ಕ್ರಿಯಾತ್ಮಕತೆಯನ್ನು ತಗ್ಗಿಸುತ್ತದೆ"

-ಕ್ರಿಯಾತ್ಮಕತೆಯನ್ನು ಸಂಕುಚಿತ ಅರ್ಥದಲ್ಲಿ ಬಳಸುವುದರಿಂದ ಈ ಭಾವನೆ ಸಾರ್ವತ್ರಿಕವಾಗಿದೆ. ವಾಸ್ತವವಾಗಿ ಕ್ರಿಯಾತ್ಮಕತೆ ಎಲ್ಲ ರಂಗಗಳಲ್ಲಿಯೂ ಇದೆ. ವ್ಯವಹಾರಕ್ಕೆ ಒಗ್ಗುವ ಹಾಗೆ ಅದನ್ನು ಉಪಯೋಗಿಸಿಕೊಂಡಷ್ಟೂ ವ್ಯವಹಾರದಲ್ಲಿ ಹೆಚ್ಚಿನ ಯಶಸ್ಸು ಸಿಗುವ ಸಾಧ್ಯತೆ ಜಾಸ್ತಿ.

ಯಶಸ್ಸಿನಿಂದ ನೀವು ಎಲ್ಲರ ಶಹಬ್ಬಾಸ್‌ಗಿರಿಯನ್ನು ಪಡೆಯುವಿರಿ

ಇದಕ್ಕಿಂತ ದೊಡ್ಡದಾದ ತಪ್ಪು ಕಲ್ಪನೆ ಮತ್ತೊಂದಿಲ್ಲ. ನೀವು ಯಶಸ್ಸನ್ನು ಸಾಧಿಸಿದಂತೆಲ್ಲ ನಿಮ್ಮ ಸುತ್ತಮುತ್ತಲಿನವರು ನಿಮ್ಮನ್ನು ಹೊಗಳಬಹುದಾದರೂ ಅದು ತೋರಿಕೆಗೆ ಮಾತ್ರ. ವಾಸ್ತವವಾಗಿ ಅವರು ನಿಮ್ಮನ್ನು ಅಸೂಯೆಯ ದೃಷ್ಟಿಯಿಂದಲೇ ನೋಡುತ್ತಾರೆ. ಆದ್ದರಿಂದ ಜಾಣರಾದವರು ಅಸೂಯೆಯನ್ನು ಯಶಸ್ಸಿನ ಉಪೋತ್ಪನ್ನವಾಗಿ ಪರಿಗಣಿಸುತ್ತಾರೆಯೆ ಹೊರತು ಆ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳುವುದಿಲ್ಲ. ಬದಲು, ಇತರರ ಯಶಸ್ಸಿನಲ್ಲಿ ಸ್ವಂತದ ಸಂತೋಷವನ್ನು ಕಾಣುವ ಇತರ ಯಶಸ್ವಿ ಜನರ ಸಂಗವನ್ನೇ ಹೆಚ್ಚು ಹೆಚ್ಚಾಗಿ ಅಪೇಕ್ಷಿಸುತ್ತಾರೆ.

-'ಎಂ. ದೀಪಾ'



- ಸೋನಿ

"ಐದೂ ಬೆರಳುಗಳು ಸಮನಾಗಿರುತ್ತವೆಯೆ?" -ಈ ಕನ್ನಡದ ಗಾದೆ ಮನುಷ್ಯರ ಸ್ವಭಾವದ ಭಿನ್ನತೆಯನ್ನು ಸೂಚಿಸಲು ಬಳಸಲ್ಪಡುವಂಥದ್ದು. ಹೌದು, ಎಲ್ಲ ಮನುಷ್ಯರ ಸ್ವಭಾವಗಳೂ ಒಂದೇ ತೆರನಾಗಿದ್ದಿದ್ದರೆ ಈ ಜಗತ್ತು ಸಪ್ಪೆಯ ಗುಪ್ಪೆಯಾಗಿಬಿಡುತ್ತಿತ್ತೋ ಏನೋ. ಹಾಗೆಯೆ, ಎಲ್ಲ ಬೆರಳುಗಳೂ ಸಮನಾಗಿದ್ದಿದ್ದರೆ ಮನುಷ್ಯನ ಬದುಕೇ ಅಸಹನೀಯವಾಗಿರುತ್ತಿತ್ತು. ಕೈಬೆರಳುಗಳನ್ನು ಉಪಯೋಗಿಸಿ ಆತ ಇಂದು ಮಾಡುತ್ತಿರುವ ಎಲ್ಲ ಕ್ರಿಯೆಗಳೂ ಇಲ್ಲವಾಗಿ ಅಥವಾ ಅಪರಿಚಿತ

# ಕೈಬೆರಳುಗಳ ಕುರಿತ ಕೆಲ ವಿಚಿತ್ರ ನಂಬಿಕೆಗಳು

ವಾಗಿರುತ್ತಿದ್ದವೋ ಏನೋ, ಬಹುಶಃ.

ಕೈಯೇ ಮನುಷ್ಯನ ಮೊಟ್ಟ ಮೊದಲ ಆಯುಧ; ಪ್ರಾರಂಭಿಕ ಉಪಕರಣ ಕೂಡ. ಇದಕ್ಕೆ ವ್ಯಾವಹಾರಿಕ ಹಾಗೂ ಧಾರ್ಮಿಕ ಮಹತ್ವವಿರುವಷ್ಟೇ ಆಧ್ಯಾತ್ಮಿಕ ಮತ್ತು ರಹಸ್ಯಾತ್ಮಕ ಮಹತ್ವವೂ ಇದೆ. ಧರ್ಮ ಹಾಗೂ ಪುರಾಣಗಳಲ್ಲಿ ಕೈ ಆಧ್ಯಾತ್ಮಿಕ ಶಕ್ತಿಯ ಪ್ರತೀಕವೂ ಆಗಿ ಪರಿಣಮಿಸಿದೆ. ಕೈಯ ಹೆಬ್ಬೆರಳು ಮತ್ತುಳಿದ ನಾಲ್ಕು ಬೆರಳುಗಳ ಯೋಗವು ಮಾನವೀಯತೆ, ಸ್ವಾಸ್ಥ್ಯ ಮತ್ತು ಪ್ರೇಮದ ದ್ಯೋತಕವೆನಿಸಿದೆ.

ಪ್ರಾಚೀನ ಕಾಲದಿಂದಲೇ ಕೈಬೆರಳುಗಳು ಧರ್ಮ ಮತ್ತು ಇಂದ್ರಜಾಲದ ರಹಸ್ಯಗಳಲ್ಲಿ ಮಹತ್ವದ ಪಾತ್ರವನ್ನಾಡುತ್ತ ಬಂದಿವೆ. ಜಗತ್ತಿನ ಸಮಸ್ತ ಧರ್ಮಗಳಲ್ಲಿ ಕಾಣಬರುವ ಒಪ್ಪಿತ ಸಿದ್ಧಾಂತವೆಂದರೆ "ಸಂವೇದನಾಶೀಲ ಕೈಬೆರಳುಗಳ ಅಗ್ರಭಾಗದಿಂದಲೇ ಶಕ್ತಿಯನ್ನು ಸಂಚರಿಸುವ ಹಾಗೆ ಮಾಡಬಹುದು" ಎಂಬುದು. ಕ್ರೈಸ್ತ ಧರ್ಮದ ದೀಕ್ಷಾ ವಿಧಿ ಹಾಗೂ ನಾಮಕರಣ ಸಂಸ್ಕಾರಗಳಲ್ಲಿ ಈ ಸಿದ್ಧಾಂತಕ್ಕೆ ವಿಶಿಷ್ಟ ಸ್ಥಾನ ದೊರೆತಿದೆ. ಉಂಗುರ ಬೆರಳಿನಿಂದ ಹೊರಟ ನರವೊಂದು ಸೀದಾ ಹೃದಯವನ್ನು ತಲುಪುವುದೆಂಬ ಭಾವನೆ ಕ್ರಿಶ್ಚಿಯನ್ನರಲ್ಲಿ ಇರುವುದರಿಂದ ನಿಶ್ಚಿತಾರ್ಥದಲ್ಲಿ ಉಂಗುರವನ್ನು ತೊಡಿಸುವ ವಾಡಿಕೆ ಬಳಕೆಯಲ್ಲಿ ಬಂತು.

ತತ್ವಜ್ಞಾನಿಗಳು ಮತ್ತು ಸಿದ್ಧ ಪುರುಷರ ಕುರಿತಾದ ಕತೆಗಳಲ್ಲಿ ಅವರು ತಮ್ಮ ಕೈಬೆರಳುಗಳಿಂದ ಅಗ್ನಿಯನ್ನೂ ತೇಜಸ್ಸನ್ನೂ ಉತ್ಪಾದಿಸಿ ಪ್ರಜ್ವಲಿಸುವಂತೆ ಮಾಡುತ್ತಿದ್ದರೆಂದು ಉಲ್ಲೇಖಿಸಿರುವುದು ಕಾಣುತ್ತದೆ. ಇನ್ನು ಕೆಲವು ಸಿದ್ಧ ಪುರುಷರು ಕೈಬೆರಳುಗಳ ಅಗ್ರಭಾಗವನ್ನೇ ಕಣ್ಣುಗಳಂತೆ ಬಳಸಿಕೊಳ್ಳುತ್ತಿದ್ದರೆಂದೂ ಹೇಳುವುದುಂಟು. ಅಂದರೆ ಅವರು ತಮ್ಮ ತೋರ್ಬೆರಳು ಇಲ್ಲವೆ ಹೆಬ್ಬೆರಳನ್ನು ಒಂದು ವಸ್ತು ಅಥವಾ ವ್ಯಕ್ತಿಗೆ ಸ್ಪರ್ಶಿಸುವ ಮಾತ್ರದಿಂದಲೇ ಎಲ್ಲವನ್ನೂ ಅರಿತುಕೊಳ್ಳಬಲ್ಲಂಥವರಾಗಿದ್ದರು. ಕ್ರಿಶ್ಚಿಯನ್ ಧರ್ಮದಲ್ಲಿ ಅನ್ಯಧರ್ಮೀಯನೊಬ್ಬನ್ನು ಕ್ರಿಶ್ಚಿಯನ್ನನನ್ನಾಗಿ ಮಾಡುವ ವಿಧಿಗಳಲ್ಲಿ ನಡುವಿನ ಬೆರಳು ಅಥವಾ ಮಧ್ಯಮಾಂಗುಲದಿಂದಲೇ ಎಲ್ಲ ಅನುಷ್ಠಾನಗಳು ಜರುಗುತ್ತವೆ. ಅಲ್ಲದೆ ಇದೇ ಧರ್ಮದಲ್ಲಿ, ಬಲಿ ನೀಡುವ ಸಂದರ್ಭದಲ್ಲಿ ಎತ್ತಿನ ನೆತ್ತರಿನಲ್ಲಿ ಬೆರಳನ್ನು ಅದ್ದುವ ಕ್ರಿಯೆ ಆ ಧರ್ಮದ ಪರಂಪರೆಯನ್ನು ತಾನು ಮುಂದುವರಿಸಿ

**ಇವು ಎಲ್ಲ ದೇಶಗಳಲ್ಲೂ ಎಲ್ಲ ಜನಾಂಗಗಳಲ್ಲೂ ಎಲ್ಲ ನಾಗರಿಕತೆಗಳಲ್ಲೂ ಪ್ರಚಲಿತದಲ್ಲಿವೆ.**

ಕೊಂಡು ಹೋಗುತ್ತೇನೆ ಎಂದು ಶಪಥ ತೊಡುವು ದರ ಸಂಕೇತವೂ ಆಗಿತ್ತಂತೆ. ಶತಮಾನಗಳಷ್ಟು ಹಿಂದೆ- ಅಂದರೆ ಕ್ರಿಶ್ಚಿಯನ್ ಧರ್ಮ ಹುಟ್ಟಿಕೊಂಡ ಹೊಸತಿನಲ್ಲಿ ದುಷ್ಟಶಕ್ತಿಗಳು ಮತ್ತಿತರ ವಿರೋಧಿ ಪರಾಶಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಆ ಧರ್ಮದ ಅನುಯಾಯಿಗಳು ಮುಖದ ಮೇಲೆ ತರ್ಜನಿ ಬೆರಳಿನಿಂದ ಕಾಲ್ಪನಿಕವಾದ ಕ್ರಾಸ್ ಚಿನ್ಹೆಯನ್ನು ಎಳೆದುಕೊಳ್ಳುತ್ತಿದ್ದರಂತೆ.

ಕೈಬೆರಳುಗಳ ಮಾಧ್ಯಮದಿಂದಲೇ ರೋಗೋಪ ಚಾರಗೈಯುವ ಒಂದು ಪದ್ಧತಿಯೂ ತೀರ ಹಿಂದೆ ರೂಢಿಯಲ್ಲಿತ್ತು. ಹದಿನೇಳನೆಯ ಶತಮಾನದಲ್ಲಿ ವೆಲೆಂಟಾಯ್ನ್ ಗ್ರೆಟೆಕ್ಸ್ ಎಂಬೊಬ್ಬ ಪರೋಕ್ಷದರ್ಶಿ ಇದ್ದ. ಆತ ತನ್ನ ಕೈಬೆರಳುಗಳ ಏಟಿನಿಂದಲೇ ರೋಗಿಯ ಜಾಡ್ಯ ಪಲಾಯನಗೈಯುವಂತೆ ಮಾಡು ತ್ತಿದ್ದನೆಂಬ ಪ್ರತೀತಿಯಿತ್ತು. "ಇಂಥ ಅಂಗುಲೀ ಪ್ರಹಾರದಿಂದ ದೇಹದ ದುರ್ಬಲ ಅಂಗಗಳು ಸಶಕ್ತಗೊಂಡು ಅಲ್ಲಿ ಸ್ವಾಭಾವಿಕವಾಗಿಯೇ ರಕ್ತ-ಸಂಚಾರವು ಆಗತೊಡಗುತ್ತದೆ" ಎಂಬುದು ಆತನ ಪ್ರತಿಪಾದನೆಯಾಗಿತ್ತು. ಕೆಲವು ಜನಾಂಗೀಯ ನಂಬಿಕೆಗಳ ಪ್ರಕಾರ ಬಲಗೈಯ ಮಧ್ಯಮ ಬೆರಳಿಗೆ ಗಾಯಗಳನ್ನು ಮಾಯಿಸುವ ವಿಲಕ್ಷಣ ಶಕ್ತಿ ಇರು ತ್ತದೆ.

ತೋರ್ಬೆರಳಿನಿಂದ ಗಾಯವನ್ನು ಮುಟ್ಟಬಾರದು; ಹಾಗೆ ಮಾಡಿದರೆ ಅದೆಂದೂ ಮಾಯು ವುದೇ ಇಲ್ಲ ಎಂಬ ನಂಬಿಕೆ ಈಗಲೂ ವ್ಯಾಪಕವಾಗಿದೆ. ಅಷ್ಟೇ ಅಲ್ಲ, ಈ ನಂಬಿಕೆಯಿಂದಾಗಿಯೇ ಪಾಪ, ತೋರ್ಬೆರಳನ್ನು 'ಪಾಷಾಣಾಂಗುಲಿ' ಎಂದೂ ಜರೆಯಲಾಗಿದೆ. ಆಕ್ಸ್‌ಫರ್ಡ್‌ಶೈರ್‌ನ ಒಂದು ನಂಬಿಕೆಯ ಪ್ರಕಾರವಂತೂ ಇದು "ಅಭಿ ಶಪ್ತ ಬೆರಳು." ದಕ್ಷಿಣ ಅಮೆರಿಕದ ನೀಗ್ರೋ ಜಾತಿಯವರು ತರ್ಜನಿ ಬೆರಳನ್ನು "ತಾಂತ್ರಿಕ ಅಂಗುಲಿ" ಎಂದು ಕರೆಯುತ್ತಾರೆ. ತುರ್ಕಿ ದೇಶ ದಲ್ಲಿ, "ಮನುಷ್ಯರು ಬಲಗೈಯ ಮೂರೇ ಬೆರಳು ಗಳನ್ನು ಮಾತ್ರ ಉಪಯೋಗಿಸಿ ಆಹಾರ ಸ್ವೀಕರಿಸಬೇಕು; ಯಾಕೆಂದರೆ ತೋರ್ಬೆರಳು ಮತ್ತು ಕಿರಿಬೆರಳನ್ನು ಶೈತಾನರು ಮಾತ್ರ ಊಟ ಮಾಡಲು ಬಳಸುತ್ತಾರೆ" ಎಂಬ ಮೂಢನಂಬಿಕೆಯಿದೆ. ನಾವು, ಸರ್ಪ ಬಂದಾಗ ಅದು ನಮಗೇನೂ ಮಾಡದಿರಲಿ, ನಮ್ಮಿಂದ ದೂರ ಸಾಗಿ ಹೋಗಲಿ ಎಂಬ ಭೀತಿ ಯಿಂದ "ಆಸ್ತಿಕಾಸ್ತಿಕ ಕಾಳಭೈರವ" ಎಂದು ಜಪಿಸುವ ಹಾಗೆ ತುರ್ಕಿ ದೇಶಿಗರು ಇಂದಿಗೂ ಮೊದಲ ಹಾಗೂ ಎರಡನೆಯ ಬೆರಳುಗಳನ್ನು ಸೇರಿಸಿ ಏನನ್ನೋ ಮಣಮಣಿಸುವ ಮೂಲಕ ದೆವ್ವ ಭೂತ ಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗುವುದಿದೆ.

"ಬೆರಳು ತೋರಿಸುವುದು" ಎಂದರೆ ಒಬ್ಬನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವುದು, ಕೇವಲವಾಗಿ ಕಾಣುವುದು ಎಂದೆಲ್ಲಾ ಅರ್ಥವಿದೆ. ಅದು ಅಶಿಷ್ಟತೆಯೂ ಹೌದು; ಅಪಾಯಕಾರಿಯೂ ಹೌದು. ಈ ಎರಡನೆಯ ಕಾರಣದಿಂದಲೇ ಕೆಲವು ಜನಾಂ ಗಗಳವರು ಇಂದಿಗೂ ಯಾವುದೇ ವಸ್ತು ಅಥವಾ ವ್ಯಕ್ತಿಯತ್ತ ಬೆರಳು ತೋರಿಸುವುದೇ ಇಲ್ಲ. ಹಾಗೆ ಮಾಡಿದರೆ ಆ ವಸ್ತು ಇಲ್ಲವೆ ವ್ಯಕ್ತಿ ನಾಶವಾಗುವುದು ಖಂಡಿತ ಎಂಬುದವರ ಬಲವಾದ ನಂಬಿಕೆ. ಅಮೆ ರಿಕನ್ ನೀಗ್ರೋಗಳಲ್ಲಿ ಯಾರತ್ತಲಾದರೂ ಬೆರಳು ತೋರಿಸಿದರೆ ಆ ಬೆರಳೇ ಕಳಚಿಕೊಂಡು ಬಿದ್ದುಬಿಡುತ್ತದೆಂಬ ಮೂಢನಂಬಿಕೆ ಮನೆ ಮಾಡಿದೆ. ಇನ್ನು ಕೆಲ ಬುಡಕಟ್ಟುಗಳಲ್ಲಂತೂ ಸೂರ್ಯ, ಚಂದ್ರ, ನಕ್ಷತ್ರಗಳತ್ತ ಬೆರಳು ತೋರಿಸುವುದೆಂದರೆ "ಆಪತ್ತನ್ನು ಆಮಂತ್ರಿಸಿಕೊಂಡಂತೆ."

ಕೈ ಬೆರಳುಗಳು ತಮ್ಮ ಆಕಾರಗಳಿಂದ ಆಯಾ ವ್ಯಕ್ತಿಯ ಭವಿಷ್ಯವನ್ನು ಸೂಚಿಸುತ್ತವೆ ಎಂಬ ವಿಶ್ವಾಸವೂ ಕೆಲವೆಡೆ ಇದೆ. ಉದ್ದ ಬೆರಳುಗಳಿರುವಾತ ಅಪವ್ಯಯಿ ಎಂಬುದು ಇಂಗ್ಲೆಂಡಿಗರ ನಂಬಿಕೆಯಾದರೆ, ಕಳ್ಳ ಎಂದು ಸ್ಕಾಟ್ಲಂಡಿನವರ ನಂಬಿಕೆ. ಆರು ಬೆರಳುಗಳ ವ್ಯಕ್ತಿ ಭಾಗ್ಯವಂತ ಎಂಬುದಾಗಿ ಪರಿಗಣಿಸಲ್ಪಡುವುದು ಭಾರತದಲ್ಲಷ್ಟೇ ಅಲ್ಲ, ಜಗತ್ತಿನ ಬಹುತೇಕ ಕಡೆಯೂ ಇದೇ ಭಾವನೆ ಇದೆ.

ಆದರೆ ಎರಡೂ ಕೈಗಳಲ್ಲಿ ತಲಾ ಆರು ಬೆರಳಿದ್ದ ಎನ್ ಬೊಲೀನ್ ಎಂಬಾಕೆ ಮಾತ್ರ ಕಾರಣವಿಲ್ಲದೆ "ಜಾರಿಣಿ" ಎಂಬ ಹಣೆಪಟ್ಟಿ ಅಂಟಿಸಿಕೊಳ್ಳಬೇಕಾಯಿತು. ●

# ಹುಯ್ಯೋ ಹುಯ್ಯೋ ಮಳೆರಾಯ...

"...... ಒಂದು ಕತೆ ಹೇಳುತ್ತೇನೆ. ಯಾಕೆ ಹೇಳುತ್ತೀನೋ ಗೊತ್ತಿಲ್ಲ. ನಿಮಗೆಲ್ಲಾ ಹೇಳಬೇಕು ಅನಿಸಿದ್ದರಿಂದಲೇ ಹೇಳುತ್ತೇನೆ."

- ಯಶವಂತ ಚಿತ್ತಾಲ

ಗವ್ವಳ್ಳಿಯಲ್ಲಿ ಬೆಳಗಾಯಿತೆಂಬುದನ್ನು ಸುತ್ತಲ ಮರಗಳಲ್ಲಿದ್ದ ಪಕ್ಷಿಗಳು ಕೀಕ್... ಕೀಕ್... ಎಂದು ಸದ್ದು ಮಾಡುತ್ತಾ ಗೂಡಿಂದ ಹೊರ ಹೋಗುವ ಮೂಲಕ ತೋರ್ಪಡಿಸಿದವು.

'ಸಿವಸಿವಾ ನಾರಾಯಣ' ಅಂದುಕೊಂಡು ಮೇಲೆದ್ದ, ತಾಯವ್ವ ತನ್ನ ಪಕ್ಕದಲ್ಲೇ ಮಲಗಿದ್ದ ಮಗ ಸಿದ್ರಾಜನಿಗೂ "ಮಗಾ... ಏಳಪ್ಪಾ..." ಅಂದಳು. ಅವಳ ಈ ಮಾತಿಗೆ ಸಿದ್ರಾಜ ಮೇಲೇಳದೆ, ಮಲಗಿಕೊಂಡೇ ನಿದ್ದೆಗಣ್ಣಲ್ಲಿ ಬಿಕ್ಕಳಿಸುತ್ತಾ... "ಸಾ... ಒಡೀಬ್ಯಾಡಿ ಸಾ... ಯೋಳ್ತೀನಿ ಸಾ... ದಿಸೀಸ್... ಎ... 'ಬಾಯ್, ದಟೀಸ್... ಎ... ಗರ್ಲ್" ಅಂದ.

ತಾಯವ್ವನಿಗೆ ಕರುಳು ಚುರುಕ್ಕೆಂದಿತು. ಮೆಲ್ಲನೆ ಹೊದಿಕೆ ಸರಿಸಿ ನೋಡಿದರೆ, ಸಿದ್ರಾಜನ ಕೈಕಾಲುಗಳ ಮೇಲೆ ಬಾಸುಂಡೆಗಳ ಬರೆ ಇನ್ನೂ ಹಾಗೇ ಇತ್ತು. ಮಗನಿಗೆ ಈ ರೀತಿ ಹೊಡೆದಿರುವ ಸ್ಕೂಲ್ ಮೇಸ್ಟರು ನಂಜಪ್ಪನ ಮೇಲೆ ತಾಯವ್ವನಿಗೆ ಯದ್ವಾತದ್ವಾ ಸಿಟ್ಟು ಬಂದು- "ಥೂ ಅವನ ಕೈ ಸೇದ್ಹೋಗ, ಅವನೆಡ್ತಿ ಮುಂಡೆ ಆಗ, ಮಕ್ಕಳಿಗೆ ಯಿಂಗಾ ವಡಿಯೋದು?" ಅನ್ನುತ್ತಾ ಹೊರಬಂದು ಈಗಾಗಲೇ ಅಲ್ಲಿ ಕಸಗುಡಿಸುತ್ತಿದ್ದ ಚೆಲುವಿಗೆ "ಆ ಮೇಸ್ಟು ನನಮಗ ನಮ್ಮುಡುಗನಿಗೆ ಯಿಂಗೆಲ್ಲಾ ವಡದವನಲ್ಲೇ ಚೆಲುವಿ..." ಅಂದಾಗ ಅವಳು "ಅಯ್ಯೋ ಅಕ್ಕ ಯಾವ ಉಡುಗ್ರ ಕೇಳಿದ್ರೂ ಅವನ ವಡತವೇಯ. ನಮ್ಮುಡುಗರಿಗೇ ಈ ತರ ಒಡಿಯೋವವನು ಅವನ ಹೆಡ್ತಿಗೆ ಯಾವ ತರ ಒಡೀಬೌದು? ಅವಳು ಈ ಸಿಕ್ಸೇನೆಲ್ಲಾ ಅದ್ದೆಂಗೆ ಸೈಸಿಕೊಂಡಾಳೋ, ಆ ಪರಮಾತುಮನಿಗೇ ಗೊತ್ತು" ಅಂದು ಬಿಟ್ಟಳು.

ಹಾಗೆ ನೋಡಿದರೆ, ತಾಯವ್ವನಿಗೆ ಸ್ಕೂಲುಗಳ ಮೇಲೆ ತಿರಸ್ಕಾರವೇನೂ ಇರಲಿ. ಐದನೇ ಕ್ಲಾಸಿಗೆ ಹೋದ ಒಂದು ವಾರಕ್ಕೇ ಸಿದ್ರಾಜ... 'ಎ ಫಾರ್... ಆಪಲ್, ಬಿ ಫಾರ್ ಬಕೆಟ್....' ಎಂದೆಲ್ಲಾ ಹೇಳುತ್ತಾ ತಾಯವ್ವನಿಗೆ- "ಇದು ಇಂಗ್ಲೀಸು ಕನವ್ವೋ..... ಇದ್ನ ಕಲುತ್ಕ ಬುಟ್ರೆ ಇಡೀ ಪ್ರಪಂಚಾನೇ ರೌಂಡೊಡೀಬೌದಂತೆ" ಅಂದಿದ್ದ. ತಾಯವ್ವ ಆಶ್ಚರ್ಯದಿಂದ "ಯಾವಾಗ್ಲೂ ಟಸ್.. ಪುಸ್... ಅಂತೀಯಲ್ಲ, ಇದು ಪರಂಗಿಯೋರ ಬಾಸೆಯೇನ್ಲಾ ಮಗ" ಎಂದು ಕೇಳಿದ್ದಕ್ಕೆ ಸಿದ್ರಾಜ "ಇರಬೌದೇನೋಪ್ಪ" ಅಂದಿದ್ದ. ಆ ದಿನವಿಡೀ ತನ್ನ ಮಗ ಪರಂಗಿಯೋರ ಬಾಸೆ ಕಲಿತು ಪರ್ಪಂಚವನ್ನೆಲ್ಲಾ ತಿರುಗಿ ಬಂದಂತೆ ಕನಸು ಕಂಡಿದ್ದ

**ಶಾಲೆ ಬಿಟ್ಟ ಸಿದ್ರಾಜನಿಗೆ ಊರೇ ಶಾಲೆಯಾಯಿತು ಆತ ಅಲ್ಲಿ ಕಲಿತ ಪಾಠಗಳು ಒಂದೇ ಎರಡೇ!**

- ಎ.ಆರ್. ಮಣಿಕಾಂತ್

ತಾಯವ್ವ ಈಗ ಮಗನ ಮೈಮೇಲಿನ ಬಾಸುಂಡೆ ಕಂಡು ಸ್ಕೂಲುಗಳಿಗೆ, ಅಲ್ಲಿನ ಮೇಸ್ಟರುಗಳಿಗೆ ಹಿಡಿಶಾಪ ಹಾಕುತ್ತಿದ್ದಳು.

ಬೆಳಗಾಗಿ ಸೂರ್ಯ ಮಾರುದ್ದ ಮೇಲೆ ಬಂದಿದ್ದರೂ ತಮ್ಮ ಆಳುಮಗ ಬೆಟ್ಟ ಇನ್ನೂ ಮಲಗೇ ಇರುವುದು ಕಂಡು ತಾಯವ್ವ ಸಿಟ್ಟಿನಿಂದ ಕುದಿಯುತ್ತಾ, ಕೊಟ್ಟಿಗೆಯಲ್ಲಿ ಮಲಗಿದ್ದವನಿಗೆ "ಲೋ... ಬೆಟ್ಟ, ಇದೇನ್ಲ ನಿನ್ನ ಕರಾಮತ್ತು, ಇಸ್ಟೊತ್ತಾದ್ರೂ... ಮಲಗಿದ್ದೀಯಲ್ಲ ನಿಂಗೇನ್ಲಾ ಬಂದಿರದು?" ಅಂದಳು. ಅವಳ ಠೇಂಕಾರಕ್ಕೆ ಬೆಟ್ಟನಿಂದ ಉತ್ತರವೇ ಇಲ್ಲ! ಅನುಮಾನಗೊಂಡ ತಾಯವ್ವ ತಾನೇ ಎಚ್ಚರಿಸಲೆಂದು ಬೆಟ್ಟನ ಹತ್ತಿರ ಹೋಗಿ ಮೈಮುಟ್ಟಿದವಳೇ ಒಂದು ಕ್ಷಣ ಅವಾಕ್ಕಾದಳು. ಜ್ವರದಿಂದ ಅವನ ಮೈ ಪೂರಾ ಬೆಂಕಿಯಂತೆ ಸುಡುತ್ತಿತ್ತು. ಈಗ ಇದ್ದಕ್ಕಿದ್ದಂತೆಯೇ ಎದುರಾದ ಸಂಗತಿಯನ್ನೇ ಚೆಲುವಿಯೊಂದಿಗೆ ಹೇಳುತ್ತಾ "ನಮ್ಮ ಮಕ್ಕಳ್ನ ಆ ರಾಕ್ಷಸರಂತಾ ಮೇಸ್ಟ್ರಿಗೆ ಒಪ್ಪೋದಕ್ಕಿಂತಾ ಕುರಿ ಮೇಯ್ಸೋಕೆ ಕಳಿಸುದೇ ಮೇಲು" ಅಂದಳು. ಅದಕ್ಕೆ ಚೆಲುವಿ "ಸರಿಯಾಗೇಳ್ದೇ ಬುಡಕ್ಕಾ, ಈಗ ಓದಿ ಯಾವ ಬಡ್ಡೀಮಗ ಉದ್ದಾರ ಆಗಿದ್ದಾನು? ಈಗ ಬರೀ ಓದಿದ್ರೇ ಸಾಲ್ದಂತೆ. ಕ್ಯಲ್ಸ ಬೇಕು ಅಂದ್ರೆ ಕೈಲಿ



ದುಡ್ಡಿರಬೇಕಂತೆ. ಇಲ್ದೇ ಓದ್ರೆ ಯಾರೂ ನಮ್ಮನ್ನ ಕೇರೇ ಮಾಡಾಕಿಲ್ವಂತೆ" ಅಂದುಬಿಟ್ಟಳು.

ಈ ವೇಳೆಗಾಗಲೇ ಮೇಲೆದ್ದು ಚೆಡ್ಡಿ ಸರಿಪಡಿಸಿಕೊಳ್ಳುತ್ತಾ ಗೋಡೆಯ ಹಿಂಬದಿಗೆ ಉಚ್ಚೆ ಹುಯ್ಯುತ್ತಾ ಇವತ್ತು ಆ ಮೇಸ್ಟರ ಏಟಿಂದ ಹ್ಯಾಗೆ ತಪ್ಪಿಸಿಕೊಳ್ಳೋದು? ಎಂದು ಯೋಚಿಸುತ್ತಿದ್ದ ಸಿದ್ರಾಜನಿಗೆ ಅವ್ವನೇ ತನ್ನನ್ನು ಸ್ಕೂಲಿಗೆ ಕಳಿಸಲ್ಲ ಎಂದು ತಿಳಿದಾಗ ಬಲೇ ಖುಷಿಯಾಯಿತು. ಕುರಿ ಮೇಯಿಸಲೆಂದು ಹೋದರೆ ಅಲ್ಲಿ ಸಿಗುವ ಕಬ್ಬು, ತೋಪಲ್ಲಿನ ಮಾವಿನಕಾಯಿ ಎಷ್ಟೊಂದು ರುಚಿಯಾಗಿರ್ತದೆ.. ಎಂದು ಸಿದ್ರಾಜ



ಕಲ್ಪಿಸಿಕೊಳ್ಳುತ್ತಿದ್ದರೆ, ಇನ್ನೇನು ಶುರುವಾಗಲಿರುವ ಮಳೆಗಾಲಕ್ಕೆ ಪೂರ್ವ ತಯಾರಿಯಾಗಿ ಊರೆಲ್ಲಾ ವ್ಯವಸಾಯದ ಕುರಿತು ಹತ್ತಾರು ಕೆಲಸ ಕಾರ್ಯ ಮಾಡುತ್ತಿದ್ದುದ ಕಂಡು ತಾಯವ್ವನ ನೆನಪು ತೀರಾ ಹಿಂದಕ್ಕೆ ಹೋಯ್ತು.

ಇಡೀ ಗವ್ವಳ್ಳಿಯನ್ನೇ ಆಳುವಂತಹ ಕುಟುಂಬವಲ್ಲದಿದ್ದರೂ ಸಣ್ಣೀರನದು. ಊಟ ಬಟ್ಟೆಗೆ ತೊಂದರೆಯಿರದ ಕುಟುಂಬವಾಗಿತ್ತು. ಹೊಲಗದ್ದೆಯ ಕೆಲಸವನ್ನು ನೋಡಿಕೊಳ್ಳುತ್ತಿದ್ದ ಸಣ್ಣೀರನಿಗೆ ಸಣ್ಣಪುಟ್ಟ ಕೆಲಸಗಳಲ್ಲಿ ನೆರವಾಗುವುದರೊಂದಿಗೆ ಕುರಿ ಮೇಯಿಸಿಕೊಂಡು ಬರುವ ಕಾರ್ಯವನ್ನೂ ಆಳುಮಗ ಬೆಟ್ಟನೇ ಮಾಡುತ್ತಿದ್ದುದರಿಂದ ತಾಯವ್ವನಿಗೆ ಮನೆ ಕೆಲಸ ಬಿಟ್ಟರೆ ಬೇರಾವುದೇ ಘನಂದಾರಿ ಕೆಲಸವಿರಲಿಲ್ಲ. ಹೀಗಿರುವಾಗ ಈ ಕುಟುಂಬದ ಮೇಲೆ ಅದ್ಯಾವ ರಾಕ್ಷಸನ ಕಣ್ಣು ಬಿತ್ತೋ ಏನೋ ಒಮ್ಮೆ ಇದ್ದಕ್ಕಿದ್ದಂತೆ ವಿಪರೀತ ಭೇದಿಯಾಗಿ ಕಾಲರಾಗೆ ಸಿಕ್ಕಿಕೊಂಡ ಸಣ್ಣೀರ ಪುನಃ ಮೇಲೇಳಲೇ ಇಲ್ಲ. ಗಂಡನ ಅಗಲಿಕೆಯ ದುಃಖದಿಂದ ಕೆಲವು ದಿನ ಅತ್ತು ಹೈರಾಣಾಗಿದ್ದ ತಾಯವ್ವ ಈಚೀಚೆಗೆ ತಾನೂ ಬದಲಾದ ಸ್ಥಿತಿಗೆ ಹೊಂದಿಕೊಳ್ಳತೊಡಗಿದ್ದಳು.

ಈ ಯೋಚನೆಯಲ್ಲಿಯೇ ಮುಳುಗಿದ್ದ ತಾಯವ್ವನಿಗೆ "ಅವ್ವಾ, ನಾನು ಇಸ್ಕೂಲಿಗೋಗಲಾ?" ಎಂಬ ಮಗನ ಸದ್ದಿಗೆ ಎಚ್ಚರಾಯಿತು. ಒಡನೆಯೇ "ಥೂ... ಥೂ... ಬ್ಯಾಡ ಕಲ ಮಗ, ಇವತ್ತೂವೆ ಆ ಮೇಸ್ಟ್ರು ನನಮಗ ವಡುದ್ರೆ ಏನು ಗತಿ? ಸುಮ್ನೆ ನಮ್ಮನೆಯ ಕುರಿ ಮೇಯಿಸ್ಕಂಬಾ" ಅಂದುಬಿಟ್ಟಳು.

ಅವ್ವ ಕೊಟ್ಟ ಕಾಫಿ ಕುಡಿದು, ಬೆಟ್ಟನಿಗೂ ಒಂದು ಲೋಟ ಕಾಫಿ ನೀಡಿದ ಸಿದ್ರಾಜ, "ಬೆಟ್ಟಣ್ಣೋ, ಇವತ್ತು ನಾನು ಕುರಿ ಮೇಯಿಸೋಕೆ ಹೋಗ್ತೀನಿ" ಅಂದಾಗ ಆ ಜ್ವರದ ನರಳಿಕೆಯಲ್ಲೂ ಬೆಟ್ಟ ಸಿದ್ರಾಜನನ್ನು ಹತ್ತಿರಕ್ಕೆ ಕರೆದು ಗುಟ್ಟು ಹೇಳುವವನಂತೆ ಕಿವಿಯಲ್ಲಿ "ಕುರಿ ಮೇಯಿಸಕೋಗ್ತಿಯಲ್ಲ, ಆಗೇನಾದ್ರೂ ಕಿಸ್ನ ಚಿಕ್ಕಿ ಜೊತೆ ಚೆಲ್ಲಾಟ ಆಡನು, ನೋಡ್ಕೋ"

ಎಂದುಸುರಿದ.

ಬೆಟ್ಟನ ದನಿಯ ಏರಿಳಿತದಿಂದಲೇ ಅದೊಂದು ಗುಟ್ಟಿನ ಸುದ್ದಿಯೆಂದರಿತ ಸಿದ್ರಾಜನಿಗೆ 'ಚೆಲ್ಲಾಟ' ಅಂದರೇನೋ ಗೊತ್ತಾಗಲಿಲ್ಲ. ತಾನೂ ಬೆಟ್ಟನಷ್ಟೇ ಮೆತ್ತಗೆ "ಚೆಲ್ಲಾಟ ಆಡದು ಅಂದ್ರೇನು?"- ಪ್ರಶ್ನಿಸಿದ. ಅದಕ್ಕೆ ಉತ್ತರ ಹೇಳುವವನಂತೆ ಬೆಟ್ಟ "ಕುರಿತಿಟ್ಟಿನ ರೋಜಾ ಮೆಳೆಗಳ ಮಧ್ಯೆಯೋ, ಕಲ್ಲು ಪೊಟರೆಗಳ ನಡುವೆಯೋ, ಅಥವಾ ಬೇರೆಲ್ಲಾದ್ರೂ ಸರಿಯೇ ಕಿಸ್ಣ ಚಿಕ್ಕಿಯ ಮೈಮೇಲೆಲ್ಲಾ ಕೈಯ್ಯಾಡಿಸನು, ಹುಶಾರಾಗಿ ನೋಡ್ಕೋ" ಅಂದಾಗ ಇದೊಂಥರಾ ಐನಾತಿ ಕೆಲಸ ಅಂದುಕೊಂಡೇ ಸಿದ್ರಾಜ ಕತ್ತೊಗ್ಗೆದ.

ಸ್ಕೂಲಿಗೆ ಚಕ್ಕರ್ ಹೊಡೆದು ಸಿದ್ರಾಜ ಕುರಿ ಬಿಡುತ್ತಿದ್ದಂತೆಯೇ ತಾಯವ್ವನಿಗೆ ಎಡಗಣ್ಣು ಕುಣಿಯತೊಡಗಿತು. ಅನುಮಾನ-ಭಯದಿಂದ ಹೊರಬಂದ ಕುರಿ ಮಂದೆಯನ್ನೇ ಗಮನಿಸತೊಡಗಿದವಳಿಗೆ ಒಂದರೆಗಳಿಗೆ ಮಾತೇ ಹೊರಡದಾಯಿತು. ಯಾಕೆಂದರೆ ಮುಂದಿನ ತಿಂಗಳು ಮಾರ್ನಮ್ಮಿ ಹಬ್ಬದಲ್ಲಿ ಹನುಮಂತರಾಯನಿಗೆ ಹರಕೆ ನೀಡಬೇಕಾಗಿದ್ದ ಟಗರು ಮರಿ ನಡುಗುತ್ತಾ ಇದೆ! ಕುರಿಮಂದೆಯಿಂದ ಟಗರೊಂದನ್ನೇ ಬೇರ್ಪಡಿಸಿ ಅದನ್ನು ಮನೆಯ ಬಳಿಯೇ ಕಟ್ಟಿಕೊಳ್ಳುವ ತಾಯವ್ವನ ಯೋಜನೆ ಸಫಲವಾಗಲಿಲ್ಲ. ಹುಶಾರಾಗಿ ಕುರಿ ಮೇಯಿಸಿಕೊಂಡು ಬರಲೆಂದು ಸಿದ್ರಾಜನನ್ನು ಹತ್ತಾರು ರೀತಿಯಿಂದ ಪುಸಲಾಯಿಸುತ್ತಾ, ಹೊಗಳುತ್ತಾ ಜೇಬಿನ ತುಂಬಾ ಎಳ್ಳು-ಅಕ್ಕಿ ತುಂಬಿ ಕೊಟ್ಟು ದಾರಿಯಲ್ಲಿ ಎಚ್ಚರಿಸುವವಳಂತೆ, "ಉಸಾರಾಗಿ ಕುರಿ ಮೇಯಿಸ್ಕಂಡು ಬಾರ್ಲಾಮಗ, ಜ್ವಾಪಾನ. ತ್ವಾಳ ಬಂದ್ಬುಟ್ಟದಂತೆ ಕನೋ, ಥೇಟ್ ನಮ್ಮನೆ ನಾಯಿಗೂ ಅದ್ಕೂ ಚಿಂಕ್ರನೂ ಯತ್ವಾಸನೇ ಇಲ್ವಂತೆ, ಹಂಗಿದ್ದದಂತೆ... ಟಗರು ಮರಿ ಕಡೆ ಜಾಸ್ತಿ ನಿಗಾ ಇರಲಿ" ಅಂದಳು. ಅವ್ವನ ಮಾತುಗಳಿಗಿಂತಲೂ ಚೆಲ್ಲಾಟದ ಗುಂಗಿನಲ್ಲೇ ಇದ್ದ ಸಿದ್ರಾಜ ತಾಯವ್ವನ ಮಾತುಗಳಿಗೆಲ್ಲಾ 'ಹೂಂ... ಹೂಂ....' ಅನ್ನುತ್ತಲೇ ಕುರಿತಿಟ್ಟು ಸೇರಿದ.

ಗವ್ವಳ್ಳಿಯ ಪಟೇಲರಾದ ಕೃಷ್ಣಪ್ಪಗೌಡರಿಂದ ತನ್ನಪ್ಪ ಮಾಡಿದ್ದ ಸಾಲದ ಹಣವನ್ನು ತೀರಿಸಲು ಗೌಡರ ಮನೆಯಲ್ಲಿ ಕುರಿ ಮೇಯಿಸುತ್ತಾ ಜೀತಕ್ಕಿದ್ದ ಚಿಕ್ಕಿ ಗವ್ವಳ್ಳಿಯ ಬಹಳಷ್ಟು ಜನರ ಮಾತಿಗೆ ಆಹಾರವಾಗಿದ್ದಳು. ಮೈ ಕೈ ತುಂಬಿಕೊಂಡು ಯೌವನಕ್ಕೆ ಪ್ರವೇಶಿಸಿಬಿಟ್ಟಿದ್ದ ಅವಳನ್ನು ಬಹಳಷ್ಟು ಜನ ಯಾವ್ಯಾವುದೋ ಕುಂಟು ನೆಪದಿಂದ ಮಾತಿಗೆಳೆದು ಮೈಮುಟ್ಟಿ ಆನಂದಪಡುತ್ತಿದ್ದರು. ದಿನಕ್ಕೆರಡು ಥರದ ಬಟ್ಟೆ ಧರಿಸಿ ಓಡಾಡುತ್ತಿದ್ದ ಮಂಡ್ಲ ಪಂಚಾಯ್ತಿ ಸೆಕ್ರೆಟರಿಯಿರಲಿ, ದಿನವೂ ಮಡಿ-ಮೈಲಿಗೆ ಅಂದುಕೊಂಡು ಪೂಜೆ ಮಾಡುತ್ತಿದ್ದ "ಐನೋರು" ಕೂಡಾ ಆಗೊಮ್ಮೆ ಈಗೊಮ್ಮೆ ಚಿಕ್ಕಿಯ ಮೈಮೇಲೆ ಕೈಯಾಡಿಸುತ್ತಿದ್ದುದನ್ನೂ ಪಟೇಲರಾದ ಕೃಷ್ಣಪ್ಪಗೌಡರೇ ಚಿಕ್ಕಿಯನ್ನು "ಮಡಿಕಬುಟ್ಟವರಂತೆ" ಎಂಬ ಗಾಳಿಮಾತುಗಳನ್ನೂ ಕೇಳಿದ್ದ ಸಿದ್ರಾಜನಿಗೆ ಈಗ ಕುರಿತಿಟ್ಟಿನಲ್ಲೇ ಚಿಕ್ಕಿಗಾಗಿ ಹಪಹಪಿಸುತ್ತಾ ಎಸ್ಸೆಲ್ಸಿಯಲ್ಲಿ ಐದಾರು ಸಲ ದುಮ್ಕಿ ಹೊಡೆದು ಊರು ಸೇರಿದ್ದ ಕಿಷ್ಣನೊಂದಿಗೆ ಬೆಟ್ಟನೂ ಇದ್ದಾನೆಂಬುದು ತಿಳಿದು ಸೋಜಿಗವಾಯ್ತು. ತೀರಾ ಹತ್ತಿರಕ್ಕೆ ಕರೆದು ಕಿವಿಯಲ್ಲಿ ಚೆಲ್ಲಾಟದ ಅರ್ಥವನ್ನು ಬೆಟ್ಟ ಹೇಳಿದ್ದಾಗ ಅದು ಸಂಪೂರ್ಣವಾಗಿ ಅರ್ಥವಾಗದಿದ್ದರೂ "ಎಲ್ಲರೂ ಹಲ್ಕಾಗಳೇ" ಎಂಬ ತೀರ್ಮಾನಕ್ಕೆ ಸಿದ್ರಾಜ ಬಂದು ಬಿಟ್ಟಿದ್ದ.

** *** **

ಈಗಾಗಲೇ ಕುರಿತಿಟ್ಟಿನಲ್ಲಿ ತನ್ನಂತೆಯೇ ಸ್ಕೂಲಿಗೆ ಚಕ್ಕರ್ ಹೊಡೆದು ಬಂದಿದ್ದ ಲೋಕೇಶನೂ ಕೃಷ್ಣ, ಚಿಕ್ಕಿಯರಂದಿಗೆ ಇರುವುದು ಕಂಡು ಸಿದ್ರಾಜನಿಗೆ ಖುಷಿಯಾಯಿತು. ಅವ್ವ ಕೊಟ್ಟಿದ್ದ ಎಳ್ಳು, ಅಕ್ಕಿಯನ್ನೆಲ್ಲಾ ತಿಂದು ಮುಗಿಸಿದ. ಗೌಡರ ಗದ್ದೆಯಲ್ಲಿ ಕಬ್ಬು ಮುರಿದೂ ತಿಂದದ್ದಲ್ಲದೆ ಕಡೆಗೊಮ್ಮೆ ಎಲ್ಲರೊಂದಿಗೆ ಸೇರಿಕೊಂಡು 'ಅಣ್ಣೆಕಲ್ಲಿನ ಆಟ'ವನ್ನೂ ಆಡಿದ.

ಇಷ್ಟೆಲ್ಲಾ ಆದರೂ ಸಿದ್ರಾಜನಿಗೆ 'ಚೆಲ್ಲಾಟದ ಕಿಂಚಿತ್ ದರ್ಶನವೂ ಆಗಲಿಲ್ಲ. ಆದರೆ ಚಿಕ್ಕಿ-ಕೃಷ್ಣ ಹೇಳಿದ್ದಕ್ಕೆಲ್ಲಾ ಕಿಸಕ್ಕನೆ ನಗುತ್ತಿದ್ದಳು.

ಅವಳೊಂದಿಗೆ ತಾನೂ ನಗುತ್ತಿದ್ದ ಸಿದ್ರಾಜ ಏನು ಮಾಡಲೂ ತೋಚದೆ ತೆಪ್ಪಗಿದ್ದ.

ಮಧ್ಯಾಹ್ನ ಆಗುತ್ತಿದ್ದಂತೆಯೇ ಈವರೆಗೂ ಅಲ್ಲಿರದೇ ಇದ್ದ ಮೋಡಗಳೆಲ್ಲಾ ಆಗಸದಲ್ಲಿ ಕಾಣಿಸತೊಡಗಿ ಬಿಸಿಲು-ನೆರಳಿನಾಟ ಶುರುವಾಯಿತು. ಒಂದು ವೇಳೆ ಮಳೆ ಬಂದರೂ ಬರಬಹುದೆನ್ನುವ ಅಂದಾಜು ಕುರಿಮೇಯಿಸುತ್ತಿದ್ದವರಿಗೂ ಇತ್ತು. ಯಾವುದೇ ಹರಟೆಯಿಲ್ಲದೆ ಈಗ ತುಸು ಮಂಕಾಗಿ ಕೂತಿದ್ದ ಚಿಕ್ಕಿಯನ್ನು ಕಂಡು ಕೃಷ್ಣ "ನೀವು ಸ್ಕೂಲಿಗೋಯ್ತಿರಲ್ಲಾ... ಒಂದು ಹಾಡೇಳುರ್‍ಲಾ ಹುಡುಗ್ರ ಮತ್ತ್ರ ಆ ಬಡ್ಡೀಹೈದನ ಮಳೆಯೂ ನಿಮ್ಮ ಹಾಡು ಕೇಳಿ ಪೇರಿ ಕಿಳ್ಬೇಕು... ಜೊತೆಗೇ ಹೊಟ್ಟೆ ಹುಣ್ಣಾಗುವರಿಗೆ ನಗೇನೂ ಬರಬೇಕು ಅಂತಾ ಹಾಡೇಳಿ..." ಅಂದಿದ್ದಕ್ಕೆ ಲೋಕೇಶ-

"ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತೋಟಕೆ ನೀರಿಲ್ಲ
ಕುಟ್ಟೋ ಕುಟ್ಟೋ ಮಳೆರಾಯ
ಕಬ್ಬಿನ ಗದ್ದೆಗೆ ನೀರಿಲ್ಲ"

-ಅಂದು ನಿಲ್ಲಿಸಿದಾಗ ಕೃಷ್ಣ ತಾತ್ಸಾರದಿಂದ "ಇದ್ಯಾವ ಸೀಮೆ ಹಾಡ್ಲಾ ಇದು? ಮಳೆ ನಿಲ್ಲಿಸೋವಂತದೇಳು ಅದ್ರೆ ಮಳೆ ಬರ್‍ಲಿ.... ಮಳೆ ಬರ್‍ಲಿ.... ಅಂತಿದ್ದೀಯಲ್ಲ. ಒಂಚೂರೂ ನಗುನೇ ಬರಲಿಲ್ವಲ್ಲೋ.." ಅನ್ನುತ್ತಾ ಸಿದ್ರಾಜನೆಡೆಗೆ ನೋಡಿದ.

ಮಳೆ ನಿಲ್ಲಿಸುವ ಹಾಡು ಸಿದ್ರಾಜನಿಗೂ ಗೊತ್ತಿರಲಿಲ್ಲ. ಆದರೆ ತನಗೆ ಗೊತ್ತಿರುವ ಹಾಡಿನಿಂದ ಎಲ್ಲರನ್ನೂ ನಗಿಸಬಲ್ಲೆನೆಂಬ ವಿಶ್ವಾಸವಿತ್ತು. ಹಾಡು ಹೇಳಲು ತಯಾರಾದವನು ಎಲ್ಲರನ್ನೊಮ್ಮೆ ನೋಡಿ, ಗಟ್ಟಿಯಾಗಿ-

"ಮಳೆ ಬಂತು ಮಳೆ ಬಂತು ಮಾತಾಡ್ಕಳಿ
ಕೆಮ್ಮಣ್ಣು ಗುಂಡೀಲಿ ಏನ್ಸಿಕ್ತು ಹೇಳಿ"

- ಅಂದುಬಿಟ್ಟ!

ಈ ಹಾಡು ಮುಗಿದೊಡನೆಯೇ ಕೃಷ್ಣನೂ, ಲೋಕೇಶನೂ ಗೊಳ್ಳನೆ ನಕ್ಕರೆ ಚಿಕ್ಕಿ ತಲೆಬಗ್ಗಿಸಿಕೊಂಡೇ ಕುಲುಕುಲು ನಗುತ್ತಿದ್ದಳು. ಈಗ ಅವರೊಂದಿಗೆ ಸೇರಿಕೊಂಡ ಸಿದ್ರಾಜ, ತಾನೂ ಕೇಕೆ ಹಾಕಿ ನಕ್ಕ.

ಬಸ್ ಸ್ಟಾಪಿನಲ್ಲಿ ನಿಂತಿದ್ದ ಇಬ್ಬರಲ್ಲಿ ಒಬ್ಬ: "ಅರೆರೆ, ನೋಡೋ ಅಲ್ಲಿ.. ನನ್ನ ಹೆಂಡ್ತಿ ಮತ್ತು ನನ್ನ ಲವರ್‍ರು ಇಬ್ರೂ ಒಟ್ಟೊಟ್ಟಿಗೆ ನಿಂತಿದ್ದಾರೆ!"

"ಅರೆ, ನಾನೂ ಈ ಮಾತನ್ನೇ ನಿನಗೆ ಹೇಳಬೇಕೂಂದ್ಕೊಂಡಿದ್ದೆ ಕಣೊ" ಎಂದ ಇನ್ನೊಬ್ಬ.

ಈವರೆಗೂ ಯಾವ್ಯಾವುದೋ ವಿಷಯಗಳಲ್ಲೇ ಮುಳುಗಿದ್ದವರು ಈಗ ಕುರಿಗಳನ್ನೊಮ್ಮೆ ನೋಡಲೆಂದು ದೃಷ್ಟಿ ಹಾಯಿಸಿದರೆ- ತುಂಬಾ ದೂರದಲ್ಲಿ ಐದಾರು ಕುರಿಗಳು ಮಾತ್ರ ಕಾಣುತ್ತಿದ್ದವು. ಪವಾಡವೆಂಬಂತೆ ಈವರೆಗೂ ದಟ್ಟಯಿಸಿದ್ದ ಮೋಡಗಳೆಲ್ಲಾ ಬೇರೆಲ್ಲಿಗೋ ಯಾತ್ರೆ ಹೊರಟಂತೆ ಚದುರಲಾರಂಭಿಸಿದ್ದವು. ಕೂಡಲೇ ಸಿದ್ರಾಜನಿಗೆ ತನ್ನ ಟಗರು ಮರಿ ನೆನೆದು ಗಾಬರಿಯಾಯಿತು. ಸಿದ್ರಾಜನ ಈ ಗೊಂದಲವನ್ನರಿತ ಕೃಷ್ಣ "ಲೋ, ಸಿದ್ರಾಜ, ನಿಮ್ದುಯ ಕನೋ ಕಳ್ಳಗುರಿ ಒಂಟೋಗಿರದು. ಲೋಕೇಶನೂ ನೀನೂ ಈ ಸಾರಿ ಹೋಗಿ ಎಲ್ಲವನ್ನೂ ಒಡಿಸ್ಕಬಂದ್ಬುಡಿ. ಇನ್ನೊಂದ್ಸಲ ನಾನೋಯ್ತಿನಂತೆ. ಓಡೋಗಿದ್ದು ಓಡ್ ಬಂದ್ಬುಡಿ" ಅನ್ನುತ್ತಾ ಚಿಕ್ಕಿಯೆಡೆಗೆ ಒಂಥರಾ ನೋಡಿ ನಕ್ಕ.

ಲೋಕೇಶನೊಂದಿಗೆ ತನಗೆ ಗೊತ್ತಿದ್ದ ಪೋಲಿ ಹಾಡುಗಳನ್ನೆಲ್ಲಾ ಹೇಳಿಕೊಂಡು ಕುರಿ ಓಡಿಸಿಕೊಂಡು ಬರಲು ಹೋಗುತ್ತಿದ್ದ ಸಿದ್ರಾಜ ತನ್ನುದ್ದಕ್ಕೂ ಒಮ್ಮೆ ದೃಷ್ಟಿ ಹಾಯಿಸಿ ನೋಡಿದ. ಅಷ್ಟು ದೂರದಲ್ಲಿ ಕುರಿಗಳನ್ನೆಲ್ಲಾ ಹೊಡೆದುಕೊಂಡು ಕೈಯಲ್ಲಿ ಚಾವಟಿಯನ್ನೂ ಝಳಪಿಸುತ್ತಾ ಬರುತ್ತಿರುವ ತೋಟದ ಚನ್ನೇಗೌಡನನ್ನು ಕಂಡೊಡನೆ ಸಿದ್ರಾಜನಿಗೆ, ಕುರಿಗಳು ಚನ್ನೇಗೌಡನ ಟಮೋಟೋ ಹಣ್ಣಿನ ತೋಟಕ್ಕೆ ನುಗ್ಗಿ ಅನಾಹುತ ಮಾಡಿವೆ. ಚನ್ನೇಗೌಡನಿಗೆ ಸಿಕ್ಕರೆ ತಮ್ಮ ಮೈ ಚರ್ಮ ಸುಲಿಯುತ್ತಾನೆ ಎಂದು ಗೊತ್ತಾಗುತ್ತಿದ್ದಂತೆ

ಲೋಕೇಶನೊಂದಿಗೆ ಬಂದ ದಾರಿಯಲ್ಲಿ ಹಿಂದಕ್ಕೇ ಫೇರಿ ಕಿತ್ತ. ಏದುಸಿರು ಬಿಡುತ್ತಾ ಓಡಿ ಬಂದು ನೋಡಿದರೆ ಅಲ್ಲಿ ಕೃಷ್ಣನೂ, ಚಿಕ್ಕಿಯೂ ನಾಪತ್ತೆ! ಲೋಕೇಶ ರಸ್ತೆ ಬದಿಗೇ ಇದ್ದ ಸೇತುವೆಯ ಕೆಳಗೆ ಅವಿತುಕೊಂಡು "ನೀನು ಬೇರೆ ಕಡೆ ಅವಿತ್ಕೋ ಹೋಗು, ಓಡು... ಓಡು"ಅಂದ. ಅವನ ಮಾತು ಮುಗಿವಷ್ಟರಲ್ಲಿಯೇ ಸಿದ್ರಾಜ ಕಬ್ಬಿನ ಗದ್ದೆಯೊಳಕ್ಕೆ ದೌಡಾಯಿಸಿದ.

ಅಲ್ಲಿ ಹೋಗಿ ನೋಡುತ್ತಾನೆ- ಕಬ್ಬಿನ ಗದ್ದೆಗೆ ನೀರು ಹೋಗಲೆಂದು ತೋಡಿದ್ದ ಗುಂಡಿಯೊಳಗೆ ಕೃಷ್ಣ ಮಲಗಿಕೊಂಡವನೆ! ಕೆಳಗೆ ಚಿಕ್ಕಿಯೂ ಇದ್ದಾಳೆ!! ಸಿದ್ರಾಜ ಗಾಬರಿಯಿಂದ "ಕಿಸ್ಣಣ್ಣೋ, ಚನ್ನೇಗೌಡಣ್ಣ ಓಡಿಸ್ಕ ಬತ್ತಾ ಅವ್ನೆ" ಅಂದ. ಸಿದ್ರಾಜನ ಹಾಜರಿಯಿಂದ ಕೃಷ್ಣ ತುಸು ಗೊಂದಲಕ್ಕೊಳಗಾದರೂ ಮರುಕ್ಷಣವೇ "ಅದ್ಕೇಯ ನಾವು ಯಿಂಗೆ ಅವಿತ್ಕಂಡಿರದು ಕನ ನೀನೂ ಅವಿತ್ಕೋ ಹೋಗೋ"ಎಂದ. ಸಿದ್ರಾಜ ಕಬ್ಬಿನ ಗದ್ದೆಯೊಳಗೆ ತೂರಿಕೊಂಡು ಉಸಿರು ಬಿಗಿಹಿಡಿದ ತುಸು ಹೊತ್ತಿನಲ್ಲೇ ರೋಷಾವಿಷ್ಟನಾದ ಚನ್ನೇಗೌಡ ಕೆರೆಯ ಏರಿಯ ಬಳಿಗೆ ಕುರಿಗಳನ್ನು ತಂದು "ಯಾವ ಬಡ್ಡೆತ್ತವ್ಲಾ ಕುರಿ ಮೇಯಿಸೋಕೆ ಬಂದಿರೋದು?" ಎಂದೆಲ್ಲಾ ಕೂಗಾಡುತ್ತಾ ಕಡೆಗೆ "ಥೂ ನಿಮ್ಮ" ಎಂದು ಬಯ್ದುಕೊಂಡು ಹೋದ.

ತುಸುಹೊತ್ತಿಗೆ ಅವಿತುಕೊಂಡಿದ್ದವರೆಲ್ಲಾ ಒಬ್ಬೊಬ್ಬರಾಗಿ ಹೊರಬಂದು ಅಲ್ಲಲ್ಲಿ ಮೇಯುತ್ತಿದ್ದ ಕುರಿಗಳನ್ನೆಲ್ಲಾ ಒಟ್ಟುಗೂಡಿಸಿದರು. ಕುರಿತಿಟ್ಟಿನಲ್ಲಿ ನಡೆದ ಯಾವ ಘಟನೆಯನ್ನೂ ಮನೆಯಲ್ಲಿ ಯಾರಿಗೂ ಬಾಯಿ ಬಿಡಬೇಡಿ ಎಂದು ಎಲ್ಲರಿಗೂ ಒಂದಷ್ಟು ಕಾಸು ಕೊಟ್ಟು ಪುಸಲಾಯಿಸಿದ್ದ ಕೃಷ್ಣ ತಾನೇ ಒಂದು ಬಂಡೆಗಲ್ಲೇರಿ ನಿಂತು ಕುರಿ ಎಣಿಸುತ್ತಾ "ಎಲ್ಲರ ಕುರಿಗಳೂ" ಇವೆ ಎಂದು ಘೋಷಿಸಿದ. ಸಿದ್ರಾಜ ತನ್ನ ಟಗರು ಮರಿಯ ಬಗ್ಗೆ ಕೇಳಿದಾಗ ದೂರದ ಐದಾರು ಕುರಿಗಳೆಡೆಗೆ ಕೈ ಮಾಡಿ ತೋರಿಸುತ್ತಾ "ಅಲ್ಲಿ ಕುರಿಗಳ ಮಧ್ಯೆ ನಿಂತದೆ ನೋಡು.. ಅದೇ ನಿನ್ನ ಟಗರು ಮರಿ ಕನ ನಡೀಲಾ" ಅಂದುಬಿಟ್ಟ. ಈ ವೇಳೆಗಾಗಲೇ ಸಂಜೆಯಾಗತೊಡಗಿದ್ದರಿಂದ ಎಲ್ಲರೂ ಊರು ತಲುಪಿದರು.

ಮನೆ ತಲುಪಿದೊಡನೆ ಈಗ ಒಂದಷ್ಟು ಗೆಲುವಾಗಿ ನಿಂತಿದ್ದ ಬೆಟ್ಟನಿಗೆ ಸಿದ್ರಾಜ "ಬೆಟ್ಟಣ್ಣೋ, ಕುರಿಗಳ್ನ ಕೂಡ್ಹಾಕೋ" ಎಂದವನೇ ಆಟವಾಡಲು ಓಡಿಹೋದ. ಒಂದೆರಡು ಸಲ ಕಣ್ಣೇಮುಚ್ಚೆ ಕಾಡೇ ಗೂಡೆ ಎಂದು ಆಡಿದ್ದನೋ ಇಲ್ಲವೋ ಬೆಟ್ಟ ಅಲ್ಲಿಗೇ ಬಂದವನು "ಸಿದ್ರಾಜ, ಟಗರು ಮರೀನೇ ಕಾಣ್ತಾ ಇಲ್ಲವಲ್ಲೋ, ಎಲ್ಲಿ ಹೊಂಟೋಯ್ತು? ಊರೊಳಗೆಲ್ಲಾ ನೋಡ್ಕಬರನ ಬಾ" ಅಂದ. ಸಿದ್ರಾಜನಿಗೆ ತುಂಬಾ ಭಯವಾಯಿತು. ಅವ್ವನಿಗೆ ಏನೆಂದು ಉತ್ತರ ಕೊಡುವುದು ಎಂಬ ಯೋಚನೆ ಬಂದೊಡನೆ ಅಳುವೇ ಬಂತು. ಅಳುತ್ತಲೇ ಬೆಟ್ಟನೊಂದಿಗೆ ಊರಿಡೀ ಹುಡುಕಿದ. ಅಕ್ಕಪಕ್ಕದ ಹಳ್ಳಿಗಳಿಗೂ ಹೋಗಿ ಬಂದ. ಟಗರು ಮರಿ ಸಿಗಲಿಲ್ಲ. ಇವರು ಹ್ಯಾಪು ಮೋರೆಯೊಂದಿಗೆ ವಾಪಸಾದಾಗಲೇ ತಾಯವ್ವ ಕೆಂಡಾಮಂಡಲವಾದಳು. ಸಿದ್ರಾಜನಿಗೆ "ಥೂ ನಿನ್ನ ಮೊಕಕ್ಕೆ ಬೆಂಕಿ ಹಾಕ, ಗಿಳಿಗೇಳಿದಂಗೆ ಹೇಳಿದ್ನಲ್ಲೋ" ಎನ್ನುತ್ತಾ ರೊಟ್ಟಿ ಹಲ್ಲೆಯಿಂದ ಚನ್ನಾಗಿ ಬಾರಿಸಿದಳು. ತುಸು ಹೊತ್ತಿಗೆಲ್ಲಾ "ನನಗ್ಯಾವ ಕೇಡುಗಾಲ ಬಂತಪ್ಪಾ ದೇವರೇ...." ಎಂದು ರೋಧಿಸತೊಡಗಿದಳು.

ದೇವರ ಹರಕೆಗೆ ಬಿಟ್ಟಿದ್ದ ಟಗರು ಮರಿ ಕಣ್ಮರೆಯಾಗಿರುವುದು ತಿಳಿದು ಇಡೀ ಗವ್ವಳ್ಳಿಯೇ ನಡುಗಿ ಹೋಯಿತು. ಪಟೇಲರಾದಿಯಾಗಿ ಹಿರಿಯರು ಅನ್ನಿಸಿಕೊಂಡವರೆಲ್ಲಾ ತಾಯವ್ವನ ಮನೆಯ ಪಡಸಾಲೆಯಲ್ಲಿ ಸೇರಿ ಗುಸುಗುಸು ಆರಂಭಿಸಿದರು. ಕಡೆಗೊಬ್ಬ ಹಿರಿಯ "ಈಗಾಗ್ಲೇ ಮಳೆಯಿಲ್ದೆ ಬೆಳೆಯೆಲ್ಲಾ ಒಣಗಿ ಹೋಗ್ಯವೆ, ಅಂತಾದ್ರಲ್ಲಿ ಈಗ ಅನುಮಂತರಾಯನೂ ನಮ್ಮ ಮೇಲೆ ಸಾಪ ಆಕ್ಬುಟ್ರೆ ಯೆಂಗೆ ಪಟೇಲ್ರೆ ಬದ್ಕದು?" ಅಂದ. ಪಟೇಲರಿಗೆ ಏನೂ ಹೇಳಲೂ ತೋಚದೆ, "ಏನ್ಮಾಡೋದೋ ನನಗೂ ಗೊತ್ತೇ ಆಗ್ತಿಲ್ಲಪ್ಪ. ಯಿಂದೆ ಸಣ್ಣೀರ ಏನು ತಪ್ ಮಾಡಿದ್ನೋ ಅದ್ಕೆ ಅವನನ್ನೇ ಬಲಿ ತಗಂಡ ದೇವರು ಈಗ ಇನ್ಯಾರ್ಮೇಲೆ ಕಣ್ಣಾಕಿದ್ದಾನೋ ಕಾಣ್ನಪ್ಪ" ಅಂದರು.

"ಈ ಟಗರು ಮರಿ ಸಿಗದಿದ್ರೆ ಬೇರೆ ಮರೀನೇ

ಕುಯ್ಯೋದಪ್ಪ" ಎಂದೊಬ್ಬ ನುಡಿದಾಗ ಐದಾರು ಜನ ಗಟ್ಟಿಯಾಗಿ "ದೇವರಿಗೆ ನಾವು ಯಿಂಗೆಲ್ಲಾ ಮೋಸ ಮಾಡಬೌದ? ಈ ತರವೆಲ್ಲಾ ಮಾಡಿದ್ರೆ ಅವ ನಮ್ಮನ್ನ ಜೀವಂತ ಉಳಿಸೋದುಂಟಾ? ಅದೆಲ್ಲಾ ಬ್ಯಾಡ ಕನ ನಡೀರಿ ಪಟೇಲ್ರೆ. ಐನೋರ ಹತ್ರ ಸಾಸ್ತ್ರ ಕೇಳ್ಬುಟ್ಟು ಆಮೇಲೆ ಇಚಾರ ಮಾಡೋಣ" ಅಂದವರೇ ಸಿದ್ರಾಜನನ್ನೂ ತಮ್ಮೊಂದಿಗೆ ಸೇರಿಸಿಕೊಂಡು ಐನೋರ ಮನೆ ತಲುಪಿದರು.

ತಮ್ಮ ವಿಶಾಲವಾದ ಹೊಟ್ಟೆಯ ಸುತ್ತಲೂ ಕೈಯಾಡಿಸುತ್ತ ರಸಬಾಳೆ ಹಣ್ಣಿನ ಫಲಾರವನ್ನು ಮೆಲ್ಲುತ್ತಿದ್ದ ಐನೋರು ಇವರನ್ನೆಲ್ಲಾ ಕಂಡು ಚಕಿತರಾಗಿ ಅವಸರದಿಂದ ಕೈತೊಳೆದುಕೊಂಡು ಹೊರಬಂದವರೇ "ಏನು ವಿಶೇಷ?" ಅಂದರು. ಎಲ್ಲಾ ವಿಷಯ ತಿಳಿದ ನಂತರ ಹಿಂತಿರುಗಿ ಒಳಹೋಗುವವರಂತೆ ನಿಂತು "ಅದೆಲ್ಲಾ ಸರಿ, ಶಾಸ್ತ್ರಕ್ಕೆ ಮೂರು ರೂಪಾಯಿ ಆಗುತ್ತೆ" ಅಂದರು. ಐನೋರ ಈ ವರಸೆಯಿಂದ ರೇಗಿದ ಪಟೇಲರು "ಬುಡಿ ಬುಡಿ ಐನೋರೆ, ಅಜ್ಜಿಗೆ ಅರಿವೆ ಚಿಂತೆ, ಮಗಳಿಗೆ ಇನ್ನೇನೋ ಚಿಂತೆ ಅನ್ನೋ ಹಾಗೆ ಊರೆಲ್ಲಾ ಮುಳುಗ್ತಾ ಇದ್ರೂ ಬೆದೆ ಹತ್ತಿದೋರಂಗೆ ಇದೆಂಥಾ ಮಾತು ನೀವು ಹೇಳ್ತಿರಾದು? ಮೂರಲ್ಲದಿದ್ರೆ ಮೂವತ್ತು ತಗೊಳ್ಳಿ, ಮೊದ್ಲು ಸಾಸ್ತ್ರ ಹೇಳಿ" ಅಂದಾಗ ಮಿಕ್ಕವರೂ 'ಸರಿ... ಸರಿ...' ಅಂದುಬಿಟ್ಟರು.

ಐನೋರು ದುಡುದುಡನೆ ಒಳನಡೆದವರೇ ಒಂದು ಹರಿದಿದ್ದ ಪಂಚಾಂಗ, ಐದಾರು ಕವಡೆ ಮಣೆಗಳೊಂದಿಗೆ ಸ್ಲೇಟು, ಬಳಪವನ್ನೂ ತಂದರು. ಕವಡೆಗಳನ್ನು ಸಿದ್ರಾಜನಿಗೆ ಕೊಡುತ್ತಾ "ನಿಮ್ಮ ಮನೆ ದೇವರನ್ನು ನೆನೆದುಕೊಂಡು ಮೂರು ಸಲ ಬಿಡು" ಅಂದರು. ಅನಂತರ ಸ್ಲೇಟಿನ ಮೇಲೆ ಲೆಕ್ಕ ಹಾಕುತ್ತಾ ಆರು, ಮೂರು, ಒಂಭತ್ತು ಅಂದುಕೊಂಡವರು ಮತ್ತೇನೇನೋ ಗುಣಗುಣಿಸಿದರು. ಕಡೆಗೆ ಕಣ್ತೆರೆದು "ಶನಿಕಾಟ ಇದೆ, ಟಗರು ಮರಿಗಾಗಿ ಹುಡುಕಿ. ಅದು ಸಿಗಲ್ಲಾ ಅಂತ ಮಾತ್ರ ಗ್ಯಾರಂಟಿ ಹೇಳಬಹುದು. ಸಿಗ್ತದೆ ಅಂತ ಹೇಳೋಕಾಗಲ್ಲ, ಸಿಗಬೌದು, ಬಿಡಬೌದು"

> **ಸಂಪಾದಕ:** "ರೀ ಸ್ವಾಮೀ, ನಿಮ್ಮ ಕವಿತೆಯೇನೋ ಚೆನ್ನಾಗಿರಬಹುದು. ಆದ್ರೆ ಹೀಗೆ ತಂದ್ರೆ ಹ್ಯಾಗೆ? ನೀಟಾಗಿ ಬರ್ದ್ಕೊಂಡಾದ್ರೂ ಬನ್ನಿ. ಇಲ್ಲಾಂದ್ರೆ ಟೈಪ್‌ಮಾಡಿ ತನ್ನಿ.."
>
> **ಕವಿ:** "ಟೈಪ್ ಮಾಡೋದು ಗೊತ್ತಿದ್ದಿದ್ರೆ ಕವಿತೆ ಬರೆಯೋ ಕೆಲಸಕ್ಕೆ ಯಾಕೆ ಕೈ ಹಾಕ್ತಿದ್ದೆ?"

ಅಂದು ಬಿಟ್ಟರು. ಇಷ್ಟರಲ್ಲಾಗಲೇ ರಾತ್ರಿ ಊಟದ ವೇಳೆಯಾಗಿದ್ದರಿಂದ ಬೆಳಿಗ್ಗೆ ಸುತ್ತುಮುತ್ತಲ ಹಳ್ಳಿಗಳಿಗೆ ಐದಾರು ಮಂದಿಯೂ ಕುರಿತಿಟ್ಟಿಗೆ ಬೆಟ್ಟನೊಂದಿಗೆ ಸಿದ್ರಾಜನೂ ಹೋಗಿ ಹುಡುಕುವುದೆಂದು ತೀರ್ಮಾನಿಸಿ ಎಲ್ಲರೂ ತಂತಮ್ಮ ಮನೆ ಸೇರಿದರು.

ರಾತ್ರಿ ಅವ್ವನಿಂದ ಬರೀ ಅನ್ನವನ್ನೇ ತುಪ್ಪ ಹಾಕಿಸಿಕೊಂಡು ಬಾರಿಸಬೇಕು, ಕೃಷ್ಣನಾಡಿದ ಚೆಲ್ಲಾಟವನ್ನು ಬೆಟ್ಟನಿಗೆ ಖುಷಿಯಿಂದ ಹೇಳಬೇಕು ಎಂದುಕೊಂಡಿದ್ದ ಸಿದ್ರಾಜನ ಯೋಚನೆಗಳೆಲ್ಲಾ ಗೋತಾ ಹೊಡೆದಿದ್ದವು. ತನಗಿನ್ಯಾವ ಕೇಡುಗಾಲ ಬಂತೋ ಎನ್ನುವ ಚಿಂತೆಯಲ್ಲಿ ತಾಯವ್ವ ಒಲೆಯನ್ನೇ ಹಚ್ಚಿರಲಿಲ್ಲ. ಉಪವಾಸದಿಂದ ತನ್ನ ಮಗ್ಗುಲಲ್ಲೇ ಮಲಗಿದ್ದ ಸಿದ್ರಾಜನ ಮೈದಡವಲೂ ಇಲ್ಲ. ಹಸಿವಿನಿಂದ ಕಂಗೆಟ್ಟಿದ್ದ ಸಿದ್ರಾಜ ಚಾಪೆಯ ಮೇಲೆ ಹೊರಳಾಡುತ್ತಾ ಒಮ್ಮೆ ಮೈಮುಟ್ಟಿ ನೋಡಿಕೊಂಡ. ಅವ್ವ ಬಾರಿಸಿದ್ದ ಕಡೆಯಲ್ಲೆಲ್ಲಾ ಬಾಸುಂಡೆ ಬಂದು 'ಚುರ್' ಎನ್ನುತ್ತಿತ್ತು. ಬಾಸುಂಡೆಯ ಮೇಲೆ ಕೈಯಾಡಿಸಿದವನಿಗೆ ಮತ್ತೊಮ್ಮೆ ತಾಯವ್ವ ಹೊಡೆಯಲು ಬಂದಂತೆ ಭಾಸವಾಗಿ "ಅವ್ವೋವ್... ನಾನು ತೆಪ್ ಮಾಡಿಲ್ಲ ಕನವ್ವ, ಒಡಿಬ್ಯಾಡ, ಒಡಿಬ್ಯಾಡ" ಅಂದು ಬಿಕ್ಕಳಿಸಿದ. ಮತ್ತೊಂದು ಮಗ್ಗುಲಾಗಿ ಮುಂದೇನು ಮಾಡುವುದೆಂದು ಚಿಂತಿಸುತ್ತಿದ್ದ ತಾಯವ್ವನ ಕರುಳು ಚುರುಕ್ಕೆಂದಿತು. ಪುಸೀರನೆ ಮಗನನ್ನು ತನ್ನೆದೆಗೆ ಒತ್ತಿಕೊಂಡು "ಹಾಳು ದೇವರು ಈಗಾಗ್ಲೇ ನಿಮ್ಮ ಅಪ್ಪನ್ನ ಕಿತ್ಕಂಡ. ನಿನ್ನನ್ನೂ ಕಿತ್ಕಂಡ್ರೆ ನಂಗ್ಯಾರ್ಲಾ ಮಗ ದಿಕ್ಕು? ಅಳಬ್ಯಾಡ, ಅಳಬ್ಯಾಡ" ಅನ್ನುತ್ತ ತಾನೇ ಅತ್ತುಬಿಟ್ಟಳು. ಅವ್ವನ ಈ ಪರಿಯನ್ನು

ಪಿಳಿಪಿಳಿ ಕಣ್ಣು ಬಿಡುತ್ತಲೇ ತುಸು ಹೊತ್ತು ನೋಡಿದ ಸಿದ್ರಾಜ ಆನಂತರ ನಿದ್ರೆಗೆ ಶರಣಾದ.

ಕತ್ತಲಿನ್ನೂ ಗವ್ವೆನ್ನುತ್ತಿರುವಾಗಲೇ ತಾಯವ್ವ ಸಿದ್ರಾಜನನ್ನೆಬ್ಬಿಸಿದಳು. ಹೊರಗೆ ಬೆಟ್ಟನೊಂದಿಗೆ ಮೈ ತುಂಬಾ ಕಂಬಳಿ ಸುತ್ತಿಕೊಂಡು ಇನ್ನಿಬ್ಬರು ನಿಂತಿದ್ದರು. "ಹುಶಾರಾಗಿ ಹೋಗ್ಬನ್ನಿ" ಎಂದು ಎಲ್ಲರಿಗೂ ಎಚ್ಚರಿಸಿದ ತಾಯವ್ವ ಸಿದ್ರಾಜನಿಗೆ "ನೀವು ಎಲ್ಲೆಲ್ಲಿ ಕುರಿ ವಡ್ಕಂಡು ಹೋಗಿದ್ರೋ ಅಲ್ಲೆಲ್ಲಾ ತೋರ್ಸು" ಎಂದಳು.

ಟಗರು ಮರಿ ಹುಡುಕಿ ಹೊರಟ ಬೆಟ್ಟ ಮತ್ತು ಸಂಗಡಿಗರು ಗವ್ವಳ್ಳಿಯಲ್ಲಿ ಯಾವ್ಯಾವ ಹೆಂಗಸರು ಚನ್ನಾಗಿದ್ದಾರೆ? ಯಾವ ಗಂಡಸು ಷಂಡ? ಯಾರು ಬೇರೆಯವಳ್ನ ಇಟ್ಕೊಂಡಿದಾರೆ.... ಎಂಬಿತ್ಯಾದಿಯನ್ನೆಲ್ಲಾ ಮಾತಾಡಿದವರು ಕಡೆಗೆ ತಿಟ್ಟು ಸಮೀಪಿಸಿದಾಗ ಕುರಿಗಳು ಯಾವ್ಯಾವ ಕಡೆಗೆ ಮೇಯಲು ಹೋಗಿದ್ದವೆಂದೆಲ್ಲಾ ಕೇಳಿಕೊಂಡು "ಲೋ... ಬೆಟ್ಟ, ನೀವು ಆ ಕಬ್ಬಿನ ಗದ್ದೆ ಕಡೆಯಿಂದಾ ನೋಡ್ಕಂಬನ್ನಿ. ನಾವು ಆ ಕಲ್ಲುಮಂಟಿಯೊಳಗೆಲ್ಲಾ ನೋಡ್ತೀವಂತೆ" ಅಂದು ಪರಸ್ಪರರು ಎರಡು ದಿಕ್ಕಿನಲ್ಲಿ ನಡೆದರು.

"ಇದರಲ್ಲಿ ನಿಂದೇನೂ ತಪ್ಪಿಲ್ಲ ಕಲ ಸಿದ್ರಾಜ, ಗಾಚಾರ ವಕ್ಕರಿಸಿಕೊಂಡ್ರೆ ಯಾರೇನು ತಾನೆ ಮಾಡೋಕಾಗ್ತದೆ? ನೀನೇನು ಬೇಕು ಅಂತ ಕುರೀನ ಬಿಟ್ಟು ಬಂದ್ಯಾ? ಇಲ್ಲ. ಹಂಗಿರೋವಾಗ ನಿಂದು ಹ್ಯಂಗಯ್ಯಾ ತಪ್ಪಾಗ್ತದೆ?" ಎಂದೆಲ್ಲಾ ಹೇಳಿದ ಬೆಟ್ಟ ಸಿದ್ರಾಜನನ್ನು ಹತ್ತಿರಕ್ಕೆಳೆದು "ಅದ್ಸರಿ, ನಾನೇಳಿದ್ನಲ್ಲಾ ಅದೇನ್ಸಮಾಚಾರ?" ಅಂದ. ಸಿದ್ರಾಜ ಎಲ್ಲವನ್ನೂ ಸಂಕ್ಷಿಪ್ತವಾಗಿ ಹೇಳಿದಾಗ ಬೆಟ್ಟ ಆಶ್ಚರ್ಯದಿಂದ "ಆ! ಏನಂದೆ? ಒಬ್ಬರ ಮೇಲೊಬ್ರು ಮಲಿಕಬುಟ್ಟಿದ್ರ?" ಅಂದವನು ಸಿದ್ರಾಜ ಹೌದೆಂಬಂತೆ ತಲೆಯಾಡಿಸಿದ್ದು ಖಚಿತಪಡಿಸಿಕೊಂಡು "ನಡಿ... ನಡಿ... ಅದೆಲ್ಲಿ ತೋರ್ಸು" ಅಂದ. ಇಷ್ಟರಲ್ಲಾಗಲೇ ಕತ್ತಲು ನಿಧಾನವಾಗಿ ಕರಗತೊಡಗಿ ಬೆಳಗು ಎಲ್ಲೆಡೆಯೂ ತನ್ನ ಪ್ರಭುತ್ವ ಸ್ಥಾಪಿಸತೊಡಗಿತ್ತು.

ಕಬ್ಬಿನ ಗದ್ದೆ ಹೊಕ್ಕು ಸಿದ್ರಾಜ ತೋರಿಸಿದೆಡೆಯೆಲ್ಲಾ ಕುತೂಹಲದಿಂದ ನೋಡಿದ ಬೆಟ್ಟ, ಆ ಗುಂಡಿಯಲ್ಲಿ ಬಳೆ ಚೂರುಗಳೂ ಬಿದ್ದಿರುವುದು ಕಂಡು ಕೈಕೈ ಹೊಸಕಿಕೊಳ್ಳುತ್ತಾ "ಬಡ್ಡೀ ಮಕ್ಳು, ಮಾಡ್ಕಬುಟ್ರಾ" ಅಂದ. ಮತ್ತೆ ಸಿದ್ರಾಜನೆಡೆಗೆ ತಿರುಗಿ "ಹೊಸಕಾಡುತಿದ್ರೇನೋ? ಅಂದ. "ಏ.... ಚನ್ನೇಗೌಡನ ಏಟು ತಪ್ಪಿಸ್ಕೋಕೆ ಅಂತ ಕಿವ್-ಕವ್ ಅನ್ನದೆ ಬಿದ್ದಿದ್ರು, ಕಣಣ್ಣೋ" ಎಂದ ಸಿದ್ರಾಜನಿಗೆ ಬೆಟ್ಟ "ಸುಮ್ಮಿರು... ಸುಮ್ಮಿರು... ನೀನೊಂದು....."

"ಓಯ್ ಬ್ಯಟ್ಟ, ಇಲ್ಲಿ ಟಗರು ಮರಿ ಇದೆ.... ಬನ್ರಲೋ...."

ದೂರದ ಕಲ್ಲುಮಂಟಿಯ ಕಡೆಯಿಂದ ಅಲೆಯಲೆಯಾಗಿ ತೇಲಿಬಂದ ದನಿಯಿಂದ ಪುಳಕಿತಗೊಂಡು ಬೆಟ್ಟನ ಮಾತು ಕೇಳಿಸಿಕೊಳ್ಳದೆ ಸಿದ್ರಾಜ ಕಲ್ಲುಮುಳ್ಳು ಅನ್ನದೇ ಓಡಿದ. ಉಳಿದಿಬ್ಬರು 'ನರಿಪೊಟರೆ' ಎಂದೇ ಖ್ಯಾತವಾಗಿದ್ದ ಒಂದು ಬಂಡೆಯ ಬಳಿ ನಿಂತಿದ್ದರು. ಅಲ್ಲಿಗೆ ಓಡಿ ಬಂದ ಸಿದ್ರಾಜ ನಿಧಾನವಾಗಿ ಒಳಗೆ ಇಣುಕಿ ನೋಡಿದರೆ ಟಗರು ಮರಿ ಆರಾಮಾಗಿ ಮಲಗಿತ್ತು. ಸಿದ್ರಾಜನಿಗೆ ಖುಷಿಯೋ ಖುಷಿ. ಆ ಪೊಟರೆಯೊಳಕ್ಕೆ ನಿಧಾನವಾಗಿ ತೆವಳಿಕೊಂಡು ಹೋದವನು ಟಗರನ್ನು ಆತ್ಮೀಯವಾಗಿ ತಬ್ಬಿಕೊಂಡ. ರಾತ್ರಿಯ ಒಂಟಿತನದ ಭೀಕರತೆಯನ್ನರಿತೋ, ಸಿದ್ರಾಜನನ್ನು ಗುರ್ತಿಸಿಯೋ ಅದೂ ಕೂಡ 'ಬ್ಯಾ... ಬ್ಯಾ...' ಅಂದಿತು.

ಟಗರು ಮರಿಯನ್ನು ಊರಿಗೆ ಕರೆತರುವಾಗ ಬೆಟ್ಟ "ಇದಲ್ಲವೇನ್ರಯ್ಯಾ ಚೋಜಿಗ ಅಂದ್ರೆ, ನರಿಪೊಟರೆಯೊಳಗೆ ಒಂದು ರಾತ್ರಿ ಇದ್ರೂ ಟಗರು ಮರಿ ಬದುಕದೆ ಅಂದ್ರೆ ನಂಬೋಕಾಗ್ತದ?" ಅಂದಾಗ ಈಗಾಗಲೇ ಕಂಬಳಿಯನ್ನು ಮೈಮೇಲೆ ಟವಲ್ಲಿನಂತೆ ಹಾಕಿಕೊಂಡಿದ್ದ ಇನ್ನೊಬ್ಬ "ಏ... ಅದೆಲ್ಲಾ ಅನುಮಂತರಾಯನ ಮೈಮೆ ಕಣ್ರೋ, ದೇವರ ವಸ್ತೂನ ನರಿಯೇನು? ಉಲಿ-ಸಿಮ್ಮಗಳೇ ಮುಟ್ಟಕುಲ್ಲವಂತೆ ಅಂತೀನಿ! ಅಕಸ್ಮಾತ್ ಏನರಾ ರಾತ್ರಿನಾಗೆ ನರಿಬಂದು ಮುಟ್ಟಿತ್ತು ಅಂದ್ಕೋ, ಈ ಟಗರನ್ನು ಮುಟ್ಟಿದ್ದಂಗೆ ಅದೇ ಫೈಸಲಾಗಿ ಬಿಡದು ಗೊತ್ತೆ... ಅನುಮಂತರಾಯ ಅಂದ್ರೆ ಸಾಮಾನ್ಯನೆ?" ಅಂದ.

ಟಗರು ಮರಿ ಪುನಃ ಕ್ಷೇಮವಾಗಿ ವಾಪಸ್

ಬಂತೆಂದು ತಿಳಿದಾಗ ಗವ್ವಳ್ಳಿಯ ಪ್ರತಿಯೊಬ್ಬರೂ ಸಂಭ್ರಮಿಸಿದರು. ಸಿದ್ರಾಜನಿಗೆ ಹೊಡೆದಿದ್ದೇ ತಪ್ಪಾಯ್ತು ಎನ್ನುವಂತೆ ತಾಯವ್ವ ಅವನ ಮೈಮೇಲೆಲ್ಲಾ ಪ್ರೀತಿಯಿಂದ ಕೈಯಾಡಿಸಿದಳು. ದೇವಾಲಯದಲ್ಲಿ ಪೂಜೆ ಮಾಡುತ್ತಿದ್ದ ಐನೋರು ಕೂಡ "ನಾನು ಶಾಸ್ತ್ರ ಹೇಳಿರಲಿಲ್ಲವೇನ್ರಯ್ಯಾ? ನೋಡಿ ಈಗ" ಅಂದರೆ ಪೂಜೆಗೆ ಬಂದಿದ್ದವರು "ಸಿಕ್ಕೇ ಬುಡ್ತದೆ ಅಂತೇನೂ ನೀವೇಳಿರಲಿಲ್ಲವಲ್ಲಾ" ಎಂದು ಅನುಮಾನಿಸಿದರು. ಇದರಿಂದ ಸಿಟ್ಟುಗೊಂಡ ಐನೋರು "ನಾನು ಕುರಿಹುಡುಕಿ, ಸಿಗಬೌದು ಅಂದಿರಲಿಲ್ಲವೇನ್ರಯ್ಯಾ? ಸಿಗಬೌದು ಅಂದ್ರೇನು? ಸಿಗ್ತದೆ ಅಂತ ಅಲ್ಲವಾ?" ಎಂದು ದಬಾಯಿಸಿದರು. ಪಟೇಲರಾದಿಯಾಗಿ ಎಲ್ಲರೂ ಸಧ್ಯ ಒಂದು ಕಷ್ಟ ಕಳೆಯಿತೆಂಬಂತೆ ನಿಟ್ಟಿಸಿರುಬಿಟ್ಟರು.

ಇದಾದ ಕೆಲವು ದಿನಗಳಲ್ಲಿಯೇ ಟಗರು ಮರಿಯ ರೋಗ ಇದ್ದಕ್ಕಿದ್ದಂತೆಯೇ ಮಂಗಮಾಯವಾಯಿತು. ಹನುಮಂತರಾಯನ ಈ ರೀತಿಯ ತೆರಮರೆಯ ಪವಾಡ ಕಂಡ ಜನ ಟಗರು ಮರಿಗೆ ನಾವು ಸರಿಯಾಗಿ ಆರೈಕೆ ಮಾಡದಿರುವುದರಿಂದಲೇ ದೇವರು ಈ ಥರದ ಪರೀಕ್ಷೆ ಮಾಡುತ್ತಿದ್ದಾನೆಂದುಕೊಂಡರು. ಅಂದಿನಿಂದ ಟಗರು ಮರಿ ತಾಯವ್ವನಿಗೆ ಮಾತ್ರ ಸೇರಿರದೆ ಇಡೀ ಊರಿಗೇ ಸೇರಿದ ದೇವರ ವಸ್ತು ಅನ್ನಿಸಿಕೊಂಡಿತು. ನಂತರದ ದಿನಗಳಲ್ಲಿ ಊರ ಜನರೆಲ್ಲಾ ಅದಕ್ಕೆ ಐದಾರು ರೀತಿಯ ತಿಂಡಿ ಕೊಡುತ್ತಾ ಹೊಲಗಳಿಗೂ ಬಿಟ್ಟು ಮೇಯಿಸುತ್ತಾ, ಮುಂದೆ ಅದರ ಚರ್ಬಿಯೇ ಎಷ್ಟು ದಪ್ಪವಿರಬಹುದು, ಅದರ ಮಾಂಸ ಎಷ್ಟೊಂದು ರುಚಿಯಾಗಿರಬಹುದು... ಎಂದೆಲ್ಲಾ ಲೆಕ್ಕ ಹಾಕುತ್ತಿದ್ದರು.

* * *

ನೋಡ ನೋಡುತ್ತಿದ್ದಂತೆಯೇ ಬಂದು ಬಿಟ್ಟ ಮಾರ್ನಮ್ಮಿ ಹಬ್ಬವನ್ನು ಗವ್ವಳ್ಳಿಯ ಜನ ಅದ್ದೂರಿಯಾಗಿ ಆಚರಿಸಿದರು. ಹಬ್ಬದ ಮರುದಿನ ಟಗರು ಮರಿ ಕುಯ್ದು ಬಾಡಿನ ಗುಣಗಾನ ಮಾಡುತ್ತಾ ಹೊಟ್ಟೆ ಬಿರಿಯುವಂತೆ ತಿಂದರು. ಈವರೆಗೂ ಕೃಷ್ಣ-ಚಿಕ್ಕಿಯ ವಿಷಯದಲ್ಲಿ ಮೌನವಾಗಿದ್ದ ಬೆಟ್ಟ ಈ ಮದ್ಯೆ ಕೃಷ್ಣನೊಂದಿಗೆ ಜಗಳವಾಡಿಕೊಂಡವನು ಆ ಸಿಟ್ಟಿನಲ್ಲಿಯೇ ಊರಲ್ಲೆಲ್ಲಾ ಬಿಸಿ ಬಿಸಿ ಸುದ್ದಿ ಹರಡಿದ. ಇದಕ್ಕೆಲ್ಲಾ ಇಂಬುಕೊಡುವಂತೆ ಒಂದು ದಿನ ಇದ್ದಕ್ಕಿದ್ದಂತೆಯೇ ಪಟೇಲರ ಮನೆಯಿಂದ ತನ್ನೂರಿಗೆ ಓಡಿ ಹೋದ ಚಿಕ್ಕಿ ನಂತರದ ದಿನಗಳಲ್ಲಿ ಅಲ್ಲಿಂದಲೂ ಕಾಣದಾದಳು.

ಗವ್ವಳ್ಳಿಯಲ್ಲೀಗ ಸುದ್ದಿಗಳು ಲಂಗುಲಗಾಮಿಲ್ಲದೆ ಒಂದರ ಹಿಂದೊಂದರಂತೆ ಪುಂಖಾನುಪುಂಖವಾಗಿ ಹಬ್ಬಿಕೊಂಡವು. ಹೆಂಗಸರಲ್ಲಿ ಕೆಲವರು "ಚಿಕ್ಕಿ ಪಟೇಲ್ರಿಗೇ ಬಸುರಾಗಿದ್ಲಂತೆ ಕಣೇ... ಮೈಯಿಳಿಸೋಕೆ ಅಂತ ಪಟೇಲರೇ ಕಾಸುಕೊಟ್ಟು ಬೆಂಗಳೂರ್ಗೆ ಕಳ್ಸಿದಾರಂತೆ" ಅಂದರೆ, ಕೆಲವರು, "ಇಂತಹ ಹುಡುಗಿಗೆ ಮದುವೆ ಮಾಡೋದು ಬಿಟ್ಟು ಜೀತಕ್ಕಿರಿಸವಳಲ್ಲ... ಅವರವ್ವ ಮುಂಡೆಗೆ ಅದೆಂಗೆ ಮನಸ್ಸು ಬಂತು ಅಂತೀನಿ" ಅಂದರು. ಇವುಗಳೊಂದಿಗೇ "ಐನೋರು ಚಿಕ್ಕಿಯ ದೇವಸ್ಥಾನದೊಳಗೇ ತಬ್ಕಬುಟ್ಟಿದ್ರಂತೆ... ಮಂಡ್ಲು ಪಂಚಾಯ್ತಿ ಸೆಕ್ರೆಟರಿಯೂ ಅದೆಲ್ಲೋ ಯಿಡ್ಕಬುಟ್ಟಿದ್ನಂತೆ...." ಎಂಬ ಸುದ್ದಿಗಳು ಬಂದರೂ ಅದನ್ನೊಪ್ಪದ ಮತ್ತೆ ಕೆಲವರು "ಈ ಕುರಿಕಾಯೋಕೆ ಹೋಗೋ ಮುಂಡೇಗಂಡ್ರೇ ಯಾಕೆ ಈ ಕ್ಯಲ್ಸ ಮಾಡಿರಬಾರ್ದು? ಅವಕ್ಕೇನಾದ್ರೂ ಬೇರೆ ಕೇಮೆಯಿದ್ದತೆ? ಕುರಿ ಮೇಯಿಸೋಕೆ ಅಂತ ಹೋಗಿ ಹಿಂಗೆಲ್ಲಾ ಮಜಾ ಉಡಾಯಿಸೋದು ಅಷ್ಟೇ ಅಲ್ಲವೆ?" ಎಂದು ಹೇಳುತ್ತಲೇ ಕಡೆಗೊಮ್ಮೆ "ಆ ಸುದ್ದಿಯ ಬುಡಿ ಅತ್ಲಾಗೆ, ಅದೇನು ಯಾರೂ ಮಾಡಬಾರ್ದ ಕೇಮೆಯೆ? ಅಂತಹ ದೇವಾನುದೇವತೆಗಳೇ ಬೇರೆಯೋರ್ನ ಮಡಿಕಂಡಿದ್ರು ಅನ್ನುವಾಗ ನಮ್ಮಂತ ನರಮನುಷ್ಯರು ಯಾವ ಮೂಲ್ಗೆ" ಎಂದು ಮಾತು ಮುಗಿಸುತ್ತಿದ್ದರು.

ಇದಾದ ನಂತರವೂ ಗವ್ವಳ್ಳಿಯ ಜನರ ನಾಲಿಗೆಯ ಮೇಲೆ ಟಗರು ಮರಿಯ ಕತೆಯೊಂದಿಗೇ ಚಿಕ್ಕಿಯ ಮೈಮಾಟದ ಕತೆಯೂ ಬಹುಕಾಲ ನಲಿಯುತ್ತಲೇ ಇತ್ತು. ●



# ನ್ಯಾಯಾತಿರಿಕ್ತ ತಪ್ಪೊಪ್ಪಿಗೆಯ ಮಹತ್ವ

- ಎಸ್. ನಾರಾಯಣಮೂರ್ತಿ

ಒಬ್ಬ ವ್ಯಕ್ತಿ ಯಾವುದಾದರೂ ಅಪರಾಧಿ ಕೃತ್ಯವನ್ನು ಎಸಗಿದ್ದರೆ ಅವನು ವಾಸ್ತವಿಕವಾಗಿ ದಂಡಾಧಿಕಾರಿಯ ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಪಡುತ್ತಾನೆ. ಅಭಿಯೋಜಕರು ಅವನು ಕೃತ್ಯವನ್ನೆಸಗಿದ್ದು ನಿಜವೆಂದು ಸಾಬೀತುಪಡಿಸಲು ನಂಬಲರ್ಹವಾದ ಸಾಕ್ಷ್ಯವನ್ನು ನ್ಯಾಯಾಲಯಕ್ಕೆ ನೀಡಬೇಕಾಗುತ್ತದೆ. ಸಾಕ್ಷ್ಯಾಧಾರದಿಂದ ಅವನ ತಪ್ಪು ಸಾಬೀತಾದರೆ ಅವನಿಗೆ ನ್ಯಾಯಾಲಯವು ಶಿಕ್ಷೆಯನ್ನು ವಿಧಿಸುತ್ತದೆ. ಅವನ ಮೇಲಿನ ಆರೋಪಕ್ಕೆ ತಕ್ಕ ಪುರಾವೆಯಿಲ್ಲದಿದ್ದರೆ ನ್ಯಾಯಾಲಯವು ಅವನನ್ನು ನಿರ್ದೋಷಿಯೆಂದು ನಿರ್ಧರಿಸಿ ದೋಷಮುಕ್ತಗೊಳಿಸುವ ಆದೇಶವನ್ನು ಕೊಡುತ್ತದೆ. ಇದು ಸ್ಥೂಲವಾದ ನ್ಯಾಯಾಲಯದ ವಿಚಾರಣಾ ಪ್ರಕ್ರಿಯೆಯ ವಿವರ.

ಆರೋಪಿಯ ವಿರುದ್ಧ ಆರೋಪವನ್ನು ಸಾಬೀತುಪಡಿಸಲು ನ್ಯಾಯಾಲಯಕ್ಕೆ ಮೌಖಿಕ ಅಥವಾ ಸಾಂದರ್ಭಿಕ ಅಥವಾ ಅವೆರಡನ್ನೂ ಒಳಗೊಂಡಂತಹ ಸಾಕ್ಷ್ಯವಿರಬೇಕಾಗುತ್ತದೆ. ಆದರೆ ಹಲವೊಂದು ವೇಳೆ ಅಪರಾಧಿಯು ಕೃತ್ಯವನ್ನೆಸಗುತ್ತಿರುವಾಗ ಅದನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ಸಾಕ್ಷಿಗಳು ಇರಲಾರರು; ಅವನ ಕೃತ್ಯಕ್ಕೆ ಸಾಂದರ್ಭಿಕ ಸಾಕ್ಷ್ಯವೂ ದೊರಕದೇ ಇರಬಹುದು. ಅಂತಹ ಸನ್ನಿವೇಶಗಳಲ್ಲಿ ನ್ಯಾಯಾಲಯಗಳು ಅಪರಾಧ ಸಾಬೀತಾಗಿಲ್ಲವೆಂಬ ಕಾರಣಕ್ಕಾಗಿ ಆರೋಪಿಯನ್ನು ಬಿಡುಗಡೆಮಾಡಲು ಆದೇಶಿಸಬೇಕಾಗುತ್ತದೆ. ಆದ್ದರಿಂದಲೇ ಅಪರಾಧಿ ಕೃತ್ಯದ ಹಲವಾರು ಪ್ರಕರಣಗಳಲ್ಲಿ ಆರೋಪಿಗಳನ್ನು ನ್ಯಾಯಾಲಯಗಳು ಕಟ್ಟಕಡೆಗೆ ದೋಷಮುಕ್ತಗೊಳಿಸಿ ಹೊರ ಕಳಿಸುವ ಸುದ್ದಿಗಳು ನಮಗೆ ಕೇಳಬರುತ್ತಿವೆ.

ಒಂದೊಂದು ವೇಳೆ ಹೀಗೂ ಆಗಬಹುದು; ಒಬ್ಬ ವ್ಯಕ್ತಿ ತಾನು ಕೃತ್ಯವನ್ನು ಎಸಗಿದ್ದರ ಬಗ್ಗೆ ಮತ್ತೊಬ್ಬನಿಗೆ ಮೌಖಿಕವಾಗಿ ಹೇಳಬಹುದು; ಅದನ್ನು ಕೇಳಿದ ಅವನು ಆ ಸುದ್ದಿಯನ್ನು ಇತರರಿಗೂ ತಿಳಿಸಬಹುದು. ಅಂಥ ಹೇಳಿಕೆಯ ಆಧಾರದಿಂದ ಪೊಲೀಸರು ಕಾರ್ಯಾಚರಣೆ ನಡೆಸಿ ಆರೋಪಿಯನ್ನು ವಿಚಾರಣೆಗೆ ಗುರಿಪಡಿಸಬಹುದು. ಅಂಥ ಸಂದರ್ಭದಲ್ಲಿ ತಪ್ಪೊಪ್ಪಿಗೆಯ ಹೇಳಿಕೆಯ ಮಾತ್ರದಿಂದಲೇ ನ್ಯಾಯಾಲಯವು ಆರೋಪಿಯ ತಪ್ಪು ಸಾಬೀತಾಗಿದೆ ಎಂಬ ನಿರ್ಧಾರಕ್ಕೆ ಬರಬಹುದು; ಅಂಥ ಹೇಳಿಕೆಯನ್ನು 'ನ್ಯಾಯಾತಿರಿಕ್ತ ತಪ್ಪೊಪ್ಪಿಗೆ ಹೇಳಿಕೆ' ಎಂದು ಅರ್ಥೈಸಬೇಕಾಗುತ್ತದೆ.

ಇತ್ತೀಚಿನ ಸರ್ವೋಚ್ಚ ನ್ಯಾಯಾಲಯದ ಒಂದು ಪ್ರಕರಣದಲ್ಲಿ (ಎ.ಐ.ಆರ್. ೧೯೯೫, ಪುಟ ೧೯೪೩: ಬಾಲೂರಾಮ ವಿರುದ್ಧ ರಾಜಸ್ಥಾನ ಸರಕಾರ) ಅಂಥ ಒಂದು ನ್ಯಾಯಾತಿರಿಕ್ತ ತಪ್ಪೊಪ್ಪಿಗೆಯ ಮಹತ್ವವನ್ನು ಅರ್ಥಪೂರ್ಣವಾಗಿ ವಿಶದೀ

ಕರಿಸಿ ಆದೇಶವನ್ನು ಕೊಟ್ಟಿರುವುದು ದಂಡನೀತಿಯ ಪುಸ್ತಕದಲ್ಲಿ ಕೆಂಪಕ್ಷರಗಳಿಂದ ಬರೆದಿಡುವಹಾಗಿದೆ.

ಬಾಲೂರಾಮನೆಂಬುವನು ಆ ಊರಿನಲ್ಲಿ ಹೊಲ, ಮನೆಯನ್ನಿಟ್ಟುಕೊಂಡು, ಸಾಗುವಳಿ ಸಾಗಿಸಿಕೊಂಡು ಹೋಗುವ ವ್ಯಕ್ತಿಯಾಗಿದ್ದ. ರೂಪಾರಾಮ ಅವನಲ್ಲಿ ಸೇವಕ ವೃತ್ತಿಯಲ್ಲಿದ್ದವ. ಹಾರೂ ಎಂಬವನು ಬಾಲೂರಾಮನ ಚಿಕ್ಕಪ್ಪ. ಒಂದು ದಿನ ಬಾಲೂರಾಮ ತನ್ನ ಚಿಕ್ಕಪ್ಪನ ಬಳಿಗೆ ಬಂದವನೇ ಅನೌಪಚಾರಿಕವಾಗಿ ಮಾತಾಡುತ್ತಾ ಇದ್ದವನು ಒಮ್ಮೆಗೇ ಗಂಭೀರಭಾವವನ್ನು ತಳೆದು, ರೂಪಾರಾಮನನ್ನು ಛಾಣಿಯಿಂದ ಥಳಿಸಿ, ಅವನನ್ನು ಒಂದು ಕೊಠಡಿಯಲ್ಲಿ ಬಂಧಿಸಿ, ಬೀಗಹಾಕಿ ಬಂದಿರುವುದಾಗಿ ತಿಳಿಸಿದ. ಆ ಸಂಗತಿಯನ್ನು ಕೇಳಿದ ಅವನ ಚಿಕ್ಕಪ್ಪ ಹಾರುವಿಗೆ ಅಶನಿಘಾತವಾದಂತಾಯ್ತು. ಬಾಲೂರಾಮ ತನ್ನ ಚಿಕ್ಕಪ್ಪನನ್ನು ರೂಪಾರಾಮನನ್ನು ಕೂಡಿಟ್ಟ ಸ್ಥಳಕ್ಕೆ ಬರುವಂತೆ ಹೇಳಿದ. ಆದರೆ ಹಾರೂ ತಾನೊಬ್ಬನೇ ಅಲ್ಲಿಗೆ ಹೋಗಲು ಹಿಂಜರಿದ.

ಹಾರೂ ತಕ್ಷಣವೇ ತನಗೆ ಸಿಕ್ಕಿದ ಸುದ್ದಿಯನ್ನು ರೂಪಾರಾಮನ ಚಿಕ್ಕಪ್ಪನಾದ ಮಂಗೀಲಾಲನಿಗೆ ತಿಳಿಸಿದ; ಅದರಂತೆ ಅವರಿಬ್ಬರೂ ಮೇಘಾಸಿಂಗ್, ಖೇಮಾರಾಮ ಮುಂತಾದ ಗಣ್ಯರಿಗೂ ತಿಳಿಸಿ, ಅವರೆಲ್ಲರೂ ಕೂಡಿ ರೂಪಾರಾಮನನ್ನು ಕೂಡಿಟ್ಟ ಸ್ಥಳಕ್ಕೆ ಧಾವಿಸಿದರು. ಅಷ್ಟರಲ್ಲಿ ಅದೇ ಸ್ಥಳಕ್ಕೆ ಬಾಲೂರಾಮನೂ-ಬಂದು ಸೇರಿದ. ಅವರೆಲ್ಲರೂ ಕೊಠಡಿಯ ಬಾಗಿಲನ್ನು ತೆಗೆಯಲು ಬಾಲೂರಾಮನಿಗೆ ಹೇಳಿದರು. ಆದರೆ ಅವನು ಅದನ್ನು ತೆರೆಯಲು ಸಮ್ಮತಿಸಲಿಲ್ಲ. ಆಗಲೇ ಕತ್ತಲಾಗುತ್ತಾ ಬಂದುದರಿಂದ ಅವರಿಗೆ ಮುಂದೇನು ಮಾಡಬೇಕೆಂದು ತೋಚದೆ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

ಮಾರನೇ ದಿನ ಪ್ರಾತಃಕಾಲ ಮಂಗೀಲಾಲ ಪೊಲೀಸ್. ಠಾಣೆಗೆ ಆ ಸುದ್ದಿಯನ್ನು ಮುಟ್ಟಿಸಿದ ಮತ್ತು ಪೊಲೀಸರ ಸಹಿತ ಇತರ ಪಂಚರೊಡನೆ ಎಲ್ಲರೂ ಹೊಲಮನೆಯ ಕಡೆಗೆ ನಡೆದರು. ಪೊಲೀಸರು ನೆರೆದಿದ್ದ ಪಂಚರ ಸಮಕ್ಷಮ ಬಾಗಿಲನ್ನು ತೆರೆಸಿ ನೋಡಿದಾಗ ರೂಪಾರಾಮನ ಕಳೇಬರ ರಕ್ತದ ಮಡುವಿನಲ್ಲಿ ಬಿದ್ದುಕೊಂಡಿದ್ದುದು ಕಂಡುಬಂತು. ನೆರೆದವರು ಅಂಥ ಭೀಷಣ ದೃಶ್ಯವನ್ನು ನೋಡಿ ದಿಗ್‌ಭ್ರಾಂತರಾದರು.

ಪೊಲೀಸರು ಸುದ್ದಿಯನ್ನು ದಾಖಲಿಸಿಕೊಂಡು ಕಾರ್ಯತತ್ಪರರಾದರು. ವಿಚಾರಣಾಂತ್ಯದಲ್ಲಿ ಅವರು ಬಾಲೂರಾಮನ ವಿರುದ್ಧ ಕೊಲೆಯ ಆರೋಪವನ್ನು ಹೊರಿಸಿ, ಆಪಾದನಾ ಪಟ್ಟಿಯನ್ನು ಸತ್ರನ್ಯಾಯಾಲಯಕ್ಕೆ ಸಲ್ಲಿಸಿದರು.

ಸತ್ರನ್ಯಾಯಾಲಯವು ವಿಚಾರಣೆಯಲ್ಲಿ ಬಾಲೂರಾಮನ ಅಪರಾಧವು ಸಾಬೀತಾಗಿದೆಯೆಂದು ಮನಗಂಡು ಅವನನ್ನು ಶಿಕ್ಷೆಗೆ ಒಳಪಡಿಸುವ ಆದೇಶವನ್ನು ಹೊರಡಿಸಿತು. ಅಂಥ ಆದೇಶದ ವಿರುದ್ಧ ಬಾಲೂರಾಮ ಸಲ್ಲಿಸಿದ ಮೇಲ್ಮನವಿಯನ್ನು ರಾಜ್ಯದ ಉಚ್ಚ ನ್ಯಾಯಾಲಯವು ತಳ್ಳಿಹಾಕಿ ಸತ್ರನ್ಯಾಯಾಲಯದ ಆದೇಶವನ್ನೇ ಎತ್ತಿಹಿಡಿಯಿತು. ಪರಿಣಾಮವಾಗಿ ಬಾಲೂರಾಮ ಶಿಕ್ಷೆಯನ್ನನುಭವಿಸಲು ಸೆರೆಮನೆಗೆ ರವಾನಿಸಲ್ಪಟ್ಟ.

ಬಾಲೂರಾಮ ಕಾರಾಗಾರದಿಂದಲೇ ತನ್ನ ವಿರುದ್ಧದ ಆದೇಶದ ರದ್ಧತಿಗಾಗಿ ಭಾರತದ ಸರ್ವೋಚ್ಚ ನ್ಯಾಯಾಲಯಕ್ಕೆ ಒಂದು ನಿವೇದನೆಯನ್ನು ಸಲ್ಲಿಸಿದ. ಆ ನ್ಯಾಯಾಲಯವು ಅವನ ನಿವೇದನೆಯನ್ನು ಅಂಗೀಕರಿಸಿ, ಪ್ರಕರಣವನ್ನು ಆದ್ಯಂತವಾಗಿ ಪರಿಶೀಲಿಸಲು ಕ್ರಮ ಕೈಗೊಂಡಿತು. ಬಾಲೂರಾಮನ ಪರವಾಗಿ ವಾದಿಸಲು ಅದು ನ್ಯಾಯವಾದಿಗಳೊಬ್ಬರನ್ನು ನಿಯಮಿಸಿತು. ಅವರು ಸೆರೆಮನೆಯಲ್ಲಿ ಶಿಕ್ಷೆಯನ್ನು ಅನುಭವಿಸುತ್ತಿದ್ದ ಬಾಲೂರಾಮನ ಪರವಾಗಿ ವಾದಿಸುತ್ತಾ "ಬಾಲೂರಾಮನು ಕೊಟ್ಟನೆಂಬ ನ್ಯಾಯಾತಿರಿಕ್ತ ಹೇಳಿಕೆಗೆ ಅಷ್ಟೊಂದು ಮಹತ್ವವನ್ನು ಕೊಡಬಾರದಾಗಿತ್ತು, ಸಾಕ್ಷಿಗಳ ಹೇಳಿಕೆಯಲ್ಲಿ ಅನುಮಾನಾಸ್ಪದ ವಿಚಾರಗಳು ಬಹಳಷ್ಟು ನುಸುಳಿವೆಯಾದ್ದರಿಂದ ಅಪರಾಧಿಯನ್ನು ದೋಷಮುಕ್ತಗೊಳಿಸಬೇಕು" ಎಂದು ನ್ಯಾಯಾಧೀಶರಿಗೆ ಮನವಿ ಮಾಡಿಕೊಂಡರು. ಅದರ ವಿರುದ್ಧ ಖಂಡನೀಯವಾದ ವಾದವೂ ಅಷ್ಟೇ ಬಿರುಸಾಗಿ ನಡೆಯಿತು.

ಎಲ್ಲವನ್ನೂ ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯವು ಬಾಲೂರಾಮನ ನ್ಯಾಯಾತಿರಿಕ್ತ ತಪ್ಪೊಪ್ಪಿಗೆಗೆ ಮೌಲ್ಯವನ್ನು ಕೊಡುತ್ತಾ ಪ್ರಕೃತದ

ಸಂದರ್ಭದಲ್ಲಿ ಅದನ್ನು ಬರೀ ಪೊಳ್ಳು ಹೇಳಿಕೆಯೆಂದು ಅಲ್ಲಗಳೆಯಲು ಸಾಧ್ಯವಿಲ್ಲವೆಂದಿತು. ಹಾಗೆ ನಿರ್ಣಯಕ್ಕೆ ಬರಲು ಅದಕ್ಕೆ ಸಾಕಷ್ಟು ಕಾರಣಗಳಿದ್ದವು.

ಅವನು 'ಅಂಥ ಹೇಳಿಕೆಯನ್ನು ಕೊಟ್ಟಿದ್ದು ತನ್ನ ಚಿಕ್ಕಪ್ಪನಾದ ಹಾರೂ ಎಂಬುವನಿಗೆ. ದಾವೆಯಲ್ಲಿ ಚಿಕ್ಕಪ್ಪನಾದ ಹಾರೂ ಬಾಲೂರಾಮನನ್ನು ಉಳಿಸುವ ಸಲುವಾಗಿ ಸುಳ್ಳು ಸಾಕ್ಷ್ಯವನ್ನು ಕೊಡಬಹುದಾಗಿತ್ತು. ಆದರೆ, ಅದರ ಬದಲು ಅವನು ಯಥಾವತ್ತಾಗಿ ಅವನು ಹೇಳಿದನೆಂಬುದನ್ನೇ ಚಾಚೂತಪ್ಪದೇ ಮತ್ತೆಲ್ಲರೊಡನೆಯೂ ಹೇಳಿದ. ತಾನು ಲಾಠಿಯಿಂದ ರೂಪಾರಾಮನನ್ನು ಥಳಿಸಿದ್ದು, ಅದರಿಂದಾಗಿ ಅವನು ಗಾಯಗೊಂಡಿದ್ದು ಮತ್ತು ಸತ್ತದ್ದು ಇದರ ಬಗ್ಗೆ ಅವನು ಸವಿಸ್ತಾರವಾಗಿ ಹೇಳಿದುದನ್ನೇ ಹಾರೂ ಅನುಮಾನಕ್ಕೆ ಆಸ್ಪದವೇ ಇಲ್ಲದಹಾಗೆ ಇತರರಿಗೂ ಹೇಳಿದ್ದಾನೆ.

ಅದೂ ಅಲ್ಲದೆ ಪಂಚರ ಸಮ್ಮುಖದಲ್ಲಿ ಆ ಕೊಠಡಿಯ ಬಾಗಿಲನ್ನು ತೆಗೆಸಿ ನೋಡಿದಾಗ ಕಂಡ ಕರಾಳ ದೃಶ್ಯವೇ ರೂಪಾರಾಮನು ಗಾಯಗಳಿಂದ ಹೊರಚೆಲ್ಲಿದ ರಕ್ತದ ಮಡುವಿನಲ್ಲಿ ಸತ್ತುಬಿದ್ದಿರುವುದು; ಹಾಗೆ ಆ ಕೊಠಡಿಯ ಬಾಗಿಲನ್ನು ತೆಗೆದು ನೋಡುವ ಮುನ್ನ ಅಪರಾಧಿಯಲ್ಲದೆ ಬೇರೆ ಯಾರಿಗೂ ಪ್ರವೇಶಕ್ಕೆ ಎಡೆ ಇರಲಿಲ್ಲವೆಂಬುದು ಗಮನಾರ್ಹ. ಕಳೇಬರದ ವೈದ್ಯಕೀಯ ಪರೀಕ್ಷೆಯಿಂದಲೂ ಹಾರೂವಿನ ಹೇಳಿಕೆಗೆ ಪುಷ್ಟಿ ದೊರೆಯುವಂತಿದೆ. ಅವನ ಹೇಳಿಕೆಗೆ ಅದು ಸತ್ಯಾಂಶದ ಹೊದಿಕೆಯನ್ನು ಹೊದಿಸಿದಂತಿದೆ. ಆದ್ದರಿಂದಲೇ ಸರ್ವೋಚ್ಚ ನ್ಯಾಯಾಲಯ ಅಂಥ ಹೇಳಿಕೆಗೆ ಮಹತ್ವವನ್ನು ಕೊಡಲೇಬೇಕೆಂದಿತು. ಆ ಕೃತ್ಯವು ಅವನಿಂದಲೇ ನಡೆಯಿತೆನ್ನಲು ಬೇರೆ ಯಾವ ಸಾಕ್ಷ್ಯದ ಅಗತ್ಯವೂ ಇಲ್ಲ ಎಂಬ ಅಭಿಪ್ರಾಯಕ್ಕೆ ಸರ್ವೋಚ್ಚ ನ್ಯಾಯಾಲಯ ಬಂದಿತು. ಅದರ ಪರಿಣಾಮವಾಗಿ ಬಾಲೂರಾಮನ ಕಾರಾಗಾರದ ಮುಖಾಂತರ ಮಾಡಿಕೊಂಡ ಮನವಿ ತಿರಸ್ಕರಿಸಲ್ಪಟ್ಟಿತು. ಅವನು ತನ್ನ ಶಿಕ್ಷೆಯನ್ನು ಅಲ್ಲೇ ಮುಂದುವರಿಸುವಂತಾಯಿತು.

ಆ ಪ್ರಕರಣದಲ್ಲಿ ಹಾಜರಾಗಿದ್ದ ಮತ್ತು ಬಾಲೂರಾಮನ ಶಿಕ್ಷೆಯಲ್ಲಿ ಪರ್ಯವಸಾನಗೊಂಡಿದ್ದ ಅವನ ವಿರುದ್ಧದ ವಿಲಕ್ಷಣ ರೀತಿಯ ಸಾಕ್ಷ್ಯವೆಂದರೆ ಅದು ಹಾರೂವಿಗೆ ಕೊಟ್ಟಿದ್ದ ನ್ಯಾಯಾತಿರಿಕ್ತ ತಪ್ಪೊಪ್ಪಿಗೆಯ ಹೇಳಿಕೆಯಾಗಿತ್ತು. ಅಂಥ ಸಾಕ್ಷ್ಯವು ಅಪರಾಧಿಯ ದುಷ್ಕೃತ್ಯವನ್ನು ಬಯಲಿಗೆಳೆಯಲು, ಅವನನ್ನು ಹೊಣೆಗಾರರನ್ನೆನ್ನಿಸಲು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ ಎಂಬುದನ್ನು ವಿಶದೀಕರಿಸಿ ಹೇಳುವುದರಿಂದಲೇ ಆ ಪ್ರಕರಣವು ಸ್ಮರಣ ಯೋಗ್ಯವಾಗಿದೆ.





ನುಡಿಗೌರವ

# ಸೇಡಿಯಾಪು ಕೃಷ್ಣಭಟ್ಟರು

ಅವರ ಜೀವಿತಾವಧಿ ೮-೬-೧೯೦೨ ರಿಂದ ೮-೬-೧೯೯೬ರ ತನಕ.

ಕೊನೆಯ ಆ ಶನಿವಾರ ಸಂಜೆ ಮಣಿಪಾಲದ ಕೈಲಾಸ ಬಡಾವಣೆಯಲ್ಲೊಂದು ಅಪೂರ್ವ ಸಮಾರಂಭ. ಸೇಡಿಯಾಪು ಅವರ ೯೪ನೆಯ ಜನ್ಮದಿನೋತ್ಸವಾಚರಣೆ, ಅವರ ಉದ್ಗ್ರಂಥ, 'ತಥ್ಯದರ್ಶನ'ದ ಇಂಗ್ಲಿಷ್ ಅವತರಣಿಕೆಯ ಬಿಡುಗಡೆ ಹಾಗೂ ಗ್ರಂಥಕರ್ತರಿಗೆ ಅದರ ಸಮರ್ಪಣೆ. ಈ ಉಲ್ಲಾಸಮಯ ಕೈಂಕರ್ಯದಲ್ಲಿ ಅಧ್ವರ್ಯು ಶಿವರಾಮ ಕಾರಂತರು (ಜನನ ೧೦-೧೦-೧೯೦೨). ಹೀಗೆ ಜ್ಞಾನಪೀಠ ಕೈಲಾಸಶಿಖರಕ್ಕೆ ಆಗಮಿಸಿದ್ದಾಗ, ತಮ್ಮ ಆಯುಷ್ಯ ಶತಕದತ್ತ ಚುಂಬಗಳನ್ನು ಚಾಚಿದ್ದ ಇಬ್ಬರು ಭೀಷ್ಮಾಚಾರ್ಯರ ಸಮಾಗಮ ಮತ್ತು ಸಂಗಮ ಅಲ್ಲಿ ನೆರೆದಿದ್ದವರ ಕಂಗಳಿಗೊಂದು ಹಬ್ಬ. "ಕಂಗಳ್ಯಾತಕೋ ಕಸ್ತೂರಿರಂಗನ ನೋಡದ!"

ಆದರೆ "ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ." ಅದೇ ಮಧ್ಯರಾತ್ರಿ ವೇಳೆಗೆ ಸೇಡಿಯಾಪು ಅವರ ಶಿಥಿಲ ದುರ್ಬಲ ದೇಹದೊಳಗೆ ಪ್ರಜ್ವಲಿಸುತ್ತಿದ್ದ ಚಿರನೂತನ ಜ್ಞಾನ ಚೇತನ ಅನಂತದಲ್ಲಿ ಲೀನವಾಗಿಹೋಗಿತ್ತು. ದ್ವೈತತತ್ವ, ಅದ್ವೈತತತ್ವಕ್ಕೆ ಉತ್ತಾರಣೆಗೊಂಡಿತ್ತು.



ದಿನಾಂಕ ೯-೬-೧೯೯೬ರ ನಸುಮುಂಜಾನೆ ಮೈಸೂರಿನಲ್ಲಿ ಈ ಅನಿವಾರ್ಯ ಸುದ್ದಿಯನ್ನು ಅವರ ಅಳಿಯ ಪಿ.ಎಸ್. ಶಿವರಾಮ ನನಗೆ ಬೀರಿದರು. ಬೆನ್ನಿಗೇ ಕಾರ್ಕಳದಿಂದ ಎಂ. ರಾಮಚಂದ್ರ (ಆ ಜಾನ್ಸನ್‌ಗೆ ಈ ಬಾಸ್ವೆಲ್) ಮತ್ತೆ ಇದೇ ಸಮಾಚಾರ ಅರುಹಿದರು. ಆಗ ನನ್ನ ಮನದಲ್ಲಿ ಮಿಡಿದ ಭಾವನೆಗಳು ಸಂಕೀರ್ಣ: ಸೇಡಿಯಾಪು, ಡಿ.ವಿ.ಜಿ.ಯವರಂತೆ, ನನಗೆ ಗುರುಸ್ಥಾನದಲ್ಲಿರುವ ಹೃದಯವಂತರ. "ತರಣಿ ದರ್ಶನಕ್ಕಿಂತ ಕಿರಣಾನುಭವ ಲೇಸು," ಎಂದಿದ್ದಾರೆ ಡಿ.ವಿ.ಜಿ. ನನಗೆ ಈ ಉಭಯ ಜ್ಞಾನಸೂರ್ಯರ ನಿಕಟ ಸಂಪರ್ಕವೂ

**ಅವರ ಪಾಂಡಿತ್ಯವೆಲ್ಲವೂ ಸ್ವಯಾರ್ಜಿತ-ಜೀವನ ಶಿಕ್ಷಣ ಶಾಲೆಯಲ್ಲಿ. ನಡೆ-ನುಡಿ ಬಗೆಗಳಲ್ಲಿ ಐಕ್ಯ ಸಾಧಿಸಿರುವ ಪ್ರಖರ ಪ್ರತಿಭೆ ಯಾವ ಔನ್ನತ್ಯಕ್ಕೆ ಏರಬಹುದೆಂಬುದಕ್ಕೆ ಸೇಡಿಯಾಪು ಅವರು ದಿವ್ಯ ಪ್ರತೀಕ.**

- ಜಿ.ಟಿ. ನಾರಾಯಣರಾವ್

ಇತ್ತು. ಸೇಡಿಯಾಪು ಅವರದು ಎಷ್ಟೋ ಹೆಚ್ಚು; ಅವರ ಸಾಹಿತ್ಯ ಚಿಂತನೆಗಳು ನನ್ನ ದೈನಂದಿನ ಅಧ್ಯಯನ ವಸ್ತುಗಳು.

ಕೃಷ್ಣಭಟ್ಟರ ವಿದ್ವತ್ತು ಯಾವ ಮಟ್ಟದ್ದು? ಅವರು ಆ ಸಿದ್ಧಿ ಹೇಗೆ ಗಳಿಸಿದರು? - ಈ ಪ್ರಶ್ನೆಗಳಿಗೆ ನೇರ ಉತ್ತರ ಬರೆಯುವುದು ನನ್ನ ಅಳವಿಗೆ ಮೀರಿದ ಸಾಹಸ. ಡಿ.ಎಲ್. ನರಸಿಂಹಾ ಚಾರ್ (೧೯೦೬-೭೧) ಅವರಿಗೆ ಅರ್ಪಿಸಿದ (೧೯೬೭) "ಉಪಾಯನ" ಸಂಭಾವನಾ ಗ್ರಂಥದಲ್ಲಿ ದೇಜಗೌ ಅವರು ಬರೆದಿರುವ ಮಾತು ಇಲ್ಲಿ ಪ್ರಸ್ತುತವಾಗಿದೆ:

"ವಿದ್ವತ್ತೆಂಬುದು ಅಂಗಡಿ ಮುಂಗಟ್ಟುಗಳಲ್ಲಿ ಸುಲಭವಾಗಿ ದೊರೆಯುವ ವ್ಯಾಪಾರ ಸಾಮಗ್ರಿ ಯಲ್ಲ. ದೀರ್ಘಕಾಲದ ತಪಸ್ಯೆಯಿಂದ ಸತತಾಭ್ಯಾ ಸದಿಂದ, ನಿರಂತರವಾದ ಚಿಂತನ-ಮಂಥನಗಳಿಂದ ದೊರಕಬಹುದಾದ ಅಮೃತ ವಸ್ತು. ಪಾಂಡಿತ್ಯ ಸಂಪಾದನೆ ಬಹುಶ್ರಮಸಾಧ್ಯ ವಾದ ಶೀಘ್ರ ಫಲದಾಯಕವಲ್ಲದ ಸಾಧನೆಯಿಂದ ಲಭ್ಯವಾಗುವಂತಹುದು. ಭಾವಪ್ರಧಾನವಾದ ಕಾವ್ಯ ರಚನೆಯಷ್ಟು ಸರಾಗವಲ್ಲ ಬುದ್ಧಿ ಪ್ರಧಾನವಾದ ಸಂಶೋಧನ ಮತ್ತು ವಿಮರ್ಶನ ಕಾರ್ಯ. ಸ್ಫೂರ್ತಿ ಯೊದಗಿದಾಗ ಒಂದೇ ಉಸಿರಿನಲ್ಲಿ ಅವಿಚ್ಛಿನ್ನವಾಗಿ ಕಾವ್ಯಲಹರಿ ಪ್ರವಹಿಸುತ್ತದೆ. ಅಲ್ಲಿ ಚಿಂತನ ಮಂಥನ ಕ್ರಿಯೆ ಇಲ್ಲವೆಂದಲ್ಲ, ಅದಿದ್ದರೂ ಗುಪ್ತ ಗಾಮಿಯಾಗಿ ಅವಕುಂಠನಶೀಲೆಯಂತೆ ವರ್ತಿಸು ತ್ತದೆ. ಸಂಶೋಧನ ಕ್ರಿಯೆಯಲ್ಲಿ ಕಲ್ಪನೆ ಗುಪ್ತಗಾಮಿಯಾಗಿದ್ದು ಚಿಂತನಾಂಶ ನಾಯಕ ಪಾತ್ರ ವನ್ನು ವಹಿಸುತ್ತದೆ. ಚಿಂತನ ಮಂಥನಗಳಿಗೆ ಪ್ರೇರಕವಾದ ಆಧಾರ ಸಾಮಗ್ರಿಗಳ ಸಂಗ್ರಹ ಕಾರ್ಯಕ್ಕೆ ಸಂಶೋಧನೆಯಲ್ಲಿ ಅಗ್ರಮಾನ್ಯತೆ ಅನಿ ವಾರ್ಯ. ಈ ಕಾರಣದಿಂದ ಸಂಶೋಧಕ ಶೀಘ್ರ ಫಲವನ್ನು ನಿರೀಕ್ಷಿಸುವಂತಿಲ್ಲ, ಒಂದೊಂದು ಪದ ಒಂದೊಂದು ವಾಕ್ಯ ಬರೆಯುವಾಗಲೂ ಅವನು ತನ್ನ ಸ್ಮೃತಿ ಕೋಶವನ್ನೆಲ್ಲ ಕಲಕಬೇಕಾಗುತ್ತದೆ, ಪಾಂಡಿತ್ಯ ದುರ್ಗಕ್ಕೆ ಲಗ್ಗೆ ಹೂಡಬೇಕಾಗುತ್ತದೆ. ಗ್ರಂಥ ಭಂಡಾರವನ್ನು ಸೂರೆಗೊಳ್ಳಬೇಕಾಗುತ್ತದೆ, ಹತ್ತಾರು ಕಡೆಗಳಿಂದ ವಿಷಯವನ್ನು ಸಂಚಯಿಸ ಬೇಕಾಗುತ್ತದೆ. ಇಷ್ಟಾದರೂ ತಾನು ಸುರಿಸುವ ಬೆವರಿಗೆ ಮಾಡುವ ದುಡಿಮೆಗೆ ಅನುಗುಣವಾದ ಲಾಭವನ್ನವನು ನಿರೀಕ್ಷಿಸುವಂತಿಲ್ಲ."

ಸೇಡಿಯಾಪು ಅವರ ನಿರಂತರ ಸಂಶೋಧನ ದಾಸೋಹ ಮೇಲಿನ ವಿವರಣೆಗೆ ಇನ್ನೂ ಒಂದು ನಿದರ್ಶನ. ೧೯೯೧ರಲ್ಲಿ ಪ್ರಕಟವಾದ ಅವರ "ತಥ್ಯ ದರ್ಶನ" ಮೂಲಭೂತ ವೈಜ್ಞಾನಿಕ ಚಿಂತನೆಗಳನ್ನು ಒಳಗೊಂಡಿರುವ ಅತಿ ವಿರಳ ಗ್ರಂಥ. ಆರ್ಯ, ವರ್ಣ, ಜಾತಿ, ಲಿಂಗ ಎಂಬೀ ಪದಚತುಷ್ಟಯದ ಅರ್ಥಾನುಸಂಧಾನ ಅವರು ಮಾಡಿರುವ ಪರಿ ನಿಖರ. ವೈಜ್ಞಾನಿಕ ಮತಿಗೆ ಮಾತ್ರ ಸಾಧ್ಯ. ಪುರು ಷಸೂಕ್ತದ ಚಿರಪರಿಚಿತ ಮತ್ತು ವಿಕೃತ ವ್ಯಾಖ್ಯಾನಕ್ಕೆ ಪಕ್ಕಾದ "ಬ್ರಾಹ್ಮಣೋಸ್ಯ ಮುಖಮಾಸೀತ್। ಬಾಹೂ ರಾಜನ್ಯಃ ಕೃತಃ॥ ಊರೂ ತದಸ್ಯ ಯದ್ವೈಶ್ಯಃ। ಪದ್ಭ್ಯಾಂ ಶೂದ್ರೋ ಅಜಾಯತ॥" ಋಕ್ಕನ್ನು ಆಧು ನಿಕ ವಿಚಾರಮತಿಗಳು ಗ್ರಹಿಸಿ ಒಪ್ಪುವ ತೆರದಲ್ಲಿ ಸೇಡಿಯಾಪು ವಿವರಿಸಿದ್ದಾರೆ. ಅನುಷಂಗಿಕವಾಗಿ, ಈ ವಿವರಣೆ ಡಿವಿಜಿಯವರ ಯಥಾನುವಾದವನ್ನು "ವದನದಿಂ ಬ್ರಾಹ್ಮಣಂ ಬಾಹುವಿಂ ಕ್ಷತ್ರಿಯನಮ್! ಉದಿಸಿದಂ ವಿಶನೂರುವಿಂ, ಪದದೆ ಶೂದ್ರಂ॥" ನಿರಾಕರಿಸುತ್ತದೆ ಎಂಬುದು ಗಮನಾರ್ಹ.

ಸೇಡಿಯಾಪು ಯಾರು? ಕವಿ, ಕತೆಗಾರ, ಪ್ರಬಂ ಧಕಾರ, ಸಂಶೋಧಕ, ಕನ್ನಡ ಸಂಸ್ಕೃತ ಆಂಗ್ಲಭಾಷಾ ವಿದ್ವಾಂಸ, ವಿಮರ್ಶಕ, ಕಲಾಪ್ರೇಮಿ - ಒಬ್ಬ ಸಭ್ಯ ಸುಸಂಸ್ಕೃತ ಮಾನವ. ನಡೆ ನುಡಿ ಬಗೆಗಳಲ್ಲಿ ಸದಾ ಉನ್ನತ ಸಾಮರಸ್ಯ ಕಾಪಾಡಿಕೊಂಡು ಬಂದಿದ್ದ ಗೃಹಸ್ಥ. ಪ್ರಚಾರ ಬಯಸಿದವರಲ್ಲ, ವೈಯಕ್ತಿಕ ಮಹತ್ವಾಕಾಂಕ್ಷೆ ಹೊತ್ತಿದ್ದವರಲ್ಲ, ಅನ್ಯಾಶ್ರಯ ಅಪೇ ಕ್ಷಿಸಿದವರಲ್ಲ - ಸ್ಥಿತಪ್ರಜ್ಞ, ಎಂದೇ ಇವರಿಗೆ ತಾರಾ ಮೌಲ್ಯ ಬರಲಿಲ್ಲ! ಸೇಡಿಯಾಪು ನುಡಿಗಳಲ್ಲಿ:

ಹೆಚ್ಚು ಬರೆದವನಲ್ಲ
ನಿಚ್ಚ ಬರೆದವನಲ್ಲ

ಮೆಚ್ಚಿಸಲು ಬರೆಯುವಭ್ಯಾಸವಿಲ್ಲ
ಇಚ್ಚೆಗೆದೆಯೊಪ್ಪಿಗೆ ಬಗೆ
ಬಿಚ್ಚಿದರೆ ಕಣ್ಣೆ ಮಯ್
ಎಚ್ಚುವಂದದಿ ತೀಡಿ ತಿದ್ದಿ ಬರೆವೆ.

ಕಣ್ಣಿಗೆ ಕಾಡಿಗೆ ಸವರುವ ನಯವಂತಿಕೆಯನ್ನು ಅವರಲ್ಲಿ ಬಣ್ಣಿಸಿರುವ ಪರಿ ಕಿರಿದರೊಳ್ ಪಿರಿದ

ರ್ಥಕ್ಕೆ- ಶ್ರೀಯುತರ ಸಾಹಿತ್ಯ ಶೈಲಿಗೂ ಜೀವನ ಧರ್ಮಕ್ಕೂ ನಿದರ್ಶನ. ಖಚಿತತೆಗೆ ಪರ್ಯಾಯ ನಾಮ ಸೇಡಿಯಾಪು. ಮಾತನ್ನು ಇವರಿಗಿಂತ ಅಧಿಕ ಕೃಪಣತೆಯಿಂದ ಬಳಸಿದವರಿಲ್ಲ. ಏಕೆಂದರೆ 'ಶ್ವಮೇಧ'ದಲ್ಲಿ ಇವರು ಬರೆದಿರುವಂತೆ,

ಮಾತಹಳಿಯಬೇಡಿ! ಮನುಜನೊಂದು ಮಹಿಮೆ ಮಾತಿನಲ್ಲಿ
ಮಾತು ದೇವನೊಂದು ಶಕ್ತಿ, ಮಾತೆ ಜೀವನೊಂದು ಜ್ಯೋತಿ,
ಮಾತು ನೀತಿಗಳಿಗೆ ತಾಯಿ, ರೀತಿಗಳಿಗದೇ ವಿಧಾಯಿ,
ಮಾತು ಸತ್ಯವುಡುವ ಧೌತ, ಜೀವನದ ರಥಕ್ಕೆ ಸೂತ,
ಮಾತ ಕೆಡಿಸಿ ಸುಖಿಪೆನೆಂಬ ಪಾಪಿ ನರಕೂಪಭೇಕ.

ನಾನು ಮಂಗಳೂರು ಸೇಂಟ್ ಅಲೋಶಿಯಸ್ ಕಾಲೇಜಿಗೆ ವಿದ್ಯಾರ್ಥಿಯಾಗಿ (೧೯೪೨-೪೪) ಸೇರುವ ಮೊದಲೇ ಕೃಷ್ಣಭಟ್ಟರ 'ತರುಣ ಧಮನಿ'(೧೯೩೪) ಕಾವ್ಯಖಂಡ ಓದಿದ್ದೆ. ತಂತಾನೇ ಅದು ಕಂಠಪಾಠವೂ ಆಗಿತ್ತು. ಅದರ ಭಾವ ಮತ್ತು ಓಘ ನನ್ನನ್ನು ಪೂರ್ತಿ ಸೆರೆಹಿಡಿದಿದ್ದುವು.

ಅಡಗುವ ರಾತ್ರಿಯನೆಬ್ಬಟ್ಟಟ್ಟು
ಮೂಡಲ ಕೆಂಪೇರುತಿರೆ
ಹುಲಿಬೇಟೆಗೆ ಹಯವೇರಿದ
ವಿದ್ಯಾನಗರದ ರಾಮದೊರೆ.

ಎಂದು ಇದರ ಆರಂಭ. ಅಂದಿಗಿಂತ (೧೯೪೨) ಇಂದು (೧೯೯೬) ಈ ಕಾವ್ಯ ಅಧಿಕ ಅರ್ಥ, ಧ್ವನಿ ಮತ್ತು ಸೌಂದರ್ಯಪ್ರದಾಯಕವಾಗಿದ್ದರೂ ನನ್ನಲ್ಲಿ ಅಂದಿನ ಆ ಬೆರಗು ಸಂಭ್ರಮಗಳು ಹಾಗೆಯೇ ಹಸುರಾಗಿವೆ. ನಮ್ಮ ಕಾಲೇಜಿನ ಅಂಗ ಸಂಸ್ಥೆಯಾಗಿದ್ದ ಪ್ರೌಢಶಾಲೆಯಲ್ಲಿ ಸೇಡಿಯಾಪು ಕನ್ನಡ ಉಪಾಧ್ಯಾಯರೆಂದು ತಿಳಿದಾಗ ಅವರನ್ನು ನೋಡಿ ಮಾತಾಡಬೇಕೆಂಬ ಬಯಕೆ ತೀವ್ರವಾಯಿತು.

ಅವರು ಹೇಗಿದ್ದರು? ಸ್ವಾತಂತ್ರ್ಯ ಪೂರ್ವ ಭಾರತದ ನೈಷ್ಠಿಕ ಗಾಂಧೀಮಾರ್ಗಾನುಸಾರಿ. ತಾನು ಒಪ್ಪಿ ಅಂಗೀಕರಿಸಿದ್ದ ಜೀವನ ಮೌಲ್ಯಗಳು ಅನುಷ್ಠಾನ ಆಚರಣೆಗಳಿಂದ ಪ್ರಕಟವಾಗಬೇಕೇ ವಿನಾ ಭಾಷಣ ಘೋಷಣೆಗಳಿಂದಲ್ಲ ಎಂಬುದು ಅವರ ಜೀವನ ನೀತಿ. ಶುದ್ಧ ಶುಭ್ರ ಖಾದಿ ವಸ್ತ್ರಧಾರಿ. ಗಂಭೀರ ಮತ್ತು ಆಕರ್ಷಕ ನಿಲವು ಮತ್ತು ನಡೆ. ಭಯಸಹಿತ ಗೌರವ ಪ್ರೇರಕ ಧೀರ ವ್ಯಕ್ತಿತ್ವ.

ನಮ್ಮ ಕನ್ನಡ ಗುರುಗಳಾಗಿದ್ದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು (೧೮೮೮-೧೯೫೦) ತರಗತಿಯಲ್ಲಿ ನಮಗೆ ನಾಗವರ್ಮನ ಉಕ್ಕಿನ ಕಡಲೆ ಕಾದಂಬರೀ ಕಾವ್ಯವನ್ನು ಅಕ್ಕರೆಯಿಂದ ಬಿಡಿಬಿಡಿಯಾಗಿ ಉಣಿಸುತ್ತಿದ್ದಾಗ ಸೇಡಿಯಾಪು ಮತ್ತು ಕಡೆಂಗೋಡ್ಲು ಎಂಬ ಇಬ್ಬರು ಸಮಕಾಲೀನ (ಉಭಯರೂ ಮಂಗಳೂರು ನಿವಾಸಿಗಳಾಗಿದ್ದುದರಿಂದ ಸಮದೈಶಿಕ ಕೂಡ) ವಿದ್ವಾಂಸರ ಹೆಸರುಗಳನ್ನು ಪದೇ ಪದೇ ಉಲ್ಲೇಖಿಸುತ್ತಿದ್ದರು. 'ಹೊನ್ನಿಯ ಮದುವೆ'ಯ ಕಡೆಂಗೋಡ್ಲು ಶಂಕರಭಟ್ಟರು (೧೯೦೪-೬೮)ಇನ್ನೂ "ಭಯಂಕರರು" ಎಂದು ದರ್ಶನ ಮಾತ್ರದಿಂದಲೇ ಅನಿಸಿದ್ದರಿಂದ ಅವರ ಹತ್ತಿರ ಸುಳಿಯುವ ಧೈರ್ಯ ಅಂದು ಪ್ರದರ್ಶಿಸಲಿಲ್ಲ.

> "ನಿಜವಾಗಿ 'ನಮ್ಮ ಭಾಷೆ'ಯನ್ನು ಬೆಳೆಯಿಸುವುದೆಂದರೆ ನಮ್ಮ ಭಾಷೆಯಲ್ಲಿಯೇ ನಮ್ಮ ವಿಚಾರಗಳನ್ನು ಬೆಳೆಯಿಸುವುದು. ಹಾಗೆ ಬೆಳೆದ ವಿಚಾರಗಳನ್ನು ಯಥಾವತ್ತಾಗಿ ಪ್ರಕಾಶಪಡಿಸುವುದು. ನಮ್ಮಲ್ಲಿಯ ಶಬ್ದ ದಾರಿದ್ರ್ಯದ ಕೂಗಿಗೆ ನಮ್ಮ ಬಾಹಾಭ್ಯಾಸದ ಅಭಾವವೇ ಮುಖ್ಯ ಕಾರಣ..."

ಈ ವಿದ್ವಾಂಸರು ಮಂಗಳೂರಿನ ಸಾರ್ವಜನಿಕ ಸಾರಸ್ವತ ಕ್ರಿಯಾ ಕಲಾಪಗಳಲ್ಲಿ ಒಂದೇ ವೇದಿಕೆಯನ್ನು ಅಲಂಕರಿಸುವುದಿತ್ತು. ಅದೆಂಥ ಅಲಂಕಾರ ದೃಶ್ಯ! ಉಭಯರಿಗೂ ಗುರುಗಳಾಗಿದ್ದ ಮುಳಿಯರು ಸೃಷ್ಟಿಯನ್ನೂ (ಬ್ರಹ್ಮ), ಸೇಡಿಯಾಪು ಸ್ಥಿತಿಯನ್ನೂ (ವಿಷ್ಣು), ಕಡೆಂಗೋಡ್ಲು ಲಯವನ್ನೂ (ಮಹೇಶ್ವರ) ಪ್ರತೀಕಿಸುವಂತಿದ್ದರು. ("ಲಯವೆಂದರೆ ಕ್ರಿಯಾ ಕಾಲಖಂಡಗಳ ಅನ್ಯೋನ್ಯ ಸಮತ್ವ" ಸೇಡಿಯಾಪು 'ಛಂದೋಗತಿ'ಯಲ್ಲಿ)

ಮುಳಿಯ! ಪರಿಪೂರ್ಣವಾಗ್ಮಿ, ಇವರ ಭಾಷಣ ಪ್ರತಿಸಲವೂ ಸಿದ್ಧಪಾಕವೇ. ಪದ, ಅಂತೆಯೇ ಅರ್ಥದ, ಬೆನ್ನೇರಿ ಹೋಗಿ ಸಾಹಿತ್ಯದ ವಿಶ್ವರೂಪ

ಕಾಣಿಸುವ ಕೌಶಲ ಅನುಪಮ. ಸೇಡಿಯಾಪು ನುಡಿಗಳಲ್ಲಿ "ಕನ್ನಡ ಶಬ್ದಭಂಡಾರಿ, ಹಳಗನ್ನಡ ಕಾವ್ಯಾರಣ್ಯ ಕೇಸರಿ, ವಿದ್ವನ್ಮನೋಹಾರಿ, ಶಿಷ್ಯಹೃದಯವಿಹಾರಿ ಮುಳಿಯದವರು." ಇವರು ನಾಡೋಜರು.

ಸೇಡಿಯಾಪು! ಅಳುಕು ಹಿಂಜರಿಕೆ ಮುಸುಕಿನೊಳಗೆ ಪ್ರಖರ ಜ್ಞಾನಜ್ಯೋತಿ. ತೀಕ್ಷ್ಣ ವಿಮರ್ಶಕ ಪ್ರಜ್ಞೆಯ ಪರುಷಕ್ಕೆ ಲೇಪಿಸಿದ್ದ ಕವಿಹೃದಯದ ಮಾನವೀಯತೆ. ಭಾಷಣಸುಖಿಗಳಲ್ಲ, ಭಾವಭಾವನೆಗಳ ಸೌಂದರ್ಯಕ್ಕೆ ಒಪ್ಪುವ ಮತ್ತು ಹೊಂದುವ ಪದಸಮುಚ್ಚಯ. ಆ ಗಳಿಗೆ ಇವರಿಗೆ ಒದಗುತ್ತಿರಲಿಲ್ಲವೋ ಎಂಬಂತೆ. ಸಂವಾದದಲ್ಲಿ ನಿಷ್ಣಾತರು, ಪರೇಂಗಿತಜ್ಞರು. ಮುಳಿಯರ ಮಾತಿನಲ್ಲಿ "ಕನ್ನಡತನಕ್ಕೆ ಒರೆಗಲ್ಲು ಸೇಡಿಯಾಪು."

ಕಡೆಂಗೋಡ್ಲು! ಮಲೆನಾಡಿನ ಕಾರ್ಗಾಲದ ಗಿರಿನಿರ್ಝರಿಣಿ ಪ್ರವಾಹದಂತೆ ಭಾಷಣ. ಕುಮಾರವ್ಯಾಸನ ಅಭಿಮನ್ಯುವನ್ನು ನೆನಪಿಗೆ ತರುವ ವಾಗ್‌ಸ್ರೋತಸು.

ಬವರವಾದರೆ ಹರನ ವದನಕೆ
ಬೆವರ ತಹೆನವಗಡಿಸಿದರೆ ವಾ
ಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ
ಜವನ ಜವಗೆಡಿಸುವೆನು ಸಾಕಿ
ನ್ನಿವರವರಲೇನರ್ಜುನನು ಮಾ
ಧವನು ಮುನಿದೆಡೆ ಗೆಲುವೆನಂಜದೆ ರಥವ ಹರಿಸೆಂದ.

ಸೇಡಿಯಾಪು ಬರೆದಿದ್ದಾರೆ: " ಶಂಕರಭಟ್ಟರೂ ನಾನೂ ಎಂದೂ ಪರಸ್ಪರ ಸ್ಪರ್ಧಿಸಿದವರಲ್ಲ - ಗೆಳೆಯರಾಗಿ ಬಾಳಿದವರು, ಸಮಾನಶೀಲ ವ್ಯಸನರು, ಸಮಾನ ವೃತ್ತಿಯವರು. ನಮ್ಮೊಳಗೆ ಹೀಗೆ ಸಾಮ್ಯವಿದ್ದರೂ ಅಂತರ ಬಹಳ ಇತ್ತು -ದೈಹಿಕವಾಗಿ ಹಾಗೂ ಮಾನಸಿಕವಾಗಿ. ಆಳಂಗದಲ್ಲಿ, ಗಾಂಭೀರ್ಯದಲ್ಲಿ, ಬಲದಲ್ಲಿ, ತೇಜಸ್ಸಿನಲ್ಲಿ, ಶೌರ್ಯದಲ್ಲಿ ಪ್ರಭಾವದಲ್ಲಿ ಅವರು ನನಗಿಂತ ಹೆಚ್ಚಿನವರು."

ಸೇಡಿಯಾಪು ತಮ್ಮನ್ನು ಬಳ್ಳಕ್ಕೆ (ಅಳತೆಯ ಕಿರಿ ಮಾನಕ) ಹೋಲಿಸಿಕೊಂಡು "ಕಳಸೆಯನ್ನು (ಹಿರಿ ಮಾನಕ) ಕಂಡು ಬಳ್ಳ ಕುಗ್ಗುವುದಿಲ್ಲ" ಎಂದಿದ್ದಾರೆ.

ಕವಿಗೆ ಕವಿ ಮಣಿಯುವ ವಿರಳ ವಿನಯ.

೧೯೪೯-೫೩ರ ಅವಧಿಯಲ್ಲಿ ನಾನು ಅದೇ ಕಾಲೇಜಿನಲ್ಲಿ ಗಣಿತ ಲೆಕ್ಚರರ್ ಆಗಿ ಸೇವೆಸಲ್ಲಿಸಿದೆ. ಆ ವೇಳೆಗೆ ನಮ್ಮ ಸೇಡಿಯಾಪು ಕಾಲೇಜಿಗೆ 'ಬಡ್ತಿ' ಪಡೆದು ಕನ್ನಡ ಟ್ಯೂಟರ್ ಎಂಬ ಘನ ಅಭಿಧಾನ ಸಹಿತ ನನ್ನಂಥ ಕಿರಿಯರಿಗೂ 'ಜ್ಯೂನಿಯರ್' ಸಹೋದ್ಯೋಗಿ ಆಗಿದ್ದರು. ಏಕೆಂದರೆ ಆಡಳಿತದ ಅಂಧಯಂತ್ರ ಶ್ರೇಣೀಕೃತ ವ್ಯವಸ್ಥೆಗೆ ಮಾತ್ರ ಸಂವೇದಿಸುತ್ತಿತ್ತೇ ಹೊರತು ವಿದ್ವತ್ತಿನ ಪ್ರಖರತೆಗಲ್ಲ. ವಿದ್ಯಾರ್ಥಿಗಳ ಕಾಗುಣಿತ ತಿದ್ದುವ ಕೆಲಸ ಈ ಶಬ್ದ ಬ್ರಹ್ಮನಿಗೆ!

ಕಾಲೇಜಿನ ಅಧ್ಯಾಪಕರ ಕೊಠಡಿಯಲ್ಲಿ ದಿನದಿನ ನಡೆಯುತ್ತಿದ್ದ ಸಾಹಿತ್ಯ ಸರಸಸಲ್ಲಾಪಗಳು ಅವೆಷ್ಟೊ. ಅಲ್ಲಿಯ ಪ್ರಮುಖ ಪಾತ್ರಧಾರಿಗಳು ಕಾಲೇಜಿನ Brain Trust ಎಂಬ ಸಹಜ ಖ್ಯಾತಿ ಭಾಜನರಾಗಿದ್ದ ಇಬ್ಬರು - ಕನ್ನಡ ಟ್ಯೂಟರ್ ಸೇಡಿಯಾಪು ಕೃಷ್ಣಭಟ್ಟರು ಮತ್ತು ಗಣಿತ ಪ್ರೊಫೆಸರ್ ಕೆ.ಎ. ಕೃಷ್ಣಮೂರ್ತಿಯವರು (ಇವರು ನನ್ನ ನೇರ ಗಣಿತ ಗುರುಗಳು, ಮೇ ೧೯೯೭ರಲ್ಲಿ ತಮ್ಮ ೮೨ನೆಯ ವಯಸ್ಸಿನಲ್ಲಿ ನಿಧನರಾದರು). ಆ ಉನ್ನತ ಭ್ರೂಗಳ ನಡುವೆ ೨೩ರ ಹರೆಯದ ನನ್ನದು ತುಸು ಲಘು ಪಾತ್ರ -ಕೋಡಂಗಿಯಂತೆ! ಮೊದಲೆ ಕೊಡಗಿನ ಕೋಡಗ, ಮೇಲೆ ಅಂತಸ್ತು ಸಹಿತವಾದ ಏರು ಜವ್ವನ, ಮತ್ತು ಕಳಶಪ್ರಾಯವಾಗಿ ನೂರಾರು ವಿದ್ಯಾರ್ಥಿಗಳಿಂದ (ಅದು ಹುಡುಗರ ಕಾಲೇಜ್) ಅಯಾಚಿತವಾಗಿ ಹರಿದುಬರುತ್ತಿದ್ದ ಮೆಚ್ಚುಗೆ ಪ್ರವರ್ತಿಸಿದ ಉನ್ಮತ್ತತೆ ಕೇಳಬೇಕೇ? ಕಿರಿಯರೊಡನೆ ಕಿರಿಯರಾಗಿ ಬೆರೆಯುತ್ತಿದ್ದ ಈ ಹಿರಿಯರನ್ನು 'ಕೆಣಕಿ' ಅಧಿಕ ಜ್ಞಾನ ಸಂಪಾದಿಸುವುದು ನನ್ನ ಚಾಳಿ ಆಯಿತು.

ಒಬ್ಬ ಆಗಂತುಕನಿಗೆ ಸೇಡಿಯಾಪು ಅವರನ್ನು ಪರಿಚಯಿಸಿದೆ. "ನಾನು ಲೆಕ್ಕಕ್ಕೆ ಮಾಷ್ಟ್ರು, ಇವರೋ ವಾಗ್ದೇವಿಯ ರತ್ನಭಂಡಾರದ ಬೀಗ ಒಡೆದ ಪ್ರಕಾಂಡ ಪಂಡಿತರು."

ಅವರು ಚಾಟಿಯ ಚಟಕನ್ನು ಲಗಾಯಿಸಿಯೇ ಬಿಟ್ಟರು; "ಹೌದು! ಲೆಕ್ಕಿಗಮಿತಾಕ್ಷರರು, ಆದರೆ ಲೆಕ್ಕಕ್ಕೆ ಒಬ್ಬನೇ!"

ಒಂದು ಸಂಜೆ ಅವರ ಬಿಡಾರಕ್ಕೆ ನಡೆದು ಹೋದೆ. "ಅಡಗುವ ರಾತ್ರಿಯ ನೆಟ್ಟಟ್ಟುತ ಮೂಡಲ ಕೆಂಪೇರುತ್ತಿದ್ದಾಗ ಹೊರಟೆ. ತಲಪಿದ್ದು

ಈಗ! ಎಷ್ಟು ದೂರ ನಿಮ್ಮ ಮನೆ - ತದ್ದೂರೇ ತದ್ವಂತಿಕೇ" ಎಂದೆ ಲಘುವಾಗಿ.

"ಹಾದಿಯಲ್ಲಿ ಯಾವ ಮಿಹಿರೆ ಎದುರಾದಳು?" 'ತರುಣ ಧಮನಿ' ಕಾವ್ಯ ಓದಿದರೆ ಈ ಪ್ರಶ್ನೆಯ ಸ್ವಾರಸ್ಯ ತಿಳಿಯುವುದು).

ಆಗ ಅವರ ಕಿರಿ ಮಕ್ಕಳಿಬ್ಬರು - ಪ್ರಾಯಶಃ ಜಯರಾಮ ಮತ್ತು ಶಿವಸುಂದರಿ - ಆಡುತ್ತ ಮೊಗಸಾಲೆಗೆ ಬಂದರು. ಅವರನ್ನು ರಂಜಿಸುವ ಸಲುವಾಗಿ ಒಂದು ಕನ್ನಡ ಪದ್ಯವನ್ನು ತಿರುಚಿ ಅಭಿನಯಸಹಿತ ಉದುರಿಸಿದೆ.

ಟೋಮುಲಾಕುಟಾಕುಯಾನಿಟೇಪದೀಟಟಾದುಗಾವ
ಟಾಸೆದುಮ್ತ ಧೊಮ್ಮಡಮ್ಕು ತಿಮ್ನುಟತ್ತಿಬು
ಟೋತಿಟೊಯ್ಯ ಲೋಕಡುಮ್ತ ದೊಮ್ನಡಿದುಹು ಟೆಪ್ಪ
ದೊಕೆ
ಟೋಮುಲಾಕಡದಿಬು ಡದಿಬುಣ್ರೂಪಟತ್ತಿಬು

ಎರಡನೆಯ ಸಾಲಿನ "ಡುಮ್ತದೊಮ್ನಡಮ್ಕು" ಎನ್ನುವಲ್ಲಿಯ ಓಘ ಆ ಮಕ್ಕಳಿಗೆ ಮಾತ್ರವಲ್ಲ ವಯ್ಯಾಕರಣ ಸೇಡಿಯಾಪು ಅವರಿಗೂ ವಿಶೇಷ ಕಚಗುಳಿ ಇಟ್ಟು ಖುಷಿ ಕೊಟ್ಟಿತು. ಮುಂದೆ ಅವರು ನನಗೆ "ಪ್ರಿಯ ಟೋಮುಲಾಕು" ಎಂದು ಬರೆಯುವುದೇ ರೂಢಿ ಆಯಿತು. (ವಾಚಕರು ಈ ಸಾಲುಗಳನ್ನು ಗಟ್ಟಿಯಾಗಿ ಓದಿದರೆ ಅಂತರ್ಗತ ರಾಚನಿಕ ತಂತ್ರ ಒಡನೆ ಸ್ಫುರಿಸದಿರದು. ಮುಂದೆ ಅವರೇ ಈ ತಂತ್ರ ಬಳಸಿ ನೂತನ ಕುಕವಿತೆಗಳನ್ನು ಹೊಸೆದು ಆನಂದಿಸಬಹುದು.)

ಕನ್ನಡದಲ್ಲಿ ವಿಜ್ಞಾನ ವಾಙ್ಮಯ ರಚಿಸಲು ತೊಡಕೇನು? (ನಾನು 'ವಿಜ್ಞಾನ ಸಾಹಿತ್ಯ' ಎಂದು ಮಾಮೂಲಿನಂತೆ ಬರೆದಿದ್ದೆ. ಅದನ್ನು 'ವಿಜ್ಞಾನ ವಾಙ್ಮಯ' ಎಂದು ಆಧಾರಸಹಿತ ತಿದ್ದುಕೊಟ್ಟವರು ಸ್ವತಃ ಸೇಡಿಯಾಪು) ನನ್ನ ವೃತ್ತಿಗೆ ಸಂಬಂಧಿಸಿದಂತೆ ಈ ವಿಷಯ ಕುರಿತು ನಾನೊಂದು ಪ್ರಬಂಧ ಮಂಡಿಸಬೇಕಾಗಿತ್ತು. ಭಾಷಾವಿಚಾರಗಳಿಗೆ ನಿಕಷಪ್ರಾಯರಾಗಿದ್ದ ಕೃಷ್ಣಭಟ್ಟರ ಚಿಂತನೆಗಳನ್ನು ತಿಳಿಯುವ ಸಲುವಾಗಿ ಅವರ ಪ್ರಬಂಧಗಳ ಮೇಲೆ ದೃಷ್ಟಿ ಹಾಯಿಸಿದೆ. ಆ ಮೊದಲೇ ಅನುಭವದಿಂದ ನಾನೊಂದು ಸಂಗತಿ ಅರಿತಿದ್ದೆ. ಈ ತೊಡಕು ಭಾಷಾಜನ್ಯವಾದುದಲ್ಲ; ಲೇಖಕಮೂಲವಾದುದು. ಮುಳಿಯ ತಿಮ್ಮಪ್ಪಯ್ಯ ಸ್ಮಾರಕ ಗ್ರಂಥ (೧೯೫೭) "ಶ್ರದ್ಧಾಂಜಲಿ"ಯಲ್ಲಿ ಪ್ರಕಟವಾಗಿದ್ದ ಸೇಡಿಯಾಪು ಲೇಖನ 'ಹೊಸಗನ್ನಡ ಗದ್ಯ ಭಾಷೆ' ಇದೇ ವಿಷಯವನ್ನು ಸಮಗ್ರವಾಗಿ ಚರ್ಚಿಸಿತ್ತು. ನನ್ನ ಅನುಭವಜನ್ಯ ತೀರ್ಮಾನಕ್ಕೆ ಸೈದ್ಧಾಂತಿಕ ಅಸ್ತಿಭಾರ ಒದಗಿಸಿತ್ತು. ಅವರು ಬರೆದಿದ್ದಾರೆ:

"ನಿಜವಾಗಿ 'ನಮ್ಮ ಭಾಷೆ'ಯನ್ನು ಬೆಳೆಯಿಸುವುದೆಂದರೆ, ನಮ್ಮ ಭಾಷೆಯಲ್ಲಿಯೇ ನಮ್ಮ ವಿಚಾರಗಳನ್ನು ಬೆಳೆಯಿಸುವುದು, ಹಾಗೆ ಬೆಳೆದ ವಿಚಾರಗಳನ್ನು ಯಥಾವತ್ತಾಗಿ ಪ್ರಕಾಶಪಡಿಸುವುದು, ನಮ್ಮ ಭಾಷೆಯ ಉತ್ತಮ ಗ್ರಂಥಗಳನ್ನು ಅಧ್ಯಯನಮಾಡಿ, ನಮ್ಮ ವಾಕ್ಸಂಪತ್ತಿಯನ್ನು ಹೆಚ್ಚಿಸಿಕೊಂಡು, ಆಯಾ ಶಬ್ದಗಳ ಆಳವರಿತು ಪ್ರಯೋಗಿಸುವುದು. ನಮ್ಮಲ್ಲಿಯ ಶಬ್ದ ದಾರಿದ್ರ್ಯದ ಕೂಗಿಗೆ ನಮ್ಮ ಭಾಷಾಭ್ಯಾಸದ ಅಭಾವವೇ ಮುಖ್ಯ ಕಾರಣವಾಗಿದೆ... ಶಾಸ್ತ್ರೋಪಯೋಗಿ ಗದ್ಯವನ್ನು ನಿರ್ಮಿಸುವುದು ಸಾಧಾರಣ ಗದ್ಯವೇ ಆಗಿದೆ. ಎಂದರೆ ಶಾಸ್ತ್ರ ಗದ್ಯವು ಸಾಧಾರಣ ಗದ್ಯಕ್ಕಿಂತ ಬೇರೆಯಲ್ಲ, ಅದರದೇ ಆದ ಒಂದು ರೂಪ. ಒಂದು ಭಾಷೆಯ ಸಾಧಾರಣ ಗದ್ಯದಲ್ಲಿ ಎಷ್ಟರ ಮಟ್ಟಿಗೆ ಅಸಂದಿಗ್ಧವಾದ ಅರ್ಥಪ್ರಕಾಶನ, ವಸ್ತುಸ್ಥಿತಿಯ ಯಥಾರ್ಥ ನಿರೂಪಣೆ ಸಮಗ್ರ ವಿವರಣೆ ಇವುಗಳನ್ನು ಮಾಡುವ ಶಕ್ತಿ ಹೆಚ್ಚುವುದೋ ಅಷ್ಟರ ಮಟ್ಟಿಗೆ ಆ ಭಾಷೆಯ ಶಾಸ್ತ್ರ ಗದ್ಯವು ಶಕ್ತಿಸಂಪನ್ನವಾಗುವುದು..."

> "ಜೀವಂತ ಜನಾಂಗಾದ ಪಥಕ್ರಮಣದಲ್ಲಿ ಸಂಸ್ಕೃತಿ ಕಿನೆಗಟ್ಟುತ್ತದೆ. ಜೀವನ ಪ್ರಕ್ರಿಯೆಗಳ ಸಾರವಿದು. ತಲೆಮಾರಿನಿಂದ ತಲೆಮಾರಿಗೆ ಸಂಸ್ಕೃತಿ ಪ್ರವಹಿಸುತ್ತದೆ. ಈ ಪ್ರವಾಹವೇ ಪರಂಪರೆ. ಪರಂಪರೆಯ ವರ್ತಮಾನ ಮುಖ ಸಂಪ್ರದಾಯ. ಸಂಪ್ರದಾಯವಿರದ ಪರಂಪರೆ ನಿಂತ ನೀರು."

ಇನ್ನೊಂದು ಕಡೆ ಬರೆದಿದ್ದಾರೆ: "ನಮ್ಮ ಭಾಷೆಗೆ ಬಂದಿರುವ ರೋಗವು ಶಬ್ದಗಳ ಅಭಾವವೆಂಬುದಕ್ಕಿಂತ ಶಬ್ದಗಳ ಅಪವ್ಯಯ ಎಂದು ಹೇಳುವುದೇ ಹೆಚ್ಚು ಸಮಂಜಸ. ನಾವು, ಎಂದರೆ ಬರಹಗಾರರು, ನಮ್ಮ ಪ್ರಯೋಗಗಳ ಸಾಧುತ್ವವನ್ನು ಪರೀಕ್ಷಿಸುವ

ಗೊಡವೆಗೆ ಹೋಗುತ್ತೇವೆಯೋ?"

ಬಿಡಿ ಸಮಸ್ಯೆಯಿಂದ ತೊಡಗಿ ಸಾರ್ವತ್ರಿಕ ನಿಯಮ ಮಂಡನೆ, ಮತ್ತೆ ಈ ನಿಯಮವನ್ನು ಆಧರಿಸಿ ಬಿಡಿ ಸಮಸ್ಯೆಯ ಪರಿಹಾರ ಇದು ಸೇಡಿಯಾಪು ಶೈಲಿ. ವೈಜ್ಞಾನಿಕ ವಿಧಾನದ ತತ್ತ್ವವಿದು.

ಇವರ ಕವಿತೆಗಳನ್ನು ಖಂಡಕಾವ್ಯಗಳನ್ನು ಓದುವಾಗ ಅಲ್ಲಲ್ಲಿ ಮಿಂಚಿನ ಸ್ಪರ್ಶದಿಂದ ಪುಳಕಿತರಾಗುವೆವಾದರೂ-

''ಜಗಕೆ ನಗೆಯೇ ದೀಪ, ಕತ್ತಲೆಗೆ ಬಹುರೂಪ
ಎಲ್ಲಿ ಕಣ್ ಕಾಣದೋ ಎಲ್ಲಿ ಬಗೆ ಬಗೆಯದೋ
ಅಲ್ಲಿ ಕತ್ತಲೆಯ ವಾಸ"

''ಅಂಬುಜದ ಬಾಯ್ದೆರೆಗೆ ಸಿಡಿಲಿನ
ತುಂಬಿ ಹೊಕ್ಕಿತು!"

''ನರರ ಹೆಕ್ಕಳಿಕೆಯ ಕೊಚ್ಚು
ರಾಗರೋಷಗಳನು ಹಿಡಿವ ಬಲ್ಮೆಗಳನು ಒರೆಗೆ
ಹಚ್ಚು!"

ಸಮಗ್ರವಾಗಿ ಇವರು ನಮಗೆ ಆಪ್ತರಾಗುವುದು ಮತ್ತು ಸದಾ ಪ್ರಸ್ತುತರಾಗುವುದು ತಮ್ಮ ಗಹನ ಶಾಸ್ತ್ರೀಯ ಚಿಂತನೆಗಳಲ್ಲಿ ಜಾಗೃತವಾಗಿರುವ ಕವಿಹೃದಯದಿಂದ. ಅಂದರೆ ಶಾಸ್ತ್ರವನ್ನು ಕಲೆಯ ಮಟ್ಟಕ್ಕೆ ಮತ್ತು ಮಾರ್ದವತೆಗೆ ಎತ್ತರಿಸಿರುವ ಬಲ್ಮೆ ಇವರದು.

ಒಮ್ಮೆ ಕೇಳಿದೆ, "ಪರಂಪರೆ ಮತ್ತು ಸಂಪ್ರದಾಯ ಎರಡನ್ನೂ tradition ಎನ್ನುವ ಅರ್ಥದಲ್ಲಿ ಬಳಸುವುದು ವಾಡಿಕೆ ಆಗಿದೆ. ಇವುಗಳ ನಿಷ್ಪತ್ತಿ ಹೇಗೆ?"

"ಇಂಗ್ಲಿಷ್ ಅಥವಾ ವ್ಯಾಪಕವಾಗಿ ಪಾಶ್ಚಾತ್ಯ ಸಂಸ್ಕೃತಿಯ ಮುನ್ನೆಲೆಯಲ್ಲಿ tradition ಪದದ ಅರ್ಥ ಸ್ವಾರಸ್ಯ ಗ್ರಹಿಸಿ ಬಳಿಕ ಅದಕ್ಕೆ ಸಂವಾದಿಯಾಗಿ ನಮ್ಮ ಯಾವ ಪದ ಬಳಸಬೇಕು ಎಂದು ವಿಮರ್ಶಿಸುವಾಗ ಈ ಗೊಂದಲ ತಲೆದೋರುತ್ತದೆ. ಭಿನ್ನ ಸಂಸ್ಕೃತಿಜನ್ಯ ಭಾಷೆಗಳ ನಡುವೆ ಪರಿಕಲ್ಪನೆಗಳ ಕೊಡು-ಕೊಳು ಕ್ರಿಯೆ ಜರುಗುವಾಗ ಉದ್ಭವಿಸುವ ಸಾರ್ವತ್ರಿಕ ಸಮಸ್ಯೆ ಇದು. ಇದರ ಪರಿಹಾರಕ್ಕಿರುವ ಏಕೈಕ ಮಾರ್ಗವೆಂದರೆ ನಾವು ಭಾರತೀಯ ಸಂಸ್ಕೃತಿಯ ಮುನ್ನೆಲೆಯಲ್ಲಿಯೇ ಈ ಮೂಲಭೂತ ಪರಿಕಲ್ಪನೆಗಳನ್ನು ಅರ್ಥವಿಸಿ ವ್ಯಾಖ್ಯಾನಿಸಲು ಪ್ರಯತ್ನಿಸುವುದು." (ಗಮನಿಸಬೇಕು: 'ಮುನ್ನೆಲೆ' ಪ್ರಯೋಗ.) ಎಂದರು.

ನಮ್ಮ ಸಂಭಾಷಣೆಯ ಸಾರವಿದು:

ಜೀವಂತ ಜನಾಂಗದ ಪಥಕ್ರಮಣದಲ್ಲಿ ಸಂಸ್ಕೃತಿ ಕೆನೆಗಟ್ಟುತ್ತದೆ. ಜೀವನ ಪ್ರಕ್ರಿಯೆಗಳ ಸಾರವಿದು. ತಲೆಮಾರಿನಿಂದ ತಲೆಮಾರಿಗೆ ಸಂಸ್ಕೃತಿ ಪ್ರವಹಿಸುತ್ತದೆ. ಈ ಪ್ರವಾಹವೇ ಪರಂಪರೆ. ಪರಂಪರೆಯ ವರ್ತಮಾನಮುಖ ಸಂಪ್ರದಾಯ. ಪ್ರಾಚೀನ ಕಾಲದಿಂದ ನಮಗೆ ಬಳುವಳಿಯಾಗಿ ಬಂದಿರುವ ಜೀವನಧರ್ಮ ಅಥವಾ ಮೌಲ್ಯಗಳ ಮೊತ್ತ ಪರಂಪರೆ. ಇಂದು ನಾವು ಈ ಪರಂಪರೆಯನ್ನು ವಾಸ್ತವವಾಗಿ ಜೀವನದಲ್ಲಿ ಹೇಗೆ ಅನುಷ್ಠಾನಿಸುತ್ತೇವೆ ಅಥವಾ ಅನುಷ್ಠಾನಿಸಬೇಕು - ಇದು ಸಂಪ್ರದಾಯ ಆದ್ದರಿಂದ ಬೇರಿಗೂ ಚಿಗುರಿಗೂ ನಡುವಿನ ಅನ್ಯೋನ್ಯ ಸಂಬಂಧ ಅಂದರೆ ಕಾಂಡ ಪರಂಪರೆ, ಚಿಗುರು ಸಂಪ್ರದಾಯ, ಗಂಗೋತ್ರಿಗೂ ಪ್ರಯಾಗಕ್ಕೂ ನಡುವಿನ ಭಾಗೀರಥಿ ಪರಂಪರೆ, ಪ್ರಯೋಗದಲ್ಲಿಯ ತೀರ್ಥ ಸಂಪ್ರದಾಯ. "ಸತ್ಯಂವದ ಧರ್ಮಂಚರ" ಪರಂಪರೆಯಿಂದ ಬಂದಿರುವ ಜೀವನ ಮೌಲ್ಯ. ಇದನ್ನು ನಿತ್ಯ ಜೀವನದಲ್ಲಿ ನಾವು ಹೇಗೆ ಅನುಸರಿಸುವೆವು ಎಂಬುದು ಇಂದಿನ ಸಂಪ್ರದಾಯ. ಜೀವನ ನಾಣ್ಯಕ್ಕೆ ಪರಂಪರೆ ರಾಷ್ಟ್ರ ಲಾಂಛನವಿದ್ದಂತೆ, ಸಂಪ್ರದಾಯ ಮೌಲ್ಯ ಟಂಕಿತವಾಗಿರುವಂತೆ. ಎಂದೇ ಪರಂಪರೆ ಇರದ ಸಂಪ್ರದಾಯ ಬುರುಗು ನೊರೆ, ಸಂಪ್ರದಾಯವಿರದ ಪರಂಪರೆ ನಿಂತ ನೀರು.

ಸಾಂಪ್ರದಾಯಿಕವಾಗಿ (ಪಾರಂಪರಿಕವಾಗಿ ಅಲ್ಲ!) ಸೇಡಿಯಾಪು ಕಲಿತದ್ದು ಒಂಬತ್ತನೆಯ ಇಯತ್ತೆಯ ವರೆಗೆ ಮಾತ್ರ. ಅವರ ಪಾಂಡಿತ್ಯವೆಲ್ಲವೂ ಸ್ವಯಾರ್ಜಿತ - ಜೀವನಶಿಕ್ಷಣ ಶಾಲೆಯಲ್ಲಿ. ನಡೆನುಡಿಬಗೆಗಳಲ್ಲಿ ಐಕ್ಯ ಸಾಧಿಸಿರುವ ಪ್ರಖರ ಪ್ರತಿಭೆ ಯಾವ ಔನ್ನತ್ಯಕ್ಕೆ ಏರಬಹುದೆಂಬುದಕ್ಕೆ ಸೇಡಿಯಾಪು ಕೃಷ್ಣಭಟ್ಟರು ದಿವ್ಯ ಪ್ರತೀಕ.

ವಿಸ್ತಾರದಲಿ ಬಾಳು ವೈಶಾಲ್ಯದಿಂ ಬಾಳು
ಕತ್ತಲೆಯ ಮೊಡಕು ಮೂಲೆಗಳ ಸೇರದಿರು
ಭಾಸ್ಕರನನುಗ್ರಹವೆ ನೂತನ ಜೀವನಸತ್ತ್ವ
ಮೃತ್ಯು ನಿನಗಲ್ಪತೆಯೆ ಮಂಕುತಿಮ್ಮ





ನೋಟ

- ಪಂಪಣ್ಣ ಶಿಳ್ಳಿನ

# ಗಂಡ-ಹೆಂಡಿರ ಜಗಳ

ಹೊತ್ತು ಮುಳುಗುವ ಸಮಯ. ಸ್ವಲ್ಪ ಹೊತ್ತು ಹೊರಗಡೆ ತಿರುಗಾಡಿಕೊಂಡು ಬರುವ ಮನಸ್ಸಾಯಿತು. ಹಾಗೆಂದೇ ಗೆಳೆಯನ ಮನೆಯತ್ತ ಹೊರಟಿದ್ದೆ. ದಾರಿಯುದ್ದಕ್ಕೂ ಯಾವುದೋ ಹಾಡೊಂದನ್ನು ಗುಣುಗುಣಿಸುತ್ತ ನಡೆದೆ. ಆಗ ದಾರಿಯ ಮಧ್ಯದಲ್ಲಿ ಏನೋ ಗಲಾಟೆ ಕೇಳಿಬಂತು. ಕುತೂಹಲದಿಂದ ಅದರ ಹತ್ತಿರಕ್ಕೆ ಹೋಗತೊಡಗುತ್ತಿದ್ದಂತೆಯೇ,

"ಲೋ, ಈಗೀಗ ನಿನಗೆ ಪಿತ್ತ ನೆತ್ತಿಗೇರೀತೆ..." ಎಂಬ ಹೆಂಗಸಿನ ದನಿ.

"ನಂದಲ್ಲ ನಿಂದು. ಮಳ್ಳೀ, ನೀನೇನೂ ಕಡಿಮೆ ಹೆಂಗಸಲ್ಲ. ನನಗಿಂತಲೂ ನೀ ಒಂದು ಹೆಜ್ಜೆ ಮುಂದೇ ಇದ್ದೀ..." ಎಂಬ ಗಂಡಸಿನ ದನಿಯೂ ಕೇಳಿಬಂತು. ಗಲಾಟೆಯ ಸುತ್ತಮುತ್ತ ಸಾಕಷ್ಟು ಜನ ನೆರೆದಿದ್ದರು.

ಬಲು ವಿಚಿತ್ರವಾದ ದೃಶ್ಯವದು! ಅಲ್ಲಿ ಹೆಂಗಸೊಬ್ಬಳು ಗಂಡಸಿನ ಜತೆ ಸಮಬಲದಲ್ಲಿ ಹೋರಾಡತೊಡಗಿದ್ದಳು. ಅದು ಬರಿಗೈ ಹೋರಾಟವಲ್ಲ. ಅವಳು ಒನಕೆಯ ಓಬವ್ವನನ್ನು ನೆನಪಿಸುವಂತೆ. 'ಸೌಟವ್ವ'ನಾಗಿ ರೌದ್ರ ಕಾಳಿಯಂತೆ ನಿಂತಿದ್ದಳು. ಎದುರಾಳಿ ಗಂಡಸು ಕೈಯಲ್ಲಿ ಪೊರಕೆ ಹಿಡಿದಿದ್ದ! ಅವರಿಬ್ಬರೂ ಹಾಗೆಯೇ ಹೊಡೆದಾಡತೊಡಗಿದ್ದರು. ನೆರೆದವರ ಪೈಕಿ ಒಬ್ಬರಾದರೂ ಅವರ ಜಗಳ ಬಿಡಿಸಲೊಲ್ಲರು. ಪ್ರತಿಯೊಬ್ಬನೂ ಮೋಜು ನೋಡುವವನೆ. ಜನ ಜಾಸ್ತಿಯಾಗತೊಡಗಿದಂತೆ ಜಗಳಕ್ಕೆ ಮತ್ತಷ್ಟು ಕಾವೇರತೊಡಗಿತು.

ಆ ಹೆಂಗಸು ಸೌಟನ್ನು ಒಗೆದು ಎರಡು ಹೆಜ್ಜೆ ಹಿಂದಡಿಯಿಟ್ಟಳು. ಬಹುಶಃ ದೀರ್ಘಕಾಲದ ಹೋರಾಟದಿಂದ ಅವಳು ಬಳಲಿರಬೇಕು. ಅಂತೆಯೇ ಕದನ ವಿರಾಮ ಘೋಷಿಸಿದಳೆಂದು ಭಾವಿಸಿದೆ. ಅದು ಹಾಗಾಗಲಿಲ್ಲ. ಅವಳಿಗೆ ಸೌಟಿಗೆ ಬದಲಾಗಿ ಬೇರೆ ಅಸ್ತ್ರ ಬೇಕಾಗಿತ್ತು. ಶರವೇಗದಲ್ಲಿಯೇ ಹೊರಬಂದ ಆಕೆಯ ಕೈಯಲ್ಲಿ ಚಪ್ಪಲಿಯಿತ್ತು. ಇದನ್ನು ಕಂಡು ಎದುರಾಳಿ ಮತ್ತಷ್ಟು ಕುಪಿತನಾದ. ಅವನೂ ಅದೇ ಅಸ್ತ್ರದೊಂದಿಗೆ ಅವಳ ಜತೆ ಹೋರಾಡತೊಡಗಿದ. ಸ್ವಲ್ಪ ಹೊತ್ತು ಹೋರಾಟ ಹಾಗೆಯೇ ಮುಂದುವರೆಯಿತು. ಅನಂತರ ಅವಳಿಗೇಕೋ ಆ ಅಸ್ತ್ರಪ್ರಯೋಗ ಬೇಡವೆನಿಸಿತು. ಏಕಾಏಕಿ ನಿರಾಯುಧಳಾದಳು. ಮುಂದೇನು ಮಾಡುವಳೆಂದು ಎದುರಾಳಿ ಅವಳತ್ತ ಕೆಂಗಣ್ಣು ಬೀರಿದ. ಸಡಿಲಾದ ಮುಡಿಯನ್ನು ಬಿಗಿಯಾಗಿ ಕಟ್ಟಿಕೊಂಡು ಆತನಿಗೆ ಮಲ್ಲಯುದ್ಧಕ್ಕೆ ಆಹ್ವಾನವಿತ್ತಳು. ಆತ ಅದಕ್ಕೂ ಸಮ್ಮತಿಸಿದ. ಸೆಣಸಾಟ ಸಮಸಮವಾಗಿಯೇ ಸಾಗಿತು. ಒಂದು ಸಾರೆ ಅವಳು ಬಿದ್ದರೆ ಇನ್ನೊಂದು ಸಾರಿ ಆತ ಬೀಳುತ್ತಿದ್ದ. ಹಾಗೆಯೇ ಒಬ್ಬರಾದ ಮೇಲೆ ಒಬ್ಬರು ಬೀಳೋದು, ಏಳೋದು ನಡೆದೇ ಇತ್ತು.

ಅವರಿಬ್ಬರ ಮಧ್ಯ ಈ ಪರಿ ಮಾರಾಮಾರಿ ಜಗಳ ನಡೆಯುತ್ತಿದ್ದರೂ ಅಲ್ಲಿ ನೆರೆದಿದ್ದವರಲ್ಲಿ ಒಬ್ಬರಾದರೂ ಅದನ್ನು ಬಿಡಿಸಲಿಕ್ಕೆ ಮುಂದೆ ಬರಲಿಲ್ಲ. ಅಷ್ಟೇ ಅಲ್ಲ, ಅವರಾರ ಮುಖದಲ್ಲಿಯೂ

ಕಿಂಚಿತ್ತಾದ ಕಳವಳವಾಗಲಿ ಆತಂಕವಾಗಲಿ ಕಾಣಿಸಲಿಲ್ಲ. ಎಲ್ಲರಿಗೂ ಅದೊಂದು ರೀತಿಯ ಪುಕ್ಕಟೆ ಮನರಂಜನೆಯಾಗಿತ್ತು. ಅವರ ವರ್ತನೆಯಿಂದ ನನಗೆ ಅಚ್ಚರಿಯಾಯಿತು.

ನನ್ನಿಂದ ಇನ್ನು ತಡೆಯಲಾಗಲಿಲ್ಲ. "ರೀ, ನೀವು ಯಜಮಾನರಾಗಿ ಹುಡುಗರ ಥರ ನೋಡ್ತಾ ನಿಂತೀರಲ್ಲ; ಆ ಜಗಳಾನ ಬಿಡಿಸಲಿಕ್ಕೆ ಹೋಗ್ರೀ," ಎಂದು ಬೇಸರದ ದನಿಯಲ್ಲಿ ಅಂದೆ.

ಅದಕ್ಕೆ ಆ ಯಜಮಾನರು "ನಾವು ಬಿಡಿಸಲಿಕ್ಕೆ ಹೋದ್ರೆ, ಅವರಿಬ್ಬರೂ ಸೇರಿ ನಮಗೇ ತಿರುಗಿ ಬೀಳ್ತಾರೆ. ಅವರದು ತಿಂಗಳಲ್ಲಿ ಇಂಥಾ ಒಂದೋ ಎರಡೋ ಜಗಳ ಇದ್ದದ್ದೇ. ಅದೇನೇ ಇರ್ಲಿ, ಅದರಿಂದ ಅವರ ದಾಂಪತ್ಯದಲ್ಲಿ ಬಿರುಕು ಮಾತ್ರ ಇರೋದಿಲ್ಲ", ಎಂದರು.

ಆ ಜಗಳ ಕುರಿತು ಅವರು ಮಾಡಿದ ವಿಶ್ಲೇಷಣೆಗೆ ನಾನು ಅಚ್ಚರಿಗೊಂಡೆ. ಸಣ್ಣಪುಟ್ಟ ಹೊಡೆದಾಟಗಳಿಗೇ ವಿವಾಹ ವಿಚ್ಛೇದನವಾಗುವ ಕಾಲವಿದು. ಇಷ್ಟೆಲ್ಲಾ ರಂಪಾಟವಾಗಿಯೂ ಅವರು ಹೇಗೆತಾನೇ ಅನ್ಯೋನ್ಯವಾಗಿರಲು ಸಾಧ್ಯ? ಇಬ್ಬರೂ ಒಟ್ಟಿಗೆ ಬಾಳಲು ಅಸಾಧ್ಯವಾದಾಗ ಮಾತ್ರ ಗಂಡ-ಹೆಂಡಿರು ತಮ್ಮ ಜಗಳವನ್ನು ಬೀದಿಗೆ ತರ್ತಾರೆ. ಕೆಲ ಜನ ತಮ್ಮ ಭಿನ್ನಾಭಿಪ್ರಾಯವೇನೇ ಇರಲಿ, ಅದನ್ನು ಪರಸ್ಪರ ಚರ್ಚಿಸಿ. ಬಗೆಹರಿಸಿಕೊಳ್ಳುತ್ತಾರೆ. "ಆದರೆ ಈ ರೀತಿಯ ಹೊಡೆದಾಟ ಇವರ ದಾಂಪತ್ಯಕ್ಕೆ ಖಂಡಿತ ಮಾರಕ" ಎಂದು ನಾನು ಯಜಮಾನರಿಗೆ ಹೇಳಿದೆ.

ನನ್ನ ಮಾತಿಗೆ ಆ ಯಜಮಾನರು ಎಳ್ಳಷ್ಟೂ ವಿಚಲಿತರಾಗಲಿಲ್ಲ. ಬದಲು ನಗುನಗುತ್ತಲೇ, "ಅಲ್ಲಿ ನೋಡ್ರೀ, ಅವಳು ಬಿದ್ದು, ಕೈಗೆ ಕಲ್ಲು ಬಡಿದು ರಕ್ತ ಬಂದಿದೆ. ಮುಂದೇನಾಗುತ್ತದೆಂದು ನೀವೇ ನೋಡ್ರೀ..." ಅಂದರು.

ಅವರ ಮಾತು ಕೇಳಿ ಆ ಕಡೆ ದಿಟ್ಟಿಸಿದೆ. ಅವಳು ತನ್ನ ಕೈಯಿಂದ ಸುರಿಯುವ ರಕ್ತ ತಡೆಯಲು ಮುಂದಾದಳು. ಆಗವಳ ಮುಖದಲ್ಲಿನ ಸಿಟ್ಟು, ಅಸಹನೆಗಳು ಜರ್ರನೇ ಇಳಿದುಹೋಗಿದ್ದವು. ನಾಟಕದಲ್ಲಿ ಪರದೆಯನ್ನು ಎತ್ತಿದಾಕ್ಷಣ ಬೇರೊಂದು ದೃಶ್ಯ ಚಕ್ಕನೇ ಬರುವುದಿಲ್ಲವೇ? ಹಾಗೆಯೇ ಅಸಂಭವನೀಯವಾದ ದೃಶ್ಯವೊಂದನ್ನು ನಾನಲ್ಲಿ ಕಾಣತೊಡಗಿದೆ. ಅವಳ ಕೈಯಿಂದ ರಕ್ತ ಬಂದುದನ್ನು ಕಂಡಾಕ್ಷಣ ಆಕೆಯ ಗಂಡ ತಳಮಳಗೊಂಡು ಮನೆಯೊಳಗಡೆ ಓಡಿದ. ತಕ್ಷಣ ಅವಳಿಗೆ ಚಿಕಿತ್ಸೆ ನೀಡಲು ಅರಳೆ, ಟಿಂಕ್ಚರ್, ಅಯೋಡೀನಿನೊಂದಿಗೆ ಓಡಿಬಂದು ಅವಳ ಕೈ ಹಿಡಿದು ಚಿಕಿತ್ಸೆ ನೀಡತೊಡಗಿದ. ಅವಳಾಗ ಎಳ್ಳಷ್ಟೂ ನಿರಾಕರಿಸಲಿಲ್ಲ.

"ನೋಡು, ಜೋರಾಗಿ ನುಗಿಸ್ದೀ; ಹೀಗಾಯ್ತು", ಎಂದವಳ ಬಾಯಿಂದ ನಂಜಿಲ್ಲದ ಮಾತು ಬಂತು.

"ಹೂಂ, ತಪ್ಪಾಯ್ತು ಬಿಡು," ಎಂದಾತ ಸಂತೈಸುವ ಧಾಟಿಯಲ್ಲಿ ನುಡಿದ.

ಕೆಲನಿಮಿಷಗಳ ಹಿಂದೆ ಒಬ್ಬರಿಗೊಬ್ಬರು ಹಾವು-ಮುಂಗಸಿ ಥರ ಹೊಡೆದಾಡುತ್ತಿದ್ದವರು ಏಕ್‌ದಂ ಅದನ್ನೆಲ್ಲಾ ಮರೆತು 'ನನಗೆ ನೀನು, ನಿನಗೆ ನಾನಲ್ಲದೆ ಮತ್ತಾರು' ಎಂಬಂತೆ ಪುನಃ ಅನ್ಯೋನ್ಯತೆಯ ವರ್ತುಳದಲ್ಲಿ ಒಂದಾದರಲ್ಲ!

ಇನ್ನೊಂದು ವಿಚಿತ್ರವೇನೆಂದರೆ ಆ ದಂಪತಿ ತಮ್ಮ ಜಗಳದಲ್ಲಿ ಮಧ್ಯಪ್ರವೇಶಿಸಲು ಮೂರನೆಯ ವ್ಯಕ್ತಿಗೆ ಅವಕಾಶವನ್ನೇ ಕೊಡುವುದಿಲ್ಲವಂತೆ. ಇದೊಂದು ರೀತಿಯಾಗಿ ಒಳ್ಳೆಯದೇ. ಇಂಥ ಹೊಡೆದಾಟದ ಮಧ್ಯವೂ ತಮ್ಮ ಅನುಬಂಧದ ಎಳೆಯನ್ನು ಕಿತ್ತೆಸೆಯದ ಈ ದಂಪತಿ ನಿಜಕ್ಕೂ ಅಭಿನಂದನಾರ್ಹರು!

ಸಮಾನತೆಯ ಪ್ರಶ್ನೆ ಬಂದಾಗ ತಾನೇ ಹೆಚ್ಚೆಂಬ ಜಂಬ ಕೊಚ್ಚುವ ಗಂಡಸು, ಗಂಡ ಬೈದರೆ ಸಿಡಿಮಿಡಿಗೊಳ್ಳುವ ಹೆಂಡತಿ; ಹೆಂಡತಿ ಬೈದರೆ ತನ್ನ ಮಾನವೇ ಗಾಳಿ ಪಾಲಾಯಿತೆಂದು ಚೀರಾಡುವ ಗಂಡಸು - ಇಂಥ ದಂಪತಿಯಿಂದ ಪಾಠವನ್ನು ಕಲೀಬೇಕು.

ಹಾಂ! ಅದೆಲ್ಲಾ ಸಾಧ್ಯವಿಲ್ಲ. ಬಹುಶಃ ಈ ದಂಪತಿ ಹಳ್ಳಿಯ ಗಮಾರರಿರಬೇಕೆಂದು ನೀವೆಲ್ಲ ತರ್ಕಿಸಬಹುದು. ಆ ಗೃಹಿಣಿ ಓದು ಬರಹ ಬಲ್ಲವಳು. ಅವಳ ಗಂಡ ಸರ್ಕಾರಿ ಇಲಾಖೆಯೊಂದರಲ್ಲಿ ನೌಕರ.

ಈಗ ಏನಂತೀರಾ?

# ಬೆರಗು!

ಹೂಬಿಸಿ ನೆಲ, ಬೆಚ್ಚಗಿನ ಬಿಸಿಲು
ಎಲೆಗಳಿಂದಿಳಿವ ನಿಂತಮಳೆ ನೀರು
ಅವರು ತಮ್ಮದೇ ಲೋಕದಲ್ಲಿ
ದಿಕ್ಕೇ ದಾಡಿಯಾಗಿ ನಡೆಯುತ್ತಿದ್ದರೆ?

ಸುತ್ತಯಾರಿಲ್ಲ, ಅಕ್ಕಪಕ್ಕದಲ್ಲೇ
ಪಿಸುಮಾತು, ತುಟದಾಟದೆ
ಎದೆಎದೆಗೂ ಯಾನವಿರದ ಸಂವಹನ
ಎಷ್ಟೊತ್ತಿನಿಂದಲೂ ಅವರ್‍ಯಾಕೆ
ಹಾಗೆ ಕನಸುಗಳ ಬಾಚಿಕೊಳ್ಳುತ್ತಿದ್ದಾರೆ?

ಚಿಗುರು ಹುಲ್ಲು, ಕತ್ತರೆ
ಎಳಸು ಬೆರಳಂತೆ, ಚಿಗರೆ
ಕಣ್ಣುಗಳಂತೆ ನೀಲಿ ಹೊಳಪು
ಅವಳು ಕೆತ್ತಿದ ಚಿತ್ರ
ಇವನು ತುಂಬಿದ ಬಣ್ಣ
ಎಷ್ಟೊತ್ತಿನಿಂದಲೂ ಅವರ್‍ಯಾಕೆ
ಹಾಗೆ ಸುಮ್ಮನೆ ನಗುತ್ತಿದ್ದಾರೆ?

☆ ☆

ಮಾತಿಗೇಕೆ ಮತ್ತೆ ಮಾತು?
ನಗುವಿಗೇಕೆ ಬರಿದೆ ಕೊಂಕು?
ಹೊದಿಕೆ ಜಾಡಿಸಿದಂತೆ
ಕನಸುಗಳ ಕೊಡವಿಬಿಟ್ಟರೂ
ಪಸೆಇರದ ಕಣ್ಣು...
ಅವರೇಕೆ ಹಾಗೆ
ದಿಕ್ಕು ದಿಕ್ಕಿಗೆ ಮುಖಮಾಡಿದ್ದಾರೆ?

-ಸುಧಾ. ಶರ್ಮಾ, ಚವತ್ತಿ



# ಸರ್ಪ ತಂದ ಸೌಭಾಗ್ಯ

ತನ್ನ ಭವಿಷ್ಯಜ್ಜೀವನದ ಆಸೆಗಳನ್ನೆಲ್ಲಾ ಇದ್ದೊಬ್ಬ ಮಗನ ಮೇಲೆಯೇ ಇರಿಸಿಕೊಂಡಿರುವಾಗ ಆ ಮಗ ತುಸುವೂ ತಿಳುವಳಿಕೆಯಿಲ್ಲದ ಮೂಢನೆಂದಾದರೆ ತಾಯಿಗೆ ಅದೆಂಥ ಅಪಾರ ದುಃಖವಾಗಬೇಡ! ಮಗ ಎಂತಾದರೂ ಮುಂದಾಗಿ ಮುಪ್ಪಿನಲ್ಲಿ ತನ್ನನ್ನು ರಕ್ಷಿಸಲೆಂಬ ಆಸೆಯಿಂದ ರಾಜ್ಯ ಕಳೆದುಕೊಂಡು ಅನಾಥೆಯಾಗಿದ್ದ ಅಲಕಪುರಿಯ ಹಿಂದಿನ ರಾಣಿಯು ತನ್ನ ಮಗನಿಗೆ ವ್ಯಾಪಾರದಲ್ಲಿ ತೊಡಗಿಸಲು ಒಂದು ನೂರು ಮೊಹರುಗಳನ್ನಿತ್ತಾಗ ಅವನು ಅಷ್ಟೆಲ್ಲವನ್ನೂ ತೆತ್ತು ಒಂದು ಬೆಕ್ಕಿನ ಮರಿಯನ್ನು ಕೊಂಡು ತಂದುದನ್ನು ನೋಡಿ ಆಕೆಗೆ ಆಘಾತವೇ ಆಗಿತ್ತು. ಆ ಆಘಾತವನ್ನು ತಾಳಲಾರದೆ ಅವಳು ಮೂರ್ಛೆಗೊಂಡು ಬಿದ್ದುಬಿಟ್ಟಳು.

ಆದರೆ ನಡೆದುದೇನೆಂದು ಮೂರ್ಖ ರಾಜಕುಮಾರನಿಗೆ ಮಾತ್ರ ಅರ್ಥವೇ ಆಗಲಿಲ್ಲ. ತಾಯಿ ಎಚ್ಚರವಾಗುವವರೆಗೆ ಅವನು ತಾನು ತಂದ ಬೆಕ್ಕನ್ನು ಭದ್ರವಾಗಿ ಹಿಡಿದುಕೊಂಡು ಭಯಭಕ್ತಿಯಿಂದಂತೆ ಹಾಗೆಯೇ ನಿಂತುಬಿಟ್ಟಿದ್ದನು. ಕೆಲ ನಿಮಿಷಗಳಲ್ಲಿ ಅವಳಿಗೆ ಪ್ರಜ್ಞೆ ಮರಳಿ ಬಂದಾಗ ತನ್ನ ಮಗ ಮುಗ್ಧನಂತೆ ಹಾಗೆಯೇ ನಿಂತುದನ್ನು ಕಂಡು ಅವಳಿಗೆ ನಿಜವಾಗಿಯೂ ಮರುಕವೆನಿಸಿತು. ಆಗ ಅವನ ತಪ್ಪನ್ನೆಲ್ಲ ಮರೆತು ಬಿಡಲು ನಿರ್ಧರಿಸಿದಳು.

ಕೆಲದಿನಗಳನ್ನು ಹಾಗೆಯೇ ಕಳೆದ ನಂತರ ಅವಳಿಗೆ ತನ್ನ ಮಗನನ್ನು ತಿದ್ದಿ ಸರಿದಾರಿಗೆ ತರಬಹುದೆಂದೆನಿಸಿತು. ಆಗ ಅವಳು ಮತ್ತೆ ತನ್ನ ತವರಿಗೆ ಹೋಗಿ ತಂದೆ-ತಾಯಿಗಳಿಂದ ಮತ್ತೊಂದು ನೂರು ಮೊಹರುಗಳನ್ನು ಪಡೆದಳು.

ತಾಯಿ ಊರಲ್ಲಿಲ್ಲದಾಗ ರಾಜಕುಮಾರ ಭಿಕ್ಷೆಯಿಂದಲೇ ತನ್ನ ಹಾಗೂ ತನ್ನ ಬೆಕ್ಕಿನ ಉಪಜೀವನ ಸಾಗಿಸಬೇಕಾಯಿತು. ಜನರು ಅರ್ಧ ಕರುಣೆಯಿಂದ ಅರ್ಧ ನಗುವಿನಿಂದ ಅವನಿಗೆ ಅನ್ನ ಕೊಡುತ್ತಿದ್ದರು.

ಈ ಸಲ ತಾಯಿ ತಿರುಗಿ ಹಣದೊಂದಿಗೆ ಬಂದನಂತರ ತನ್ನ ಮಗನನ್ನು ಹತ್ತಿರ ಕರೆದು ಅದನ್ನೆಲ್ಲ ಅವನ ಕೈಯಲಿರಿಸಿದರು. ಅನಂತರ, "ಕಂದಾ ! ಹಿಂದಿನದನ್ನೆಲ್ಲ ಮರೆತು ಬಿಡು. ಆದರೆ ಈಗಲಾದರೂ ನೀನು ಜಾಣನಾಗಬೇಕು. ಇತರರು ನಿನ್ನನ್ನು ಮೋಸಗೊಳಿಸದಂತೆ ಜಾಗರೂಕನಾಗಿರಬೇಕು. ಈ ನೂರು ಚಿನ್ನದ ಮೊಹರುಗಳನ್ನು ತೆಗೆದುಕೊಂಡು ದೊಡ್ಡ ಪೇಟೆಗೆ ಹೋಗಿ ಮಾಲನ್ನು ಕೊಂಡುಕೊಂಡು ಬಾ. ಅದನ್ನೇ ಮತ್ತೆ ಮಾರಿ ನಾವು ಅದರಿಂದ ಬಂದ ಲಾಭದಲ್ಲಿ ಸುಖವಾಗಿ ಮರ್ಯಾದಸ್ಥರಾಗಿ ಬಾಳಬಹುದಾಗಿದೆ. ಇದು ನಿನಗೆ ದೊರೆತ ಎರಡನೆಯ ಅವಕಾಶ, ಮುಂದೆಂದೂ ನಿನಗೆ ದೊರೆಯಲಿಕ್ಕಿಲ್ಲ. ಈ ಸಲವೂ ನೀನು ಹುಚ್ಚನಂತೆ ವರ್ತಿಸಿ ಇದ್ದ ಹಣವನ್ನೆಲ್ಲ ಕಳೆದುಬಿಟ್ಟರೆ ನಮ್ಮ ಅವಸ್ಥೆಯೇ ಮುಗಿದಂತೆ. ತುಂಬ ಎಚ್ಚರಿಕೆಯಿಂದ ಕೆಲಸ ಮಾಡು" ಎಂದೆಚ್ಚರಿಸಿ, ಆಶೀರ್ವದಿಸಿ ಕಳಿಸಿದಳು.

ತಾನು ಈ ಮೊದಲು ಮಾಡಿದ 'ವ್ಯಾಪಾರ' ತನ್ನ ತಾಯಿಗೆ ಸರಿ ಬಂದಿಲ್ಲವೆಂದು ಮಾತ್ರ ರಾಜಕುಮಾರನಿಗೆ ತಿಳಿಯಿತು. ಆದರೆ ಒಳ್ಳೆಯ ವ್ಯಾಪಾರವೆಂದರೇನೆಂಬುದು ಅವನಿಗೆ ಅರ್ಥವೇ ಆಗಲಿಲ್ಲ. ಆದರೂ ಅವನು ಮತ್ತೆ ನೆರೆಯೂರಿನ ಪೇಟೆಗೆ ನಡೆದನು.

ರಾಜಕುಮಾರ ದಾರಿಯಲ್ಲಿ ನಡೆಯುತ್ತಿದ್ದಂತೆಯೇ ಹಾವಾಡಿಗನೊಬ್ಬ ತಲೆಯ ಮೇಲೆ ಹಾವಿನ ಬುಟ್ಟಿಯನ್ನಿರಿಸಿಕೊಂಡು ಎದುರಿಗೆ ಬಂದನು.

ಈ ಹಾವಾಡಿಗನು ತಂದ ಹಾವುಗಳಲ್ಲಿ ನಾಗ ಲೋಕದ ಅರಸ ವಾಸುಕಿಯ ಮಗನಾದ ನಾಗೇಂದ್ರನೂ ಇದ್ದನು. ಪಾತಾಳ ಲೋಕದಿಂದ ವಿಹಾರಕ್ಕೆಂದು ಅವನು ಭೂಲೋಕಕ್ಕೆ ಬಂದಿದ್ದಾಗ ಈ ಹಾವಾಡಿಗನ ಪುಂಗಿಯ ನಾದಕ್ಕೆ ಮರುಳಾಗಿ ಕೈಸೆರೆಯಾಗಿದ್ದನು. ಆದರೆ ಹಾವಾಡಿಗನಿಗೆ ಮಾತ್ರ ತಾನು ಸೆರೆ ಹಿಡಿದಿರುವುದು ಯಾರೆನ್ನುವುದರ ಕಲ್ಪನೆಯೇ ಇರಲಿಲ್ಲ.

ರಾಜಕುಮಾರನಿಗೆ ಈ ಬಿದಿರಿನ ಬುಟ್ಟಿ ತುಂಬ ಆಕರ್ಷಕವಾಗಿ ಕಂಡಿತು. ಅದರಲ್ಲೇನೋ ಅಮೂಲ್ಯವಾದ ವಸ್ತುವಿರಬೇಕೆಂದುಕೊಂಡು ಅವನು, "ಅಯ್ಯಾ! ನಿನ್ನ ತಲೆಯ ಮೇಲೆ ನೀನೊಯ್ಯುತ್ತಿರುವುದೇನನ್ನು? ಅದೇನಾದರೂ ಮಾರಾಟಕ್ಕಿದೆಯೆ?" ಎಂದು ವಿಚಾರಿಸಿದನು.

"ಇಲ್ಲ, ಇಲ್ಲ! ಈ ಬುಟ್ಟಿಯಲ್ಲಿ ನಾಗರ ಹಾವುಗಳಿವೆ. ಅವನ್ನೊಯ್ದು ನಾನು ಅರಸನೆದುರು ಪ್ರದರ್ಶಿಸಿದರೆ ನನಗೆ ಒಂದೊಂದು ಹಾವಿಗೂ ಐದೈದು ನೂರು ಮೊಹರು ಬಹುಮಾನ ಸಿಕ್ಕು



ವುದು!" ಎಂದು ಹಾವಾಡಿಗ ಚೇಷ್ಟೆಯಿಂದ ನಗುತ್ತ ಉತ್ತರಿಸಿದನು.

ರಾಜಕುಮಾರನಿಗೆ ಇದರಲ್ಲೇನೋ ಲಾಭದಾಯಕ ಅಂಶ ಕಂಡಂತಾಯಿತು. ಕೂಡಲೆ ಅವನು, "ಹಾಗಿದ್ದರೆ ನನಗೊಂದು ನಾಗರಹಾವನ್ನು ಕೊಟ್ಟು ಬಿಡು. ನನ್ನ ಹತ್ತಿರ ಒಂದು ನೂರು ಮೊಹರುಗಳಿವೆ" ಎಂದನು.

ಹಾವುಗಾರನಿಗೆ ಮಾತ್ರ ಏನು ಮಾಡುವುದೋ ತಿಳಿಯದಾಯಿತು. 'ಇಂದು ಮನೆಯನ್ನು ನಾನು ಶುಭಮುಹೂರ್ತದಲ್ಲಿಯೇ ಬಿಟ್ಟಂತೆ ಕಾಣುತ್ತದೆ! ಇಂಥ ಚಿನ್ನದಂಥ ಅವಕಾಶ ಕೈಜಾರಿ ಹೋಗಗೊಡಬಾರದು!' ಎಂದು ಮನದಲ್ಲಿಯೇ ಅಂದುಕೊಂಡು ಅವನು ಬಹಿರಂಗವಾಗಿ, "ಆದರೆ ರಾಯರೆ, ಐದು ನೂರು ಮೊಹರುಗಳಿಗೊಂದರಂತೆ ನಾನೇ ಕೊಂಡಿರುವಾಗ ಒಂದು ನೂರಕ್ಕೆಂತು ಕೊಡಲಿ?" ಎಂದು ಕೇಳಿದನು.

"ನನ್ನಲ್ಲಿರುವುದು ಒಂದು ನೂರು ಮಾತ್ರ. ನಿನ್ನ ಮನಸ್ಸಿದ್ದರೆ ಮಾತ್ರ ನಿನ್ನ ವಸ್ತುವನ್ನು ಕೊಡು, ಒತ್ತಾಯವಿಲ್ಲ."

ರಾಜಕುಮಾರನ ಉತ್ತರ ಕೇಳಿ ಅಂತರಂಗದಲ್ಲಿ ಆನಂದವಾಗಿದ್ದರೂ ಮೇಲೆ ಮೇಲೆ ಅಸಮಾಧಾನವನ್ನೇ ನಟಿಸುತ್ತ ಹಾವಾಡಿಗನು ತನ್ನ ಬುಟ್ಟಿಯೊಳಗಿನ ಒಂದು ಹಾವನ್ನು ಹೊರತೆಗೆದು ರಾಜಕುಮಾರನಿಗಿತ್ತು ಒಂದು ನೂರು ಮೊಹರುಗಳನ್ನು ಪಡೆದನು. ಆದರೆ ತಾನಿತ್ತ ಹಾವು ನಾಗೇಂದ್ರನೆಂದು ಮಾತ್ರ ಅವನಿಗೆ ತಿಳಿಯಲಿಲ್ಲ.

ಹಾವಾಡಿಗನು ಹೇಳಿದ ಬೆಲೆಯನ್ನು ಐದರಲ್ಲೊಂದು ಪಾಲು ಮಾತ್ರ ಕೊಟ್ಟು ತಾನು ನಾಗರಹಾವನ್ನು ಕೊಂಡುಕೊಂಡೆನಲ್ಲ ಎಂದು ರಾಜಕುಮಾರ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಂಡು ತಾಯಿಗೆ ತೋರಿಸುವುದಕ್ಕೆಂದು ಭರದಿಂದ ಮನೆಯೆಡೆಗೆ ನಡೆದನು. ಇನ್ನೂ ಹಾವಾಡಿಗನ ವರ್ಚಸ್ಸಿನಲ್ಲಿಯೇ ಇದ್ದ ಆ ಹಾವು ರಾಜಕುಮಾರನಿಗೆ ಸ್ವಲ್ಪವೂ ತೊಂದರೆ ಕೊಡಲಿಲ್ಲ.

ಒಮ್ಮೆ ಮಹಾರಾಣಿಯೆನಿಸಿದ್ದ ಅವನ ತಾಯಿ ಅತ್ಯಾತುರದಿಂದ ತನ್ನ ಪ್ರೀತಿಯ ಪುತ್ರನ ಬರವನ್ನು ನಿರೀಕ್ಷಿಸುತ್ತಿದ್ದಳು. ಆದರೆ ಅವನು ತುಸು ಸಮಯದಲ್ಲಿಯೇ ಮರಳಿದಾಗ ತನ್ನ ಕಣ್ಣುಗಳನ್ನೇ ನಂಬುವುದವಳಿಗಾಗಲಿಲ್ಲ. ತಾನು ಕೊಂಡುಕೊಂಡಿದ್ದ ವಸ್ತುವನ್ನು ಹೆಮ್ಮೆಯಿಂದ ರಾಜಕುಮಾರನು ತನ್ನ ಕೊರಳಿಗೆ ಸುತ್ತಿಕೊಂಡು ಬರುತ್ತಿದ್ದುದನ್ನವಳು ದೂರದಿಂದಲೇ ನೋಡಿದಳು. ಆದರೆ ಅವನು ಸನಿಹಕ್ಕೆ ಬಂದಾಗ ಭಯಂಕರ ಸರ್ಪವನ್ನು ಕಂಡ ವಳೇ ಅವಳು ಭೀತಿಯಿಂದ ಚೀರಿ ನೆಲಕ್ಕೆ ಬಿದ್ದಳು.

ಅವಳು ಮತ್ತೆ ಬಾಯ್ದೆರೆಯುವ ಮೊದಲೇ ರಾಜಕುಮಾರನು ಉತ್ಸಾಹದಿಂದ, "ಅಮ್ಮಾ ಇದನ್ನು ತೀರ ಅಲ್ಪ ಬೆಲೆಗೆ ಕೊಂಡಿದ್ದೇನೆ. ಅವನು ಇದಕ್ಕೆ ಐದುನೂರು ಮೊಹರು ಕೇಳಿದರೆ ನಾನು ಮಾತ್ರ ಒಂದೇ ನೂರು ಕೊಟ್ಟೆ!" ಎಂದು ಹೇಳಿದ.

ತಾಯಿಯು ಮೊದಲು ತನ್ನ ಮಗನಿಗೆ ಹಾವಿನಿಂದ ಯಾವ ಅಪಾಯವೂ ಇಲ್ಲವೆಂಬುದನ್ನು ಖಚಿತ ಪಡಿಸಿಕೊಂಡನಂತರ ತನ್ನ ದುರ್ದೈವವನ್ನೇ ಹಳಿದುಕೊಂಡಳು. ತನ್ನ ಮಗನಿಂದ ಏನನ್ನು ಅಪೇಕ್ಷಿಸುವುದೂ ವ್ಯರ್ಥವೆಂದು ಬಗೆದು ಸುಮ್ಮನಾದಳು.

ಕೆಲವು ದಿನಗಳು ಹಾಗೆಯೇ ಉರುಳಿದ ನಂತರ ಒಮ್ಮೆ ತಾಯಿಯು ಮಗನನ್ನು ಕರೆದು, "ಕಂದಾ, ನೀನು ಮಹಾ ಅರಸನೊಬ್ಬನ ಪುತ್ರನೆಂಬುದನ್ನು ಮರೆಯಬೇಡ. ಆದರೆ ದುರ್ದೈವದಿಂದಾಗಿ ನಿನ್ನ ಉಪಜೀವನಕ್ಕಾಗಿ ನಿನ್ನ ಪ್ರಜೆಗಳಾಗಬೇಕಿದ್ದವರನ್ನೇ ಭಿಕ್ಷೆ ಬೇಡುವ ಪ್ರಸಂಗ ನಿನಗೆ ಬಂದೊದಗಿದೆ.



ಆದರೆ ನಿನ್ನ ಜೀವನೋಪಾಯಕ್ಕೆ ಮರ್ಯಾದೆಯ ಮಾರ್ಗವನ್ನು ಕಂಡುಕೊಳ್ಳುವುದು ನಿನಗೆ ಅಸಾಧ್ಯವೆ? ನನಗಂತೂ ನಿನ್ನ ದೌರ್ಭಾಗ್ಯವನ್ನು ಹಳಿಯುವುದನ್ನೊಳಿದು ಬೇರೆ ಮಾರ್ಗವಿಲ್ಲವಾಗಿದೆ. ನೀನು ನಿನ್ನ ಜೀವನದಲ್ಲಿ ಬದುಕಿ ಬಾಳಬೇಕಾದರೆ ನಿನಗೆ ಒಳ್ಳೆಯ ಮಿತ್ರರ ಅವಶ್ಯಕತೆಯಿದೆ. ಆದರೆ ನೀನು ಈ ರೀತಿ ಮನೆಯಲ್ಲಿ ಸರ್ಪವನ್ನಿರಿಸಿಕೊಂಡರೆ ಯಾರೂ ನಿನ್ನ ಮಿತ್ರರಾಗಲೊಪ್ಪುವುದಿಲ್ಲ. ನನ್ನ ಕೇಳಿದರೆ ನೀನು ನಿನ್ನ ಹಾವನ್ನು ಎಲ್ಲಿಂದ ತಂದೆಯೋ ಅಲ್ಲಿಯೇ ಬಿಟ್ಟು ಬರುವುದು ಒಳಿತೆಂದೆನಿಸುತ್ತದೆ. ನನಗಾಗಿ ಅಷ್ಟನ್ನಾದರೂ ನೀನು ಮಾಡಲಾರೆಯಾ?" ಎಂದು ಕೇಳಿದಳು.

ತಾಯಿಯ ಮಾತನ್ನಾಲಿಸಿದ ರಾಜಕುಮಾರ ತಕ್ಷಣ ಅವಳಿಚ್ಛೆಯಂತೆ ನಡೆಯಲು ಒಪ್ಪಿದನು. ಅನಂತರ ಸರ್ಪವನ್ನಿರಿಸಿದ ಬುಟ್ಟಿಯನ್ನು ತಲೆಯ ಮೇಲೆ ಹೊತ್ತುಕೊಂಡು ಅರಣ್ಯಕ್ಕೆ ನಡೆದನು. ಆದರೆ ನಾಗಸರ್ಪವನ್ನು ಅರಣ್ಯದಲ್ಲಿ ಬಿಟ್ಟುಬರುವಾಗ ಮಾತ್ರ ರಾಜಕುಮಾರನ ಹೃದಯ ತುಂಬಿ ಬಂತು. ಕಣ್ಣು ನೀರೂರಿದವು.' ಅಂತೆಯೇ ಅವನು ಅದನ್ನು ಕುರಿತು, "ನಾಗಸರ್ಪವೇ! ಅನೇಕ ದಿನಗಳವರೆಗೆ ನಾವಿಬ್ಬರೂ ತೀರ ಹತ್ತಿರದ ಗೆಳೆಯರಾಗಿದ್ದೇವೆ. ನಿನ್ನನ್ನು ಈ ರೀತಿ ಬಿಟ್ಟು ಬಿಡುವುದೆಂದರೆ ನನಗಂತೂ ಹೇಗೋ ಅನಿಸುತ್ತದೆ. ಆದರೆ ನಿನ್ನನ್ನು ಮನೆಯಲ್ಲಿರಿಸಿಕೊಳ್ಳುವುದು ನನ್ನ ತಾಯಿಯ ಮನಸ್ಸಿಗೆ ಬಂದಿಲ್ಲ. ದಯಮಾಡಿ ನನ್ನನ್ನು ಕ್ಷಮಿಸಿ ನಿನ್ನ ದಾರಿಯನ್ನು ಕಂಡುಕೋ" ಎಂದು ಹೇಳಿ ಮನೆಯೆಡೆಗೆ ಹೊರಟನು.

ರಾಜಕುಮಾರನ ಈ ವರ್ತನೆಯಿಂದ ನಾಗೇಂದ್ರನ ಮನಸ್ಸು ಸಂಪೂರ್ಣ ಕರಗಿ ನೀರಾಯಿತು. ಅವನ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದೆಂದು ನಿರ್ಧರಿಸಿ ಅವನು ರಾಜಕುಮಾರನನ್ನು ಹೆಸರು ಹಿಡಿದು ಕರೆದನು. ಸರ್ಪವು ಮನುಷ್ಯ ಧ್ವನಿಯಿಂದ ಮಾತನಾಡುವುದನ್ನು ರಾಜಕುಮಾರನು ಎಂದೂ ಕೇಳಿರಲಿಲ್ಲ. ಅಂತೆಯೇ ಅವನಿಗೆ ತುಂಬಾ ಆಶ್ಚರ್ಯವಾಯಿತು. ಕುತೂಹಲಗೊಂಡು ಅವನು ಹೊರಳಿ ನಿಂತನು. ಸರ್ಪವು ಮತ್ತೆ ಮಾತಾಡಲಾರಂಭಿಸಿತು: "ಮಿತ್ರಾ, ನಿನ್ನಷ್ಟು ದಯಾಳುವಾದ ನಿಷ್ಠಾವಂತ ಮನುಷ್ಯನನ್ನು ನಾನೆಲ್ಲಿಯೂ ಕಂಡಿಲ್ಲ. ನೀನೀರೀತಿ ನನ್ನನ್ನು ಬಿಟ್ಟಿದ್ದು ನಿನ್ನ ತಾಯಿಯ ಆಜ್ಞೆಯನ್ನು ಪರಿಪಾಲಿಸಲಿಕ್ಕೆಂದು. ಆದರಿಂದ ನನಗೆ ತುಂಬ ಆನಂದವೇ ಆಗಿದೆ. ನಾನು ನಾಗರಾಜನಾದ ವಾಸುಕಿಯ ಮಗ ನಾಗೇಂದ್ರ. ನಾನು ಮನೆಬಿಟ್ಟು ಬಹುದಿನಗಳಾದ್ದರಿಂದ ನನ್ನ ತಂದೆ ಚಿಂತಾಕ್ರಾಂತನಾಗಿರಬಹುದು. ಸದ್ಯ ನಾನಲ್ಲಿಗೆ



ಹೋಗುತ್ತೇನೆ. ನನ್ನನ್ನು ಕಂಡು ಆತನಿಗೆ ಪರಮಾನಂದವಾಗುವುದು. ನಾನವನಿಗೆ ನಿನ್ನ ವಿಷಯವನ್ನೆಲ್ಲ ಹೇಳಿದ ನಂತರ ಅವನು ಇಲ್ಲಿಗೆ ಮುತ್ತುಗಳಿಂದ ಮಾಡಿದ ಪಲ್ಲಕ್ಕಿಯನ್ನು ಕಳಿಸುವನು. ನೀನು ಅದರಲ್ಲಿ ಕುಳಿತು ನಾಗಲೋಕಕ್ಕೆ ಬಾ. ಅಲ್ಲಿ ನನ್ನ ತಂದೆ ನಿನ್ನನ್ನು ತುಂಬ ಗೌರವಿಸಿ, ನಿನಗೇನು ಬೇಕೋ ಅದನ್ನು ಕೊಡಲು ಸಿದ್ಧನಾಗುವನು. ಆಗ ನೀನು ನನ್ನಲ್ಲಿ ಎಲ್ಲವೂ ಇದೆಯೆಂದು ಹೇಳಿ ಅವನ ಕೈ ಬೆರಳಿನಲ್ಲಿರುವ ಜೀವರತ್ನ ಉಂಗುರವನ್ನು ಕೊಟ್ಟರೆ ಸಾಕೆಂದು ಹೇಳು. ಅದನ್ನು ತೆಗೆದು ಕೊಂಡು ಮನೆಗೆ ಮರಳು. ಅದರಿಂದ ನಿನ್ನ ಮನಸ್ಸಿನಲ್ಲಿ ಏನು ಬರುವುದೋ ಅದೆಲ್ಲಾ ಸಿದ್ಧಿಸುವುದು. ಸರಿಯೆ? ನೀನು ತುಸು ಸಮಯ ಇಲ್ಲಿಯೇ ಕಾದಿರು" ಎಂದು ಹೇಳಿ ಸರ್ಪವು ಮರೆಯಾಯಿತು.

ರಾಜಕುಮಾರನು ದಾರಿಕಾಯುತ್ತಿದ್ದಂತೆಯೇ ಮುತ್ತಿನ ಪಲ್ಲಕ್ಕಿಯೊಂದನ್ನು ಸೇವಕರು ಹೊತ್ತುಕೊಂಡು ಬಂದರು. ಅವನು ಅದರಲ್ಲಿ ಕುಳಿತು ನಾಗಲೋಕವನ್ನು ತಲುಪಿದನು. ನಾಗರಾಜನಾದ ವಾಸುಕಿಗೆ ರಾಜಕುಮಾರನನ್ನು ಕಂಡು ತುಂಬ ಸಂತೋಷವಾಯಿತು. ಹಲವಾರು ದಿನಗಳವರೆಗೆ ಅವನನ್ನು ಅಲ್ಲಿರಿಸಿಕೊಂಡು ಸತ್ಕರಿಸಲಾಯಿತು.

ಕೊನೆಗೊಂದು ದಿನ ಮನೆಗೆ ಮರಳಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದಾಗ ವಾಸುಕಿಯು ತುಂಬ ಗೌರವಪೂರ್ವಕವಾಗಿ, "ಸ್ವಾಮಿ, ನನ್ನ ಮಗನನ್ನು ಭೂಲೋಕದಲ್ಲಿ ತಂದೆಯಂತೆಯೇ ನೀವು ಜೋಪಾನಮಾಡಿದ್ದೀರಿ, ನೀವಿಲ್ಲದಿದ್ದರೆ ಅವನ ಗತಿ ಏನಾಗುತ್ತಿತ್ತೋ ಯಾರು ಬಲ್ಲರು! ನೀವು ಬೇಡಿದ್ದನ್ನು ಕೊಡಲು ನಾನು ಸಿದ್ಧ. ನಿಮಗೇನು ಬೇಕೋ ದಯವಿಟ್ಟು ಕೇಳಿ" ಎಂದನು

ಅದಕ್ಕುತ್ತರವಾಗಿ ರಾಜಕುಮಾರನು, "ದೇವರ ದಯದಿಂದ ನನಗೆಲ್ಲವೂ ಇದೆ. ಏನಾದರೂ ಕೇಳದಿದ್ದರೆ ತಮಗೆ ಅಸಮಾಧಾನವಾಗುವುದೆಂದು ಕೇಳಲೇಬೇಕಾಗಿದೆ. ನಿಮ್ಮ ಬೆರಳಿನಲ್ಲಿರುವ ಜೀವರತ್ನ ಉಂಗುರವನ್ನು ನನಗೆ ಕೊಡಬಹುದು" ಎಂದು ವಿನಯದಿಂದ ನುಡಿದನು.

ವಾಸುಕಿಯು ತಕ್ಷಣ ಅದನ್ನು ತೆಗೆದು ರಾಜಕುಮಾರನ ಬೆರಳಿಗಿಟ್ಟು, "ನಾನು ಕೊಡಬಹುದಾದ ಬಹುಮಾನಗಳಲ್ಲಿಯೇ ಇದು ಅತಿ ಶ್ರೇಷ್ಠವಾದುದು. ದೈವೀಶಕ್ತಿಯುಳ್ಳ ಇದು ಕಾಮಧೇನುವೇ ಸರಿ. ನೀವು ಇಷ್ಟಪಟ್ಟದನ್ನೆಲ್ಲ ಇದು ಕೊಡುವುದು. ದೇವೇಂದ್ರನಲ್ಲಿ ಸಹ ಇದಿಲ್ಲ. ನಿಮಗೆ ನನ್ನ ಆಶೀರ್ವಾದವಿದೆ. ನೀವು ನಿಮ್ಮ ಲೋಕದಲ್ಲಿ ಮಹಾಪುರುಷರಾಗಲಿರುವಿರಿ. ಈ ಉಂಗುರವನ್ನು ಮಾತ್ರ ಜೋಪಾನವಾಗಿಟ್ಟುಕೊಳ್ಳಿ" ಎಂದು ಹೇಳಿದನು.

ಅನಂತರ ನಾಗರಾಜನ ಸೇವಕರು ರಾಜಕುಮಾರನನ್ನು ಭೂಲೋಕದ ಗಡಿಯವರೆಗೆ ತಂದು ಬಿಟ್ಟರು. ಆ ಮೇಲೆ ರಾಜಕುಮಾರ ನಡೆಯಲಾರಂಭಿಸಿದ. ಆಗ ಅವನಿಗೆ ತಕ್ಷಣ ಯೋಚನೆಯೊಂದು ಹೊಳೆಯಿತು. ಈ ಉಂಗುರದ ಶಕ್ತಿಯ ಪರೀಕ್ಷೆ ಮಾಡಿಬಿಡೋಣವೆಂದು ನಿರ್ಧರಿಸಿ ಅವನು ವಾಸುಕಿ ಹೇಳಿದಂತೆ ಶಿವನನ್ನು ಪ್ರಾರ್ಥಿಸಿ, "ಈ ಅರಣ್ಯವೆಲ್ಲ ಸುಟ್ಟು ಹೋಗಲಿ" ಎಂದು ಮನದಲ್ಲಿಯೇ ಅಂದುಕೊಂಡನು. ಮರುಕ್ಷಣವೇ ಅವನು ನಿಂತಿದ್ದ ಸ್ಥಳವನ್ನುಳಿದು ಇಡೀ ಅರಣ್ಯವೆಲ್ಲ ಸುಟ್ಟು ಬೂದಿಯಾಗಿಬಿಟ್ಟಿತು.

ಜೀವರತ್ನ ಉಂಗುರದ ಶಕ್ತಿಯ ಬಗ್ಗೆ ಅವನಿಗೆ ಮನದಟ್ಟಾಯಿತು. ಆಗ "ಈ ಸ್ಥಳದಲ್ಲಿಯೇ ಮಹಾ ರಾಜಧಾನಿಯೊಂದು ನಿರ್ಮಾಣವಾಗಲಿ" ಎಂದು ಇಚ್ಛಿಸಿದನು.

ಈ ವಿಚಾರ ಅವನ ಮನದಲ್ಲಿ ಸುಳಿಯುತ್ತಿರುವಂತೆಯೇ ಸುತ್ತಲೂ ಸಾವಿರಾರು ಮನೆಗಳು, ಅರಮನೆಗಳು ಎದ್ದವು. ಅಂಥ ಸುಂದರ ನಗರವನ್ನು ಅವನೆಂದೂ ಕಂಡಿರಲಿಲ್ಲ. ಅದಕ್ಕೆ ಅವನು 'ನಿಷಧ ಪುರಿ' ಎಂದು ನಾಮಕರಣ ಮಾಡಿದನು.

ನಂತರ, "ನನ್ನ ತಂದೆಯ ರಾಜಧಾನಿಯ ಎಲ್ಲ ಜನರೂ, ನನ್ನ ತಾಯಿ ಹಾಗೂ ಬೆಕ್ಕು ಇಲ್ಲಿ ಬಂದು ನೆಲೆಸಲಿ" ಎಂದು ಅವನು ಆಲೋಚಿಸುವಷ್ಟರಲ್ಲಿಯೇ ಅದೆಲ್ಲ ಸಿದ್ಧಿಸಿತು.

ಇದೆಲ್ಲವನ್ನು ಕಂಡು ಅವನ ತಾಯಿಗೆ ತುಂಬಾ ಆಶ್ಚರ್ಯವಾಯಿತು. ಅವಳು ಮಗನನ್ನು ಕರೆದು, "ಕಂದಾ, ಇದನ್ನೆಲ್ಲ ನೀನು ಅದೆಂತು ಸಾಧಿಸುತ್ತಿರುವೆ?" ಎಂದು ಕೇಳಿದಾಗ ಅವನು ತನ್ನ ಕತೆಯನ್ನೆಲ್ಲಾ ಸಾದ್ಯಂತವಾಗಿ ವಿವರಿಸಿದನು. ಅದನ್ನು ಕೇಳಿ ಅವಳು ತುಂಬ ಸಂತಸಪಟ್ಟಳು.

ಅವನು ನಿಷಧಪುರಿಯ ರಾಜನೆಂದು ರಾಜ್ಯಾಭಿ

ಷೇಕ ಮಾಡಿಸಿಕೊಂಡು ಧರ್ಮರಾಜನಂತೆ ರಾಜ್ಯ ಭಾರ ನಡೆಸಿದನಲ್ಲದೆ ಬಡತನದಲ್ಲಿ ತನಗೆ ತನ್ನ ತಾಯಿಗೆ ಸಹಾಯ ಮಾಡಿದವರನ್ನೆಲ್ಲ ಪುರಸ್ಕರಿಸಿ ಸನ್ಮಾನಿಸಿದನು.

ಹೀಗೆಯೇ ಇರುತ್ತಿರಲೊಂದು ದಿನ ಯುವಕನಾದ ಈ ನಿಷಧರಾಜ ತನ್ನ ಅರಮನೆಯ ಹೂದೋಟದಲ್ಲಿ ವಿರಮಿಸುತ್ತಿರಲು ತಂಗಾಳಿ ಬೀಸಲಾರಂಭಿಸಿತು. ಮುಗಿಲಿನಲ್ಲಿ ಚಂದ್ರ ವಿರಾಜಿಸುತ್ತಿದ್ದ. ವಸಂತ ಋತುವಿನ ಪ್ರಾರಂಭ ಕಾಲವದು. ಅವನ ಶರೀರವೆಲ್ಲ ಪುಲಕಿತವಾಯಿತು. ತನಗೊಬ್ಬ ಬಾಳಸಂಗಾತಿ ಬೇಕೆಂದು ಅವನಿಗನಿಸಲಾರಂಭಿಸಿತು.

ತನ್ನ ಜೀವರತ್ನ ಉಂಗುರದ ನೆರವಿನಿಂದ ಅವನು ಜಗತ್ತಿನಲ್ಲಿಯೇ ಸುಂದರ ಯುವತಿಯರನ್ನೆಲ್ಲ ಪರೀಕ್ಷಿಸಿ ಸ್ವರ್ಣಪುರಿಯ ರಾಜಕುಮಾರಿ ತನಗೆ ಅತ್ಯಂತ ಅನುರೂಪಳೆಂದು ನಿರ್ಧರಿಸಿದನು. ಆ ಕ್ಷಣಕ್ಕೆ ಅವಳು ತನ್ನಲ್ಲಿಗೆ ಬರಬೇಕೆಂದು ಅವನು ಇಚ್ಛಿಸುವುದೊಂದೇ ತಡ, ಆಕೆ ಮಲಗಿದ್ದ ಮಂಚವೇ ಮುಗಿಲಲ್ಲಿ ತೇಲುತ್ತಾ ಅವನೆದುರು ಬಂದು ಇಳಿಯಿತು.

ಈ ಸುರಸುಂದರಿಯನ್ನು ಕಂಡೊಡನೆಯೇ ಉನ್ಮಾದಿತನಾದ ನಿಷಧರಾಜ ಅವಳನ್ನು ತನ್ನ ತೋಳತೆಕ್ಕೆಯಲ್ಲಿ ಬಂಧಿಸಲು ಮುಂದಾದನು. ಆಗ ರಾಜಕುಮಾರಿಯು ಅವನನ್ನು ತಡೆದು, "ಮಹಾರಾಜ, ತುಸು ತಾಳ್ಮೆ ವಹಿಸಿ. ನಾನು ಅರಸನನ್ನೇ ಮದುವೆಯಾಗಲಿರುವಾಗ ತಮ್ಮನ್ನುಳಿದು ಇನ್ನಾರ ವಿಚಾರವೂ ನನ್ನ ತಲೆಯೊಳಗಿಲ್ಲ. ನಿಮ್ಮ ಇಚ್ಛೆಗೆ, ನಿಮ್ಮ ಶಕ್ತಿಗೆ ನಾನು ತಲೆಬಾಗುತ್ತೇನೆ. ಯೋಗ್ಯ ರೀತಿಯಿಂದ ನನ್ನನ್ನು ತಾವು ಮದುವೆಯಾಗುವುದು ಕಠಿಣವೇನಿಲ್ಲ. ಆದ್ದರಿಂದ ಸದ್ಯ ನನ್ನನ್ನು ಮನೆಗೆ ಮರಳಗೊಡಿ. ನಾಳೆ ನನ್ನನ್ನು ಕೇಳಲು ನಮ್ಮ ತಂದೆಯೊಡನೆ ನಿಮ್ಮ ರಾಯಭಾರಿಯನ್ನು ಕಳುಹಿಸಿ. ನಾನು ಅಷ್ಟರಲ್ಲಿಯೆ ನನ್ನ ತಂದೆ-ತಾಯಿಗಳ ಮನವೊಲಿಸಿರುತ್ತೇನೆ" ಎಂದು ಬೇಡಿಕೊಂಡಳು.

ತನ್ನ ದುಡುಕುತನಕ್ಕೆ ನಿಷಧರಾಜನಿಗೆ ಪಶ್ಚಾತ್ತಾಪವೆನಿಸಿ ಅವನು ಅವಳ ಸಲಹೆಗೊಪ್ಪಿದನು.

ಮರುದಿನ ನಿಷಧರಾಜ ಹಾಗೂ ಸ್ವರ್ಣಪುರಿಯ ರಾಜಕುಮಾರಿಯರು ಮೊದಲೇ ಯೋಚಿಸಿದ್ದಂತೆಯೇ ಎಲ್ಲವೂ ನಡೆದು ಅವರಿಬ್ಬರ ಮದುವೆ ನಿಶ್ಚಯವಾಯಿತು.

(ಮುಂದಿನ ಸಂಚಿಕೆ ನೋಡಿ)

## ಪದ ಅರ್ಥ!

'ಅಂಡೀನ್ರ್ಈ, ಬುರ್ನಾಸು, ರೈಸು' ಈ ಶಬ್ದಗಳು ಕುಂದಾಪುರ ಕನ್ನಡದಲ್ಲಿ ಬಹಳ ಬಳಕೆಗೊಳ್ಳುತ್ತದೆ. ಇವುಗಳ ಉಗಮದ ಮೂಲದ ಬಗ್ಗೆ ನನ್ನ ಅಭಿಪ್ರಾಯವಿಲ್ಲಿದೆ.

'ಅಂಡೀನ್ರ್ಈ' ಎಂದರೆ ಅಡಚಣೆ ಉಂಟು ಮಾಡುವ ವಸ್ತುಗಳು. ಉದಾಹರಣೆಗೆ, ನೀವು ಕುಳಿತುಕೊಳ್ಳುವ ಕುರ್ಚಿಯ ಮೇಲೆ ನಿಮ್ಮ ಮಗ ತನ್ನ ಸ್ಕೂಲ್ ಬ್ಯಾಗ್ ಎಸೆದಿದ್ದರೆ ಅದು ನಿಮಗೆ 'ಅಂಡಿನೀ'. ಆಗ ನೀವು "ಈ 'ಅಂಡೀನ್ರ್ಈ'ಯನ್ನು ಆಚೆ ಬಿಸಾಕುತ್ತೇನೆ!" ಎಂದು ಮಗನನ್ನು ಗದರಿಸುತ್ತೀರಿ. ಈ ಶಬ್ದ ಇಂಗ್ಲಿಷಿನ 'ಅಂಡರ್‌ನೀತ್' ಅಂದರೆ ತಳದಲ್ಲಿ ಎಂಬುದರಿಂದ ಬಂದಿರಬೇಕು. ತಳದಲ್ಲಿಯ ವಸ್ತುಗಳು ಕಾಲಿಗೆ ತೊಡರುವುದರಿಂದ ಈ ಶಬ್ದ ಕನ್ನಡಕ್ಕೆ ಬಂದಾಗ ಆ ಅರ್ಥ ಪಡೆದುಕೊಂಡಿದೆ.

ಹಾಗೆಯೇ 'ಬುರ್ನಾಸು' ಎಂದರೆ ದಡ್ಡ, ಅಪ್ರಯೋಜಕ ಎಂದು. ಈ ಶಬ್ದವೂ ಇಂಗ್ಲಿಷಿನ 'ಬಾರ್ನ್-ಆಸ್'(=ಹುಟ್ಟಿನಿಂದಲೇ ಕತ್ತೆ)ನ ಅಪಭ್ರಂಶನೇ ಆಗಿದೆ.

ಆದರೆ 'ರೈಸು' ಎಂದರೆ ಕೋರೈಸು, ಮಿಂಚು ಎಂಬುದು ಇಂಗ್ಲಿಷಿನ 'ರೈಸ್'ನಿಂದ ಬಂದದ್ದೇನಲ್ಲ. ಬದಲಿಗೆ ಶಬ್ದಗಳನ್ನು ಹ್ರಸ್ವಗೊಳಿಸುವ ಕುಂದಾಪುರ ಕನ್ನಡದ ಗುಣ 'ಕೋರೈಸು'ವನ್ನು 'ರೈಸು' ಆಗಿಸಿದೆ.

– ಕೆ. ಗಣೇಶ್

# ಈ ಕಲ್ಲುಗಳು ಮಾತು ಬಲ್ಲವು!

- ಜ್ಞಾನೇಂದ್ರಯ್ಯ

ಇನ್ನೊಮ್ಮೆ ನೀವು ಯಾರಿಗಾದರೂ ಎಂದಾದರೂ "ಕಲ್ಲುಬಂಡೆಯಂತಿದ್ದೀ" ಎಂದು ಜರೆಯುವ ಮುನ್ನ ಸ್ವಲ್ಪ ಯೋಚಿಸಿ. ಯಾಕೆಂದರೆ ನೀವು ತಿಳಿದ ಹಾಗೆ ಕಲ್ಲು ಎಂದರೆ ಸೊಲ್ಲು ಗೊತ್ತಿರದ ಜಡವಸ್ತು ಅಲ್ಲವೇ ಅಲ್ಲ. ಅದಕ್ಕೂ ಹೃದಯವಿದೆ, ಸಂವೇದನೆಯಿದೆ. ಅದೂ ಅಳಬಲ್ಲದು, ನಗಬಲ್ಲದು, ಹಾಡಬಲ್ಲುದು ಮತ್ತು ಮನಸ್ಸು ಬಂದತ್ತ ಹೊರಡಲೂಬಲ್ಲುದು.

ಅಚ್ಚರಿಯಾಯಿತೇನು?

ಕಲ್ಲುಬಂಡೆ, ಕಗ್ಗಲ್ಲು ಗುಡ್ಡ-ಬೆಟ್ಟ-ಪರ್ವತಗಳೆಂದರೆ ಏನೆಂದುಕೊಂಡಿದ್ದೀರಿ? ಅವು ಆದಿ ಕಾಲದಿಂದಲೂ ನಡೆಯುತ್ತ ಬಂದ ಎಲ್ಲ ವಿದ್ಯಮಾನಗಳಿಗೂ ಇರುವ ಚಿರಸಾಕ್ಷಿಗಳು. ಸಮಸ್ತ ಇತಿಹಾಸವನ್ನು ತಮ್ಮೊಳಗೆ ಅಡಗಿಸಿಟ್ಟುಕೊಂಡಿರುವ ಕಾಲಕೋಶಗಳು.

ಬೆಟ್ಟಗಳು ಅಳಬಲ್ಲವು, ನಗಬಲ್ಲವು, ಹಾಡಬಲ್ಲವು ಎಂದಷ್ಟೇ ಹೇಳಿದೆ. ಆದರೆ ಅವು ಬಣ್ಣವನ್ನೂ ಬದಲಿಸಬಲ್ಲವು ಎಂದರಂತೂ "ನೀವು ಹೇಳುವುದೆಲ್ಲ ಹಸಿ ಸುಳ್ಳು" ಎಂದು ಗೇಲಿ ಮಾಡೀರಿ. ಆದರೆ ಇಲ್ಲಿ ನಾನು ಹೇಳ ಹೊರಟಿರುವುದು ಅಪ್ಪಟ ಸತ್ಯ. ಜಗತ್ತಿನ ಅನೇಕ ಕಡೆ



ಕಲ್ಲುಬಂಡೆ, ಬೆಟ್ಟ ಪರ್ವತಗಳ ಕುರಿತಂತೆ ಬಹು ವಿಧವಾದ ರೋಚಕ ಕಥೆಗಳಿವೆ. ಈ ಪೈಕಿ ಈ ಸೃಷ್ಟಿ ವೈಚಿತ್ರ್ಯಕ್ಕೆ ಸಂಬಂಧಿಸಿದಂತೆ ಕೆಲವು ವೈಜ್ಞಾನಿಕ ತಥ್ಯಗಳೂ ಉಪಲಬ್ಧವಿವೆ ಆದರೆ ಕೆಲವು ಚಮತ್ಕಾರಗಳು ಮಾತ್ರ ಇಂದಿಗೂ ಒಗಟಿನಂತೆಯೇ ಉಳಿದುಕೊಂಡಿವೆ. ಅಷ್ಟೇ ಅಲ್ಲ, ವಿಜ್ಞಾನಕ್ಕೆ ಸವಾಲೆಸೆಯುತ್ತಲೇ ಇವೆ.

## ಅಳುವ ಬೆಟ್ಟಗಳು

ಹಿಂದಿನ ಸೋವಿಯಟ್ ಒಕ್ಕೂಟಕ್ಕೆ ಸೇರಿದ್ದ ಒಂದು ದೇಶದಲ್ಲಿ ಯಾಕುರಸ್ಕ್ ಎಂಬೊಂದು ಊರಿದೆ. ಇದನ್ನು "ಅಳುವ ಬೆಟ್ಟಗಳ ಊರು" ಎಂದೇ ಕರೆಯುವುದುಂಟು. ಲೆನಾ ನದಿಯ ಎಡದಂಡೆಯ ಮೇಲೆ ವಿಲಕ್ಷಣ ಬೆಟ್ಟಗಳ ಒಂದು ಸರಣಿಯಿದ್ದು ಇಲ್ಲಿಯ ಜನ "ಕಂಬಗಳು" ಎಂದೇ ಇದನ್ನು ಗುರುತಿಸುತ್ತಾರೆ. ನೀವು ಗಮನಿಸಿದರೆ ಈ ಪ್ರತಿ ಬೆಟ್ಟದ ಮುಖದಿಂದಲೂ ಕಣ್ಣೀರು ಸುರಿಯುವುದನ್ನು ಕಾಣಬಹುದು. ಬೇಸಿಗೆಯಲ್ಲಿ ಮಾತ್ರ ಕಣ್ಣೀರು ಕೂಡ ಬತ್ತಿ ಹೋಗುವಷ್ಟು ಉಷ್ಣತೆಯಿರುವುದರಿಂದ ಈ ಬೆಟ್ಟಗಳು ಒಳಗೊಳಗೇ ಅಳುತ್ತವೆ ವಿನಾ ಕಂಬನಿ ಸುರಿಸುವುದಿಲ್ಲ.

ವಿಜ್ಞಾನಿಗಳು ಈ 'ಕಲ್ಲು ಸುರಿಸುವ ಕಣ್ಣೀರಿನ ರಹಸ್ಯ'ವನ್ನು ಕಂಡು ಹಿಡಿದಿದ್ದಾರೆ: "ಬೆಟ್ಟಗಳ ಮೇಲೆ ಅಲ್ಲಲ್ಲಿ ಕೆಲವು ಚಿಕ್ಕಪುಟ್ಟ ಹೊಳೆಗಳು ಹರಿಯುತ್ತವೆ. ಹೇಳೀ ಕೇಳೀ ಬೆಟ್ಟಗಳು. ಹೀಗಾಗಿ ಕಲ್ಲು ಸಂದುಗಳೊಳಗೆ ಇವು ಧುಮಿಕ್ಕಲೇ ಬೇಕು. ಅತಿಶೀತ ಪ್ರದೇಶ ಇದಾಗಿರುವುದರಿಂದ ನೀರು ಹೆಪ್ಪುಗಟ್ಟಲು ಎಷ್ಟೊತ್ತು ಬೇಕು? ಹೀಗೆ ಹೆಪ್ಪುಗಟ್ಟಿದ ನೀರು ಆಗೀಗ ಭೂಮ್ಯಂತರ್ಗತ ವಿದ್ಯಮಾನಗಳಿಂದಾಗಿ ಪುಡಿಯಾಗಿ ನೀರಾಡುವುದುಂಟು. ಹೀಗೆ ನೀರಾಡುತ್ತ ಅದು ಬೆಟ್ಟಗಳ ಮುಖದಂತಿರುವಲ್ಲಿನ ರಂಧ್ರಗಳಿಂದ ಹೊರಕ್ಕೆ ಜಾರಿದಾಗ ಕಣ್ಣೀರ ಹನಿಯಂತೆ ಕಾಣುವುದುಂಟು." ವಿಜ್ಞಾನಿಗಳ ಈ ವಾದವನ್ನು ಒಪ್ಪಲೇಬೇಕು. ಆದರೂ ಕಲ್ಲುಗಳಿಗೆ ಹೃದಯ (ಕಲ್ಲು ಹೃದಯ?)ವಿಲ್ಲದೇ ಇಲ್ಲ.

## ಬಣ್ಣ ಬದಲಿಸುವ ಕಲ್ಲುಗುಡ್ಡ

ದಕ್ಷಿಣ ಆಫ್ರಿಕದಲ್ಲಿರುವ ಕಲ್ಲುಗುಡ್ಡವೊಂದು ಊಸರವಳ್ಳಿಯಂತೆ ಬಣ್ಣ ಬದಲಿಸುತ್ತಲೇ ಇರುತ್ತದೆ. ಹೌದು, ತಿಂಗಳಿಗೋ ಆರು ತಿಂಗಳಿಗೊ ಒಮ್ಮೆ ಅಲ್ಲ, ದಿನಂಪ್ರತಿ ಅದು ಬೇರೆ ಬೇರೆ 'ಬಣ್ಣ ತೊಟ್ಟು ನಿಲ್ಲುವುದುಂಟು. ಈ ದೇಶದ ಆ ಕಾಲದ ಪ್ರಧಾನಿ ಹೆನ್ರಿ ಆಯರ್ಸ್‌ರ ನೆನಪಿನಲ್ಲಿ ಇವಕ್ಕೆ "ಆಯರ್ಸ್ ರಾಕ್" ಎಂದೇ ಹೆಸರಿಟ್ಟಿದ್ದಾರೆ ಆಸ್ಟ್ರೇಲಿಗರು. ಅಂಡಾಕಾರದ ಈ ಕಲ್ಲುಗುಡ್ಡದ ಎತ್ತರ ೩೪೮ ಮೀಟರುಗಳು. ಇದರ ನಿಜವಾದ ಬಣ್ಣ ಹಾಗೆ ನೋಡಿದರೆ ಕೆಂಪೇ. ಸಂಜೆ-ಮುಂಜಾನೆಗಳಲ್ಲಿ ಸೂರ್ಯಾಸ್ತ-ಸೂರ್ಯೋದಯಗಳು ಈ ಗುಡ್ಡಕ್ಕೆ ಎರಚುವ ರಂಗಂತೂ ಇನ್ನೂ ಮನಮೋಹಕ. ಮುಂಜಾನೆ "ಇದಕ್ಕೇನು ಬೆಂಕಿ ಹತ್ತಿಕೊಂಡಿದೆಯೆ?" ಎಂದು ಗಾಬರಿಪಡುವಂಥ ಬಣ್ಣ. ಆ ಮೇಲೆ ಕ್ರಮೇಣ ಹಳದಿಯಾಗಿ, ಕಿತ್ತಳೆಯಾಗಿ, ಕೆಂಪಾಗಿ, ಜಾಂಬಳಿಯಾಗಿ ಮತ್ತೊಮ್ಮೆ ಬೂದು ಬಣ್ಣದ್ದಾಗಿ ತೋರುವುದುಂಟು.

ಇದಕ್ಕೇನು ಕಾರಣ?

"ಈ ಕಲ್ಲುಗುಡ್ಡದ ಸಂರಚನೆ ವಿಶೇಷ ಪ್ರಕಾರದ್ದು. ವಿಭಿನ್ನ ಕೋನಗಳಿಂದ ಇದರ ಮೇಲೆ ಬೀಳುವ ಸೂರ್ಯನ ಕಿರಣಗಳು ಋತುಮಾನಕ್ಕೆ ತಕ್ಕಂತೆ ಗುಡ್ಡದ ಬಣ್ಣ ಬದಲಿಸುವಂತೆ ಮಾಡುತ್ತವೆ. ನಮಗೆಲ್ಲ ಗೊತ್ತಿರುವಂತೆ ಬೆಳಗಿನ ಮತ್ತು ಸಂಜೆಯ ಸೂರ್ಯನ ಕಿರಣಗಳಲ್ಲಿ ಕೆಂಪು ಹಾಗೂ ಕಿತ್ತಳೆ ಬಣ್ಣದ ಆಧಿಕ್ಯವಿರುತ್ತದೆ. ಆಗ ಈ ಗುಡ್ಡ ಕಿತ್ತಳೆ ಮಿಶ್ರಿತ ಕೆಂಪು ಬಣ್ಣದ್ದಾಗಿ ತೋರುತ್ತದೆ. ಉಳಿದ ಬಣ್ಣಗಳು ವಾಯುಮಂಡಲದ ಕಣಗಳ ಮೂಲಕ ಪಸರಿಸಲ್ಪಡುತ್ತವೆ. ಹೀಗೆ ಪಸರಿಸಲ್ಪಟ್ಟ ಬಣ್ಣ ಯಾವುದೋ, ಅದಾಗಿಯೇ ಈ ಗುಡ್ಡ ಕಂಗೊಳಿಸತೊಡಗುತ್ತದೆ. ವಾಯು ಮಂಡಲದ ಕಣಗಳ ಪಸರಿಸುವಿಕೆಯೇ ಇದರ ಬಣ್ಣ ಬದಲಿಸುವಿಕೆಗೆ ಮುಖ್ಯ ಕಾರಣವೆನ್ನಬಹುದು," ಎನ್ನುತ್ತಾರೆ ವಿಜ್ಞಾನಿಗಳು.

ಮೊದಮೊದಲು ಈ ಗುಡ್ಡವನ್ನು ಸಮೀಪಿಸಿ ನೋಡುವುದು ದುಸ್ತರ ಕಾರ್ಯವೆನಿಸಿತ್ತು. ಸ್ಥಳೀಯ ನಿವಾಸಿಗಳು ಇದನ್ನು 'ಭಗವಂತನ ಮನೆ' ಎಂದೇ ಕರೆಯುತ್ತಿದ್ದರು. ಈಗ ಗುಡ್ಡದವರೆಗೂ ರಸ್ತೆ ಸಂಪರ್ಕ ಸೌಲಭ್ಯ ದೊರೆತಿರುವುದರಿಂದ ಜನ

ಸಲೀಸಾಗಿ ಹೋಗಿ ಬರಬಹುದು.

## ಚಲಿಸುವ ಪರ್ವತ!

ಕೆಲವು ಶಿಲೆಗಳ ವಿಷಯದಲ್ಲಿ ಜಡತ್ವದ ನಿಯಮ ತಲೆಕೆಳಗಾಗಿಬಿಡುತ್ತದೆ ಅರ್ಥಾತ್ ವಿಫಲವಾಗಿ ಬಿಡುತ್ತದೆ. ಹೀಗಾಗಿ ತಮ್ಮ ಸ್ಥಾನದಿಂದ ಚಲಿಸಿ ಬೇರೆಡೆ ಹೋಗಿ ಬಿದ್ದುಕೊಂಡ ಅನೇಕ ಪರ್ವತಗಳು ಹಾಗೂ ಕಲ್ಲುದಿನ್ನೆಗಳು ಜಗತ್ತಿನ ಬೇರೆ ಬೇರೆಡೆ ಕಾಣಸಿಗುತ್ತವೆ. ಸಂಯುಕ್ತ ರಾಷ್ಟ್ರ ಅಮೇರಿಕದ ಸಿಯೆರಾ ನೆವಾಡಾ ಪರ್ವತ ಶ್ರೇಣಿಗಳಲ್ಲಿದ್ದ ಕೆಲ ಪರ್ವತ ಶಿಖರಗಳು ಹಾಗೂ ಒಣಗಿ ಹೋದ ಕೊಳ್ಳಗಳ ತಳ ಸೇರಿರುವ ಕಲ್ಲುದಿನ್ನೆಗಳು ಹೀಗೆ ತಮ್ಮ ಜಾಗಬಿಟ್ಟು ಬೇರೆಡೆ ಚಲಿಸಿದಂಥವುಗಳು. ಇದು ಇಲ್ಲಿ ಇಂದಿಗೂ ಆಗೀಗ ನಡೆಯುತ್ತಲೇ ಇರುವ ಚೋದ್ಯ. ನಾನಾ ಆಕಾರ-ಪ್ರಕಾರದ ಈ ಕಲ್ಲುದಿನ್ನೆಗಳಲ್ಲಿ ಕೆಲವೊಂದರ ತೂಕ ಎಷ್ಟೋ ಕ್ವಿಂಟಾಲುಗಳವರೆಗಿರುತ್ತದೆ. ಇವು ಐದಾರು ವರ್ಷಗಳ ಅವಧಿಯಲ್ಲಿ ತಮ್ಮ ಸ್ಥಾನದಿಂದ ಜರಿದು ೨೦೦ ರಿಂದ ೩೦೦ ಮೀಟರುಗಳ ದೂರವನ್ನು ಕ್ರಮಿಸಿಬಿಡುತ್ತವೆ. ಅವು ತಮ್ಮ ಸ್ಥಾನದಿಂದ ಕಳಚಿಕೊಂಡಾದ ಮೇಲೆ ಅಲ್ಲಿ ಶಾಶ್ವತವಾದ ಕುಳಿ ಉಳಿದಿರುವುದನ್ನು ನೋಡಬಹುದು. ವಾಯುವೇಗ ಮತ್ತು ಪರ್ಜನ್ಯಭಾರದಿಂದಾಗಿ ಈ ಬಂಡೆಗಳು ಕಳಚಿಕೊಳ್ಳುತ್ತವೆ ಎಂದು ವಿಜ್ಞಾನಿಗಳು ಹೇಳುತ್ತಾರಾದರೂ ಜನ ಮಾತ್ರ "ಬೆಟ್ಟಕ್ಕೆ ಸಾವು ಬಂತು" ಎಂದೋ, "ಬೆಟ್ಟಕ್ಕೆ ಮುಕ್ತಿ ಸಿಕ್ಕಿತು" ಎಂದೋ ಹೇಳುವುದುಂಟು.

ಆಸ್ಟ್ರೇಲಿಯದಲ್ಲೂ ಒಂದು ನಡೆದಾಡುವ ಪರ್ವತವಿದೆ. 'ಗ್ರಾಸ್ ಮೀನ್' ಎಂದು ಇದು ವಿಖ್ಯಾತ. ಪ್ರವಾಸಿಗಳ ಆಕರ್ಷಣೆಯ ಕೇಂದ್ರವಾಗಿರುವ ಈ ಪರ್ವತ ನೆಲೆನಿಂತಿರುವುದು ಅದರ ತಳಕ್ಕೆ ೧೦೦ ಅಡಿ ಆಳದಲ್ಲಿರುವ ಉಪ್ಪಿನ ಬಂಡೆಯೊಂದರ ಮೇಲೆಂದು ಭೂಗರ್ಭ ಶಾಸ್ತ್ರಜ್ಞರು ಹೇಳುತ್ತಾರೆ. ಈ ಬಂಡೆಯ ಉಪ್ಪು ವಾತಾವರಣಕ್ಕೆ ಅನುಸಾರವಾಗಿ ಕರಗುವುದು, ಘನೀಭವಿಸುವುದೇ ಮೊದಲಾದ ಚಟುವಟಿಕೆಗಳನ್ನು ನಡೆಸಿದಾಗ ಪರ್ವತ ಅತ್ತಿತ್ತ ಚಲಿಸಲೇಬೇಕಾಗುತ್ತದೆ.

## ಹಾಡುವ ಶಿಲೆಗಳು

ನಮ್ಮ ದೇಶದಲ್ಲೆ ಮಧ್ಯ ಪ್ರದೇಶದ ಅಂಬಿಕಾಪುರದಿಂದ ಸುಮಾರು ೨೦ ಕಿಲೋಮೀಟರ್ ದೂರದಲ್ಲಿ ರಾಯಗಢ ರಸ್ತೆಯ ಸಮೀಪ ಒಂದು ವಿಶಾಲವಾದ ಮೈದಾನವಿದೆ. ಅಲ್ಲಿ ಸರಿಸುಮಾರು ನೂರು ವಿಶಾಲಕಾಯ ಶಿಲೆಗಳು ಒಂದರ ಮೇಲೆ ಇನ್ನೊಂದರಂತೆ ಕುಳಿತು ಅಲ್ಲಲ್ಲಿ ಪಸರಿಸಿಕೊಂಡಿವೆ. ಈ ಪೈಕಿ ಕೆಲವು ಶಿಲೆಗಳನ್ನು ತಟ್ಟಿದರೆ ಪಾತ್ರೆ ಬಡಿದಾಗ ಬರುವಂಥ ಶಬ್ದ ಹೊರಡುತ್ತದೆ. ಈ ನೂರರ ಪೈಕಿ ಎಂಟ್ಹತ್ತು ಬಂಡೆಗಳಿಂದ ಮಾತ್ರ ಹೀಗೆ ಶಬ್ದ ಹೊರಡುವುದು. "ಲೋಹ ಖನಿಜಗಳ ಆಧಿಕ್ಯ ಈ ಬಂಡೆಗಳಲ್ಲಿರುವುದರಿಂದ ಹೀಗೆ ಸದ್ದು ಹೊರಡುತ್ತದೆ" ಎಂಬುದು ವಿಜ್ಞಾನಿಗಳ ಅಭಿಪ್ರಾಯ.

ಇದೇ ರಾಜ್ಯದ ಸರಗುಜಾ ಪ್ರದೇಶದ ಭೈಯ್ಯಾನಾಥ್ ತಾಲ್ಲೂಕಿನಲ್ಲಿ ಜಮಡಿ ಎಂಬ ಗ್ರಾಮವಿದೆ. ಇದರ ಸಮೀಪ ಇರುವುದೇ 'ಡುಗಡುಗಿ ಪರ್ವತ.' ಇದರ ಒಂದು ಭಾಗದಲ್ಲಿರುವ ಎರಡು ವಿಶೇಷ ಶಿಲೆಗಳು ಪ್ರವಾಸಿ ಆಕರ್ಷಣೆ ಎನಿಸಿವೆ. ಸುಮಾರು ಎಂಟು ಅಡಿ ಎತ್ತರದ ಒನಕೆಯಂಥ ಒಂದು ಶಿಲೆ ಇನ್ನೊಂದು ಲಂಬಶಿಲೆಯನ್ನು ಆಧರಿಸಿದೆ. ಈ ಒನಕೆಯಂಥ ಶಿಲೆಯ ಮೇಲೆ ಯಾರೇ ಏರಿ ನಿಂತರೂ ಕೂಡಲೇ ಒರಳಿನಲ್ಲಿ ಒನಕೆಯು ಕುಟ್ಟಿದ ಹಾಗೆ ಸದ್ದು ಹೊರಟು ಪ್ರತಿಧ್ವನಿಸತೊಡಗುತ್ತದೆ.

ಹಿಂದೆಲ್ಲ ಸುಮಾರು ೨೫-೩೦ ಜನ ಈ ಶಿಲೆಯನ್ನೇರಿ ಕುಟ್ಟಿದ ಸದ್ದು ಹೊರಡಿಸುತ್ತಿದ್ದರಂತೆ. ಆಗೆಲ್ಲ ಬಹು ದೂರದವರೆಗೂ ಆ ಸದ್ದು ಪ್ರತಿಧ್ವನಿಸುತ್ತಿತ್ತಂತೆ. ಆಪತ್ಸಮಯದಲ್ಲಿ ಈ ಶಿಲೆಯನ್ನು ನಗಾರಿಯಂತೆ ಇಲ್ಲಿಯ ಜನ ಬಳಸಿಕೊಳ್ಳುತ್ತಿದ್ದರೆಂದೂ ಹೇಳಲಾಗುತ್ತದೆ. ಕಾಲದ ಅವಕೃಪೆಯಿಂದಾಗಿ, ಉದ್ದವಾಗಿದ್ದ ಕಲ್ಲೀಗ ಅರ್ಧಾಕಾರಕ್ಕೆ ತಲಪಿದೆ. ಆದರೂ ಅದರ ಕುಟ್ಟುವ ಸದ್ದು ಮಾತ್ರ ಅಡಗಿಲ್ಲವೆಂಬುದೇ ಸಮಾಧಾನದ ಸಂಗತಿ.

ಇಷ್ಟೆಲ್ಲ ಹೇಳಿದ ಮೇಲೆ ನಮ್ಮ ಹಂಪೆಯ 'ಸಪ್ತಸ್ವರ ಶಿಲಾಸ್ತಂಭ'ಗಳು ನಿಮ್ಮ ನೆನಪಿಗೆ ಬಾರದೇ ಇರುವುದಿಲ್ಲ.... ಅಲ್ಲವೆ?

●

ಪುಸ್ತಕ ವಿಭಾಗ

# 'ನಿಗೂಢ ವಿಶ್ವ'ದ ವೃತ್ತಾಂತ

- ಅರುಣ ನಾರಾಯಣ

('ದಿ ಮಿಸ್ಟರೀಸ್ ಆಫ್ ಅನ್ನೋನ್,' 'ಬ್ರಿಟಾನಿಕಾ ವಿಶ್ವಕೋಶ,' 'ದಿ ವರ್ಲ್ಡ್ ಎನ್‌ಸೈಕ್ಲೋಪೀಡಿಯಾ' ಗಳಿಂದ ಸಂಗ್ರಹಿಸಿದ ಮಾಹಿತಿ ಆಧಾರಿತ)

# 'ನೆತ್ತರು ದೆವ್ವ'ಗಳ ವೃತ್ತಾಂತ

೧೭೨೫ರಲ್ಲಿ ನಡೆದ ಘಟನೆ ಇದು.

ಸರ್ಬಿಯಾದ ರೈತ ಪೀಟರ್ ಪ್ಲೊಗೋಜೋವಿಟ್ಜ್ ಅಲ್ಪಕಾಲದ ಕಾಯಿಲೆಯಿಂದ ಮರಣಹೊಂದಿದ. ಅವನ ಶವನನ್ನು ರೆಸಿಲೋವಾ ಗ್ರಾಮದಲ್ಲಿ ದಫನು ಮಾಡಲಾಯಿತು. ಪೀಟರ್ ಪ್ಲೊಗೋಜೋವಿಟ್ಜ್ ಸತ್ತು ಎರಡು ತಿಂಗಳ ಬಳಿಕ, ರೆಸಿಲೋವಾ ಗ್ರಾಮದಲ್ಲಿ ಮುದುಕರೂ ಯುವಕರೂ ಮಕ್ಕಳೂ ಸೇರಿದಂತೆ ಒಂಭತ್ತು ಮಂದಿ ಹಠಾತ್ತನೆ ಸತ್ತುಹೋದರು. ಇವರೆಲ್ಲ ಸತ್ತದ್ದು ಒಂದೇ ವಾರದ ಅವಧಿಯಲ್ಲಿ! ಅವರೆಲ್ಲ ಕೊನೆಯುಸಿರೆಳೆಯುವಾಗ ಒಂದೇ ರೀತಿಯ ಹೇಳಿಕೆಯನ್ನು ನೀಡಿದರಂತೆ: "ರಾತ್ರಿ ನಿದ್ರಿಸುತ್ತಿದ್ದಾಗ ಪ್ಲೊಗೋಜೋವಿಟ್ಜ್‌ನ ಪ್ರೇತ ನನ್ನ ಶಯ್ಯಾಗೃಹದಲ್ಲಿ ಕಾಣಿಸಿಕೊಂಡು ಕತ್ತನ್ನು ಕಚ್ಚಿ ರಕ್ತ ಹೀರುತ್ತಿತ್ತು. ಪ್ಲೊಗೋಜೋವಿಟ್ಜ್ ಸಮಾಧಿಯಲ್ಲಿ ಚಿರಶಾಂತಿ ಪಡೆಯುವ ಬದಲು ನೆತ್ತರು ದೆವ್ವವಾಗಿ ಜನರನ್ನು ಸತಾಯಿಸುತ್ತಿದ್ದಾನೆ" ಎಂದು.

ಏತನ್ಮಧ್ಯೆ ಪೀಟರ್ ಪ್ಲೊಗೋಜೋವಿಟ್ಜ್‌ನ ಹೆಂಡತಿ "ರಾತ್ರಿ ನಿದ್ರೆಯಲ್ಲಿದ್ದಾಗ ಗಂಡ ಕಾಣಿಸಿಕೊಂಡು ತನ್ನ ಬೂಟುಗಳನ್ನು ಕೇಳುತ್ತಿದ್ದಾನೆ" ಎಂದು ಹೇಳಿ ಭಯಭೀತ ಗ್ರಾಮಸ್ಥರನ್ನು ಇನ್ನಷ್ಟು ಗೊಂದಲದಲ್ಲಿ ಕೆಡವಿದಳು.

ಈ ನಿಗೂಢ ಸಾವುಗಳು ಸಂಭವಿಸುತ್ತಿದ್ದಾಗ ಸರ್ಬಿಯಾದ ರೆಸಿಲೋವಾ ಗ್ರಾಮ ಆಸ್ಟ್ರಿಯಾದ ಚಕ್ರವರ್ತಿಗಳ ಆಳ್ವಿಕೆಯ ವ್ಯಾಪ್ತಿಗೆ ಸೇರಿದ್ದಿತು. ಆಡಳಿತ ಕಾರ್ಯಭಾರ

ನಿರಾತಂಕವಾಗಿ ನಡೆಯುವ ಉದ್ದೇಶದಿಂದ ಚಕ್ರವರ್ತಿ ಕೆಲವು ಉನ್ನತ ಅಧಿಕಾರಿಗಳನ್ನು ರೆಸಿಲೋವಾಕ್ಕೆ ಕಳುಹಿಸಿದ್ದ. ರೆಸಿಲೋವಾದ ಕೆಲವು ಗ್ರಾಮಸ್ಥರು ಈ ಅಧಿಕಾರಿಗಳನ್ನು ಭೇಟಿಯಾಗಿ ಪ್ಲೊಗೋಜೋವಿಟ್ಸ್‌ನ ಗೋರಿಯನ್ನು ಅಗೆದು ಆತ ನೆತ್ತರು ದೆವ್ವವಾಗಿ ಪರಿವರ್ತನೆ ಹೊಂದಿದ್ದಾನೆಯೇ ಎಂಬುದಾಗಿ ಪರಿಶೀಲಿಸಿ ನೋಡಲು ತಮಗೆ ಅವಕಾಶ ನೀಡಬೇಕೆಂದು ಕೇಳಿಕೊಂಡರು. ಗೋರಿಯನ್ನು ಅಗೆಯಲು ಅಧಿಕಾರಿಗಳು ಆಸ್ಪದ ನೀಡಲಿಲ್ಲ. ಗ್ರಾಮಸ್ಥರು ಹಿಡಿದ ಪಟ್ಟು ಬಿಡಲಿಲ್ಲ. "ಪ್ಲೊಗೋಜೊವಿಟ್ಸ್‌ನ ಗೋರಿಯನ್ನು ಅಗೆದು ನೋಡಲು ಅವಕಾಶ ನೀಡದಿದ್ದರೆ ಆ ದುಷ್ಟಶಕ್ತಿಯಿಂದ ಪಾರಾಗಲು ನಾವೆಲ್ಲ ಸಾರಾಸಗಟಾಗಿ ಗ್ರಾಮವನ್ನು ತ್ಯಜಿಸುತ್ತೇವೆ" ಎಂದು ಗ್ರಾಮಸ್ಥರೆಲ್ಲ ಒಕ್ಕೊರಲಿನಿಂದ ಮನವಿ ಮಾಡಿಕೊಂಡರು. ಕೊನೆಗೆ ಗ್ರಾಟಿಸ್ಕ್ ಜಿಲ್ಲೆಯ ಉಸ್ತುವಾರಿ ಅಧಿಕಾರಿ ಜಿಲ್ಲೆಯ ಧರ್ಮಗುರುವಿನ ನೇತೃತ್ವದಲ್ಲಿ ಪ್ಲೊಗೋಜೋವಿಟ್ಸ್‌ನ ಸಮಾಧಿಯನ್ನು ಪರಿಶೀಲಿಸಲು ಅನುಮತಿ ನೀಡಿದ.

ಗೋರಿಯನ್ನು ತೆರೆದು ನೋಡಿದಾಗ ಪ್ಲೊಗೋಜೋವಿಟ್ಸ್‌ನ ಶವ ಎರಡು ದಿನಗಳ ಹಿಂದಷ್ಟೇ ದಫನು ಮಾಡಿದೆಯೋ ಎನ್ನುವ ಹಾಗೆ ತೋರುತ್ತಿತ್ತು. ಆತನ ನರೆತ ತಲೆಕೂದಲುಗಳು, ಬಿಳಿಗಡ್ಡಗಳ ಬದಲು ಹೊಸ ತಲೆಗೂದಲು, ಗಡ್ಡ ಬೆಳೆದಿತ್ತು! ಮೈಯ ಚರ್ಮ ಅಲ್ಲಲ್ಲಿ ಬಿಳುಪಾಗಿತ್ತು. ಹೊಸ ಚರ್ಮ ಬೆಳೆಯುವ ಲಕ್ಷಣಗಳು ವ್ಯಕ್ತವಾಗಿದ್ದವು. ಶವದ ಬಾಯಿಯಲ್ಲಿ ಹಸಿ ನೆತ್ತರು ಒಸರುತ್ತಿತ್ತು. ರೈತರು ಊಹಿಸಿದ್ದು ಸರಿಯಾಗೇ ಇತ್ತು. ಅವರ ಭೀತಿ ನಿಜವಾಗಿತ್ತು. ಪ್ಲೊಗೋಜೋವಿಟ್ಸ್ ರಕ್ತದಾಹದಿಂದ ಚಡಪಡಿಸುವ ನೆತ್ತರು ದೆವ್ವ ಅಥವಾ ವಾಂಪೈರ್ ಆಗಿ ಪರಿವರ್ತನೆ ಹೊಂದಿದ್ದ.

ರಕ್ತಪಿಶಾಚಿಗಳನ್ನು ಸಂಹರಿಸುವ ಸಾಂಪ್ರದಾಯಿಕ ವಿಧಾನವನ್ನು ರೆಸಿಲೋವಾ ಗ್ರಾಮಸ್ಥರು ಬಳಸಿದರು. ಚೂಪಾದ ಮೊನೆಯ ದಪ್ಪ ಕಟ್ಟಿಗೆಯನ್ನು ಪ್ಲೊಗೋಜೋವಿಟ್ಸ್‌ನ ಶವದ ಎದೆಯೊಳಕ್ಕೆ ಇರಿದರು. ಇದ್ದಕ್ಕಿದ್ದಂತೆಯೇ ಶವದ ಬಾಯಿ, ಕಿವಿ, ಮೂಗುಗಳಿಂದ ಹೊಸ ರಕ್ತ ಚಿಮ್ಮಿತು. ಅನಂತರ ಗ್ರಾಮಸ್ಥರು ಪ್ಲೊಗೋಜೋವಿಟ್ಸ್‌ನ ಶವವನ್ನು ಸುಟ್ಟು ಹಾಕಿದರು.

ಪ್ಲೊಗೋಜೋವಿಟ್ಸ್ ಬದುಕಿದ್ದ ಕಾಲದಲ್ಲಿ ಪೂರ್ವ ಯುರೋಪಿನ ದೇಶಗಳಲ್ಲಿ ನೆತ್ತರು ದೆವ್ವಗಳ ಹಾವಳಿ ಪ್ರಕರಣಗಳು ಪ್ಲೇಗ್ ವ್ಯಾಧಿಯಂತೆ ವ್ಯಾಪಕವಾಗಿ ಸಂಭವಿಸುತ್ತಿದ್ದವು. ಸತ್ತವರು ಸಚೇತನಸ್ವರೂಪರಾಗಿ ಬದುಕಿದ್ದವರ ಮೇಲೆ ದಾಳಿ ಮಾಡಿ ಅವರ ರಕ್ತ ಕುಡಿದು ಮತ್ತೆ ಗೋರಿಯಲ್ಲಿ ನಿಶ್ಚಿಂತೆಯಿಂದ ಮಲಗಿಬಿಡುತ್ತಿದ್ದರು, ರಾತ್ರಿಯ ವೇಳೆ ಮತ್ತೆ ಜಾಗೃತರಾಗಿ ಈ ಪ್ರಕ್ರಿಯೆಯನ್ನು ಮುಂದುವರಿಸುತ್ತಿದ್ದರು ಎಂಬ ನಂಬಿಕೆ ಪೂರ್ವ ಯುರೋಪಿನ ದೇಶಗಳಲ್ಲಿ ೧೭-೧೮ನೇ ಶತಮಾನದಲ್ಲಿ ವ್ಯಾಪಕವಾಗಿ ಹರಡಿತ್ತು.

ಎದೆನಡುಗಿಸುವಂಥ ಈ ವೃತ್ತಾಂತಗಳು ತೀರಾ ಈಚೆಗೆ ಅಂದರೆ ೨೦ನೇ ಶತಮಾನದಲ್ಲಿಯೂ ಕೇಳಿಬಂದಿವೆ.

೧೯೧೨ರಲ್ಲಿ ಹಂಗೆರಿಯಲ್ಲಿಯೂ ಇಂಥ ಒಂದು ಘಟನೆ ನಡೆಯಿತು. ಅಲ್ಲಿಯ ರೈತನೊಬ್ಬನ ೧೮ ವಯಸ್ಸಿನ ಮಗ ತೀರಿಕೊಂಡಿದ್ದ. ಆತ ರಕ್ತಪಿಶಾಚಿಯಾಗಿ ಪರಿವರ್ತನೆ ಹೊಂದಿರಬೇಕು ಎಂಬ ಶಂಕೆ ರೈತನಿಗುಂಟಾಯಿತು. ಭಯಭೀತನಾದ ರೈತ ತನ್ನ ಮಿತ್ರರ ನೆರವಿನೊಂದಿಗೆ ಮಗನ ಗೋರಿಯನ್ನು ಅಗೆದು ಶವದ ಬಾಯಿಗೆ ಬೆಳ್ಳುಳ್ಳಿಯ ಹಲವು

ಹೋಳುಗಳು ಹಾಗೂ ಮೂರು ಕಲ್ಲುಗಳನ್ನು ಗಿಡಿದು ತುಂಬಿಸಿ ಎದೆಯ ನಡುಭಾಗಕ್ಕೆ ಮೊನೆಯಾದ ಮರದ ತುಂಡಿನಿಂದ ಇರಿದುಹಾಕಿದ. ಸತ್ತ ಮಗ ರಾತ್ರಿ ವೇಳೆ ಗೋರಿಯಿಂದ ಹೊರಬಂದು ನಿಶಾಚರನಾಗಿ ಅಲೆಯುತ್ತಾ ಸಮೀಪದ ಸಂಬಂಧಿಕರ ರಕ್ತ ಕುಡಿಯುತ್ತ ಹಾವಳಿ ಎಬ್ಬಿಸುವುದನ್ನು ತಡೆಗಟ್ಟಲು ತಾನು ಹೀಗೆ ಮಾಡಬೇಕಾಯಿತು ಎಂದು ಅನಂತರ ಆ ರೈತ ತನ್ನ ವಿಚಾರಣೆ ನಡೆಸಿದ ಪೊಲೀಸರೆದುರು ಹೇಳಿದನಂತೆ.

ವ್ಯಕ್ತಿ ಸತ್ತ ಬಳಿಕ ಅವನ ಆತ್ಮ ದೀರ್ಘಕಾಲದವರೆಗೆ ಮುಕ್ತಿಗಾಗಿ ಹಂಬಲಿಸುತ್ತಾ ಅಲೆದಾಡುತ್ತಿರುತ್ತದೆ. ಮೃತ ಶರೀರವನ್ನು ಚೈತನ್ಯಶಾಲಿಯಾಗಿಸುವ ಸಾಮರ್ಥ್ಯ ಅದಕ್ಕಿರುತ್ತದೆ ಎಂದು ಜನ ಪ್ರಾಚೀನ ಕಾಲದಿಂದಲೂ ನಂಬಿದ್ದರು. ಆದುದರಿಂದಲೇ ಪ್ರಾಚೀನ ನಾಗರಿಕತೆಗಳ ಕಾಲದಲ್ಲಿ ಸತ್ತವರನ್ನು ದಫನು ಮಾಡುವ ಸಂದರ್ಭದಲ್ಲಿ ಏನೆಲ್ಲಾ ಎಚ್ಚರಿಕೆ ವಹಿಸಲಾಗುತ್ತಿತ್ತು. ಮೃತ ಶರೀರಗಳು ಜೀವಂತವಾಗಿ ಗೋರಿಯಿಂದ ಎದ್ದು ಹೊರಬಂದು, ಬದುಕಿರುವವರಿಗೆ ಕಿರುಕುಳ ನೀಡಬಾರದು ಎಂಬ ಉದ್ದೇಶದಿಂದ ಗೋರಿಯಲ್ಲಿ ಅವನ ಪ್ರೀತಿಪಾತ್ರ ವಸ್ತುಗಳನ್ನು ಆಹಾರ-ಪಾನೀಯಗಳನ್ನು ಅಷ್ಟೇ ಏಕೆ ಅವನು ಜೀವಂತವಿದ್ದಾಗ ಲೈಂಗಿಕ ಸುಖ ನೀಡುತ್ತಿದ್ದ ಆತನ ಸೂಳೆಯರನ್ನೂ ಶವದೊಂದಿಗೆ ಜೀವಂತ ದಫನು ಮಾಡುತ್ತಿದ್ದರಂತೆ.

## ಪ್ರಾಚೀನ ಉಲ್ಲೇಖಗಳು

ವಾಂಪೈರ್ ಅಥವಾ ನೆತ್ತರುದೆವ್ವಗಳ ಕುರಿತು ನಮಗೆ ಸಿಕ್ಕುವ ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಬೆಬಿಲೋನಿಯಾ ನಾಗರಿಕತೆಯ ಕಾಲದ್ದು. 'ಎಡಿಮ್ಮು'ಎಂಬ ಮೃತಾತ್ಮ ಮುಕ್ತಿ ಲಭಿಸದೆ ಭೂಮಂಡಲದಲ್ಲೆಲ್ಲಾ ಅಡ್ಡಾಡುತ್ತಾ ತನ್ನ ಬಲಿಯನ್ನು ಅರಸುತ್ತಾ ಅವರ ಕುತ್ತಿಗೆಯನ್ನು ಚೂಪಾದ ಹಲ್ಲುಗಳಿಂದ ಕಚ್ಚಿ ರಕ್ತ ಹೀರುತ್ತಿದ್ದಿತಂತೆ. ಬೆಬಿಲೋನಿಯಾದ ಜನ 'ಲಿಲಿಟು'ಎಂಬ ಹೆಸರಿನ ಭೂತವನ್ನು ಎದುರು ಹಾಕಿಕೊಳ್ಳುತ್ತಿರಲಿಲ್ಲವಂತೆ. ಪ್ರಾಚೀನ ಹಿಬ್ರೂಗಳು ಈ ಭೂತವನ್ನು 'ಲಿಲಿತ್' ಎಂದು ಕರೆಯುತ್ತಿದ್ದರು. ಲಿಲಿತ್ ಆದಮನ ಮೊದಲ ಪತ್ನಿಯಾಗಿದ್ದಳು. ಆಕೆ ಪತಿಗೆ ವಿಧೇಯಳಾಗಿರದಿದ್ದ ಕಾರಣ ಏಡನ್ ತೋಟದಿಂದ ಗಡೀಪಾರು ಮಾಡಲ್ಪಟ್ಟಳಂತೆ. ಆಕೆ ರಕ್ತ ಕುಡಿಯುವ ಪಿಶಾಚಿಯಾಗಿ ಪರಿವರ್ತಿತಳಾಗಿ ಎಳೆಯ ಮಕ್ಕಳ ರಕ್ತ ಕುಡಿಯತೊಡಗಿದಳು. ಮಾನವರಿಗೆ ರಾತ್ರಿ ಕಾಣಿಸಿಕೊಳ್ಳುವ ಲೈಂಗಿಕ ಸ್ವಪ್ನಗಳಿಗೂ 'ಲಿಲಿತ್' ಕಾರಣವೆಂದು ಹಿಬ್ರೂ ಜನ ನಂಬಿದ್ದರು.

ಪ್ರಾಚೀನ ಚೀನಾದ ಜನತೆ 'ಕ್ವಿಯಾಂಗ್-ಶೀ' ಎಂಬ ಪ್ರೇತವನ್ನು ನಂಬಿದ್ದರು. ಈ ಪ್ರೇತ ಶವದ ಒಡಲಲ್ಲಿ ನೆಲೆಸಿ ಜೀವಂತ ವ್ಯಕ್ತಿಗಳ ರಕ್ತ ತಂದು ಸೇರಿಸಿ ಶವ ಕೊಳೆತು ಕೆಟ್ಟು ಹೋಗದಂತೆ ರಕ್ಷಿಸುತ್ತಿತ್ತು. ಬೆಂಕಿ ಉಗುಳುವ ಕಣ್ಣುಗಳು, ಚೂಪಾದ ಉಗುರುಗಳುಳ್ಳ ಕೈಬೆರಳುಗಳು, ಬಿಳಿ ಮತ್ತು ಹಸುರು ಕೂದಲುಗಳಿಂದ ಆವೃತವಾದ ಮೈಚರ್ಮದಿಂದ ಕೂಡಿದ ಕ್ವಿಯಾಂಗ್-ಶೀಯ ಭಯಾನಕ ರೂಪ ಪ್ರಾಚೀನ ಚೀನಾದ ಶಿಲ್ಪಗಳಲ್ಲಿ, ಚಿತ್ರಗಳಲ್ಲಿ ಮೈದೋರಿದೆ. ಶವವನ್ನು ಇರಿಸಿದ ಕೊಠಡಿಯೊಳಗೆ ಬೆಕ್ಕುಗಳು ಪ್ರವೇಶಿಸದಂತೆ ಚೀನೀಯರು ಜಾಗ್ರತೆ ವಹಿಸುತ್ತಿದ್ದರು. ಒಂದು ವೇಳೆ ಬೆಕ್ಕು ಶವದ ಮೇಲೆ ನೆಗೆದರೆ, ಅದರ ಸ್ವಭಾವದಲ್ಲಿ ಅಂತರ್ಗತವಾಗಿರುವ ಹುಲಿಯ ಪ್ರವೃತ್ತಿಯನ್ನು ಶವಕ್ಕೆ ವರ್ಗಾಯಿಸಬಹುದು; ಅನಂತರ ಶವ ರಕ್ತಪಿಪಾಸುವಾಗಿ ಪರಿಣಮಿಸುವ ಸಾಧ್ಯತೆಗಳೂ ಇಲ್ಲದಿಲ್ಲ ಎಂದು ಚೀನೀಯರು ನಂಬಿದ್ದರು.

ಪ್ರಾಚೀನ ಗ್ರೀಕ್ ಪುರಾಣಗಳಲ್ಲಿ ಎರಡು ಬಗೆಯ ವಾಂಪೈರ್‌ಗಳ ವರ್ಣನೆ ಇದೆ. ಅವುಗಳಲ್ಲಿ ಒಂದು 'ಎಂಪೈಸಾ'. ಅದು ಮಾನವ ಶರೀರವನ್ನು ಸುಲಭದಲ್ಲಿ ಪ್ರವೇಶಿಸಿ ಅಪಾರ ಹಾನಿ ಉಂಟುಮಾಡಬಲ್ಲ ಸಾಮರ್ಥ್ಯ ಹೊಂದಿರುತ್ತದೆ ಎಂದು ಪ್ರತೀತಿ ಇತ್ತು.



'ನೆತ್ತರು ದೆವ್ವ'ವಾಗದಿರಲೆಂದು ಶವವನ್ನು ಕತ್ತರಿಸಿ ಹೂಳುತ್ತಿರುವುದು. ಮೊನೆಯುಳ್ಳ ಕಟ್ಟಿಗೆಗಳಿಗೆ ಚುಚ್ಚಲ್ಪಟ್ಟಂಥವು ಕಾಡುವ 'ನೆತ್ತರು ದೆವ್ವ'ಗಳಾದ ಶವಗಳು. (ಮೇಲಿನದು)

ಇನ್ನೊಂದು 'ಲಾಮಿಯಾ' ಎಂಬ ರಕ್ತಪಿಶಾಚಿನಿ. ಸುಂದರ ಯುವತಿಯ ರೂಪದಲ್ಲಿರುವ 'ಲಾಮಿಯಾ' ಯುವಕರನ್ನು ತನ್ನ ಚೆಲುವಿನ ಬಲೆಗೆ ಕೆಡವಿಕೊಂಡು ಅವರನ್ನು ಆಲಂಗಿಸಿ ರಕ್ತಹೀರಿ ಕೊಲ್ಲುತ್ತಿತ್ತು ಎಂದು ಹೇಳಲಾಗಿತ್ತು.

### ತನಿಖಾ ಆಯೋಗ

ಹಂಗೆರಿ ಸಮೀಪ ಬೊಹೇಮಿಯದ ಗ್ರಾಮವೊಂದರಲ್ಲಿ ರಕ್ತ ಪಿಶಾಚಿಗಳ ಕುರಿತ ವಿಲಕ್ಷಣ ವಿದ್ಯಮಾನಗಳ ಬಗ್ಗೆ, ನಿಗೂಢ ಸಾವುಗಳ ಬಗ್ಗೆ ತನಿಖೆ ನಡೆಸಲು ಸರ್ಕಾರ ಆಯೋಗವೊಂದನ್ನು ರಚಿಸಿತ್ತು. ಆಯೋಗದ ಸದಸ್ಯರು ಸ್ಮಶಾನಗಳಿಗೆ ಭೇಟಿ ನೀಡಿ ತೀರಾ ಈಚೆಗೆ ದಫನು ಮಾಡಿದ ಗೋರಿಗಳನ್ನು ಅಗೆದು ಪರಿಶೀಲಿಸುತ್ತಿದ್ದರು. ೧೭೩೨ರಲ್ಲಿ ಆಯೋಗವು ಸವಿವರವಾದ ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಿತು. "ಕೆಲವೇ ತಿಂಗಳುಗಳ ಹಿಂದೆ ಸತ್ತು ಮಣ್ಣು ಸೇರಿದ ಮಹಿಳೆಯರು, ಮಕ್ಕಳ ಶವಗಳು ಚೆನ್ನಾಗಿ ಕೊಬ್ಬಿ ಆರೋಗ್ಯವಂತ ಕಳೆಯಿಂದ ಕೂಡಿವೆ. ಶವದ ತುಟಿಗಳಲ್ಲಿ ಹೊಸ ಕೆಂಪುರಕ್ತ ಮೆತ್ತಿಕೊಂಡಿದೆ. ಹೆಚ್ಚು ಕಡಿಮೆ ಇದೇ ಕಾಲದಲ್ಲಿ ಸತ್ತ ಇತರರ ಶವಗಳು ಕೊಳೆತು ಮಣ್ಣಿನಲ್ಲಿ ಬೆರೆತುಹೋಗಿದ್ದುವು" ಎಂದು ಆಯೋಗದ ವರದಿ ಸೂಚಿಸಿತು. ಅನುಮಾನಾಸ್ಪದವೆನಿಸಿದ ಎಲ್ಲ ಶವಗಳ ಎದೆಗೆ ಚೂಪಾದ ಮರದ ದಂಡದಿಂದ ಇರಿದು, ಅಂಗಾಂಗಗಳನ್ನು ಕತ್ತರಿಸಿ ತುಂಡುತುಂಡು ಮಾಡಿ ಸುಟ್ಟುಹಾಕಿದರು. ಅಲ್ಲಿಗೆ ಬೊಹೇಮಿಯದ ಈ ಗ್ರಾಮದಲ್ಲಿ ರಕ್ತಪಿಶಾಚಿಗಳ ಹಾವಳಿ ನಿಂತಿತು.

ಹದಿನೆಂಟನೇ ಶತಮಾನದಲ್ಲಿ ಪೂರ್ವ ಹಾಗೂ ಮಧ್ಯ ಯುರೋಪ್‌ನಲ್ಲಿ ನೆತ್ತರು ದೆವ್ವಗಳ ಹಾವಳಿಗೆ ಸಂಬಂಧಿಸಿದಂತೆ ಫ್ರೆಂಚ್ ಪಾದ್ರಿ ಡೋಮ್ ಅಗಸ್ಟಿನ್ ಕಾಲ್ಮೆಟ್ ಬಹಳ ಪರಿಶ್ರಮಪಟ್ಟು ಸ್ವಾರಸ್ಯಕರ ಮಾಹಿತಿಗಳನ್ನು ಸಂಗ್ರಹಿಸಿ ಒಂದು ಕೃತಿಯನ್ನು ರಚಿಸಿದ. ಈ ಪುಸ್ತಕ ಹಂಗೆರಿ, ಬೊಹೇಮಿಯಾ, ಮೊರಾವಿಯಾ, ಸೈಲೇಸಿಯಾದಲ್ಲಿ ವಾಂಪೈರ್‌ಗಳ ಹಾವಳಿ ಕುರಿತು ಅಧ್ಯಯನಶೀಲ ಮಾಹಿತಿಗಳನ್ನು ಒಳಗೊಂಡಿದೆ.

ಡೋಮ್ ಅಗಸ್ಟಿನ್ ಕಾಲ್ಮೆಟ್ ರಕ್ತಪಿಶಾಚಿಗಳ ಕುರಿತು ಅಧ್ಯಯನ ನಡೆಸಿ ಪಾಂಡಿತ್ಯಪೂರ್ಣ ಕೃತಿಗಳನ್ನು ಬರೆದು ಒಂದು ಶತಮಾನ ಕಳೆದ ಬಳಿಕ ಫ್ರೆಂಚ್ ವ್ಯಕ್ತಿ ಅಡೊಲ್ಫ್ ಡೆ ಅಸ್ಸೀಯರ್ ಒಂದು ಹೊಸ ಅಂಶವನ್ನು ಪತ್ತೆಹಚ್ಚಿದ. ನಾವು ಜೀವಂತವಿದ್ದಾಗ ಒಂದು ವಿಶಿಷ್ಟ ಬಗೆಯ ದ್ರವ ಶಾರೀರಿಕ ಚಟುವಟಿಕೆಗಳನ್ನು ನಿರ್ವಹಿಸಲು ನೆರವಾಗುತ್ತದೆ; ವಾಂಪೈರ್‌ಗಳ ದೇಹದಲ್ಲಿಯೂ ಇದೇ ದ್ರವ ಜೀವಂತ ಶರೀರದ ಕರ್ತವ್ಯಗಳನ್ನು ನಿರ್ವಹಿಸುತ್ತದೆ ಎಂದು ಆತ ಅಭಿಪ್ರಾಯಪಟ್ಟ.

ಸುಪ್ರಸಿದ್ಧ 'ಅರೇಬಿಯನ್ ನೈಟ್ಸ್'(ಸಾವಿರದೊಂದು ರಾತ್ರಿಗಳು) ಕಥಾಸಾಗರದಲ್ಲಿ ಹೆಣ್ಣು ಪ್ರೇತವೊಂದರ ಕಥೆ ನಿರೂಪಿತವಾಗಿದೆ. ಕ್ರಿಸ್ತಶಕ ಪ್ರಥಮ ಶತಾಬ್ದದಲ್ಲಿ ಪ್ರಕಟವಾದ ಈ ಕಥಾಸಂಕಲನ ಇಂದಿಗೂ ನಿತ್ಯನೂತನವೆನಿಸಿ ತನ್ನ ಸ್ವಾರಸ್ಯ ಉಳಿಸಿಕೊಂಡು ಬಂದಿದೆ. 'ಅರೇಬಿಯನ್ ನೈಟ್ಸ್'ನಲ್ಲಿ ನಿರೂಪಿತವಾಗಿರುವ ಹೆಣ್ಣು ಪ್ರೇತ ಸ್ಮಶಾನಗಳಲ್ಲಿ ಅಲೆದಾಡುತ್ತಾ ಗೋರಿಯಲ್ಲಿ ನಿಶ್ಚಿಂತವಾಗಿ ಮಲಗಿರುವ ಶವಗಳ ಶರೀರವನ್ನು ಬಗೆದು ಮಾಂಸ, ಮಜ್ಜೆಗಳನ್ನು ತಿನ್ನುತ್ತಿದ್ದಿತಂತೆ.

ಯುರೋಪ್‌ನಲ್ಲಿ ಕ್ರೈಸ್ತಧರ್ಮದ ಆವಿರ್ಭಾವದ ಬಳಿಕ ರಕ್ತಪಿಶಾಚಿಗಳ ಪರಿಕಲ್ಪನೆಯ ಬಗ್ಗೆ ಜನರ ಮೂಢನಂಬಿಕೆಗಳು ಇನ್ನಷ್ಟು ಬಲಗೊಂಡವು. ಕ್ರಿಸ್ತನ ಪುನರುತ್ಥಾನದ ಬಗ್ಗೆ

ಕ್ರೈಸ್ತರಲ್ಲಿ ದೃಢವಾದ ನಂಬಿಕೆ ಇದೆ. ಶಿಲುಬೆ ಏರಿ ಹುತಾತ್ಮನಾದ ಏಸುಸ್ವಾಮಿಯ ದೇಹ ಮತ್ತು ರಕ್ತ ಪವಿತ್ರತಮ ಎಂಬ ಪೂಜ್ಯ ಭಾವನೆ ಕ್ರಿಸ್ತಾನರಲ್ಲಿದೆ. ಯುರೋಪ್‌ನಾದ್ಯಂತ ಕ್ರೈಸ್ತಧರ್ಮ ವ್ಯಾಪಿಸಲು ಆರಂಭಿಸಿದ ತರುವಾಯ ವಾಂಪೈರ್‌ಗಳ ರಕ್ತದಾಹದ ಕಥೆಗಳು ಆಗಿಂದಾಗ್ಗೆ ಕೇಳಬರತೊಡಗಿದವು. ೧೬-೧೭ನೇ ಶತಮಾನದಲ್ಲಿ ಆಗ್ನೇಯ ಯುರೋಪಿನಲ್ಲಿ ಇದ್ದಕ್ಕಿದ್ದಂತೆ ಪ್ಲೇಗ್ ವ್ಯಾಧಿ ಹರಡುತ್ತಿತ್ತು. ಹಲವು ನಗರಗಳು ಈ ಪ್ಲೇಗ್ ಹಾವಳಿಯಿಂದ ತತ್ತರಿಸುತ್ತಿದ್ದುವು. ರಕ್ತಪಿಶಾಚಿಗಳೇ ಈ ರೀತಿ ದಿಢೀರ್ ಪ್ಲೇಗ್ ಹರಡಲು ಕಾರಣವೆಂದು ಅಂದು ಜನ ನಂಬಿದ್ದರು. ಪ್ಲೇಗ್‌ನಿಂದ ಸತ್ತ ಜನರನ್ನು ತಕ್ಷಣವೇ ಅವರ ಕುಟುಂಬದವರು ದಫನು ಮಾಡಿಬಿಡುತ್ತಿದ್ದರು. ಪ್ಲೇಗ್ ವ್ಯಾಧಿಪೀಡಿತ ಕೆಲಮಂದಿ ಕೋಮಾ ಸ್ಥಿತಿಯಲ್ಲಿದ್ದಾಗ ಅವರು ಸತ್ತರೆಂದೇ ಭಾವಿಸಿ ಅವರನ್ನು ದಫನು ಮಾಡುತ್ತಿದ್ದರು. ಅಂಥ ನಿರ್ಭಾಗ್ಯರು ಶವಪೆಟ್ಟಿಗೆಯಿಂದ ಹೊರಬರಲು ಚಡಪಡಿಸುತ್ತಿದ್ದರು. ಟ್ರಾನ್ಸಿಲ್ವೇನಿಯಾದ ಮುಗ್ಧ ಅಜ್ಞಾನಿ ರೈತರು ಅವರನ್ನೇ ರಕ್ತಪಿಶಾಚಿಗಳೆಂದು ಪರಿಗಣಿಸಿ ಗೋರಿಯನ್ನು ಅಗೆದು ಶವಪೆಟ್ಟಿಗೆಯ ಮುಚ್ಚಳ ತೆರೆದು ಅವರ ಎದೆಯ ಮಧ್ಯ ಭಾಗಕ್ಕೆ ಚೂಪಾದ ಮರದ ತುಂಡಿನಿಂದ ಇರಿದು ಅವರಿಗೆ ಈ ಲೋಕದಿಂದ ಶಾಶ್ವತ ಬಿಡುಗಡೆ ದಯಪಾಲಿಸುತ್ತಿದ್ದರು. (ವಿವರಗಳಿಗೆ ಬಾಕ್ಸ್ ನೋಡಿ)

ಸಮಾಜದಿಂದ ಬಹಿಷ್ಕಾರ ಶಿಕ್ಷೆಗೆ ಗುರಿಯಾದವರು, ಕೆಟ್ಟ ನಕ್ಷತ್ರದಲ್ಲಿ ಜನಿಸಿದವರು,

## ಪ್ಲೇಗ್-ರಕ್ತಪಿಶಾಚಿ

ಹದಿನಾಲ್ಕನೇ ಶತಮಾನದಲ್ಲಿ ಯುರೋಪಿನ ಕಾಲಂಶ ಜನಸಮುದಾಯ ಕಪ್ಪುಸಾವು ಎಂದು ಹೆಸರಾಗಿದ್ದ ಪ್ಲೇಗ್ ವ್ಯಾಧಿಯಿಂದ ನಾಮಾವಶೇಷ ಹೊಂದಿತು. ಪ್ಲೇಗ್ ಭಯಾನಕ ಕಾಯಿಲೆಯಾಗಿತ್ತು. ಅದಕ್ಕೆ ಆಗ ಸೂಕ್ತ ಚಿಕಿತ್ಸೆ ಇರಲಿಲ್ಲ. ಅಲೌಕಿಕ ದುಷ್ಟಶಕ್ತಿಗಳೆನಿಸಿದ ವಾಂಪೈರ್‌ಗಳೇ ಪ್ಲೇಗ್ ವ್ಯಾಧಿ ಹರಡಲು ಕಾರಣವೆಂಬ ವದಂತಿಗಳೂ ಆಗ ಯುರೋಪಿನಲ್ಲಿ ಹರಡಿದ್ದವು. ರಾತ್ರಿ ವೇಳೆ ಗೋರಿಯನ್ನು ಒಡೆದು ಹೊರಬಂದು ರಕ್ತ ಕುಡಿಯಲು ಹೊಂಚುಹಾಕುವ ವಾಂಪೈರ್‌ಗಳ ಶರೀರದಿಂದ ಭಯಂಕರ ದುರ್ವಾಸನೆ ಹೊರಹೊಮ್ಮುತ್ತಿತ್ತು. ಈ ದುರ್ವಾಸನೆಯೇ ಮುಂದೆ ಜನರನ್ನು ಬಲಿತೆಗೆದುಕೊಳ್ಳಲಿರುವ ಪ್ಲೇಗ್‌ನ ಮುನ್ಸೂಚನೆ ಎಂದು ಯುರೋಪಿನ ಜನ ನಂಬಿದ್ದರು.

ಕ್ರಿಸ್ತಶಕ ೧೧೯೬ ರಲ್ಲಿ ಇಂಗ್ಲೆಂಡಿನ ಓರ್ವ ಪಾದ್ರಿ ನ್ಯೂಬರ್ಗ್‌ನ ವಿಲಿಯಂ, ಇಂಗ್ಲೆಂಡಿನಲ್ಲಿ ಹಾವಳಿ ಎಬ್ಬಿಸಿದ ಪ್ಲೇಗ್ ವ್ಯಾಧಿ ನಿಶಾಚರ ರಕ್ತ ಪಿಶಾಚಿಯೊಂದರ ಮೂಲಕ ಹರಡಿತು ಎಂದು ಚರ್ಚ್‌ನ ದಾಖಲೆ ಪತ್ರಗಳಲ್ಲಿ ಬರೆದಿರಿಸಿದ್ದ. ಅನಂತರ ಈ ಪಾದ್ರಿ ತನ್ನ ಇಬ್ಬರು ಬೆಂಬಲಿಗರೊಂದಿಗೆ ಸ್ಮಶಾನಕ್ಕೆ ತೆರಳಿ ಗೋರಿಯೊಂದನ್ನು ಅಗೆದು ಪರಿಶೀಲಿಸಿದಾಗ ಅರ್ಧ ಜಾಗೃತಾವಸ್ಥೆಯಲ್ಲಿದ್ದ ಶವವೊಂದು ಪತ್ತೆಯಾಯಿತು. ಪಾದ್ರಿ ಮತ್ತು ಸಂಗಡಿಗರು ಈ ಶವದ ಎದೆಯ ಮಧ್ಯ ಭಾಗಕ್ಕೆ ಚೂಪಾದ ಕಬ್ಬಿಣವನ್ನು ಇರಿದು ಅನಂತರ ಅದನ್ನು ಸುಟ್ಟುಹಾಕಿದರು. ರಕ್ತಪಿಶಾಚಿ ಸುಟ್ಟು ಬೂದಿಯಾದ ಒಂದೆರಡೇ ದಿನಗಳಲ್ಲಿ ಪ್ಲೇಗ್ ವ್ಯಾಧಿ ಸಂಪೂರ್ಣ ಕಣ್ಮರೆಯಾಯಿತು ಎಂದು ಪಾದ್ರಿ ವಿಲಿಯಂ ಚರ್ಚ್‌ನ ದಾಖಲೆ ಪತ್ರಗಳಲ್ಲಿ ಬರೆದಿರುವನು.

- ಅ.ನಾ.

ನೀಲಿ ಕಣ್ಣಿನವರು, ಕ್ರಿಸ್‌ಮಸ್ ದಿನದಂದು ಹುಟ್ಟಿದ ಮಕ್ಕಳು ಸತ್ತ ಬಳಿಕ ರಕ್ತಪಿಶಾಚಿಗಳಾಗಿ ಪರಿವರ್ತಿತರಾಗುತ್ತಾರೆ ಎಂದು ಕೆಲವು ಐರೋಪ್ಯ ಜಾನಪದ ಕತೆಗಳಲ್ಲಿ ವರ್ಣಿಸಲಾಗಿದೆ.

ಗ್ರೀಸ್‌ನಲ್ಲಿ ರಕ್ತಪಿಶಾಚಿಗಳನ್ನು 'ವ್ರಿಕೊಲ್ಕಾಸ್' ಎಂದು ಕರೆಯುತ್ತಾರೆ. ಗ್ರೀಸ್‌ನ ಜನತೆ ರಕ್ತಪಿಶಾಚಿಗಳಿವೆ ಎಂದು ನಂಬಿದ್ದರು. ಸತ್ತು ಗೋರಿ ಸೇರಿ ಮೂರು ವರ್ಷಗಳಾದ ಬಳಿಕವೂ ಮೃತವ್ಯಕ್ತಿಯ ಶರೀರದ ಮೂಳೆಗಳು ಮಣ್ಣಲ್ಲಿ ಚೆನ್ನಾಗಿ ಬೆರೆತಿದೆಯೇ ಎಂದು ಪರಿಶೀಲಿಸಲು ಗೋರಿಯನ್ನು ಅಗೆದು ನೋಡಿದ ನಿದರ್ಶನಗಳು ೧೯ನೇ ಶತಮಾನದ ಗ್ರೀಸ್‌ನಲ್ಲಿ ಸಾಕಷ್ಟಿದ್ದುವು.

ಹಂಗೆರಿ ಮತ್ತು ರುಮೇನಿಯಾಗಳಲ್ಲಿ ಜನ ಕಳೇಬರಗಳನ್ನು ಹೂಳುವಾಗ ಶವದ ಕತ್ತಿಗೆ ಹರಿತವಾದ ಕುಡುಗೋಲನ್ನು ಬಿಗಿಯುತ್ತಿದ್ದರು. ಶವ ಒಂದು ವೇಳೆ ಪುನಶ್ಚೇತನಗೊಂಡು ಗೋರಿಯಿಂದ ಹೊರಬರಲು ಯತ್ನಿಸಿದರೆ ಹರಿತ ಕುಡುಗೋಲಿನ ಜಗ್ಗಾಟಕ್ಕೆ ಅದರ ಕತ್ತು ಕತ್ತರಿಸಿ ಹೋಗಬೇಕೆಂಬ ಉದ್ದೇಶದಿಂದಲೇ ಈ ಕ್ರಮ ಕೈಗೊಳ್ಳುತ್ತಿದ್ದರು.

೧೮ನೇ ಶತಮಾನದ ಕೊನೆಯ ಭಾಗದಲ್ಲಿ ಲೇಖಕರು, ಕಲಾವಿದರು, ಬುದ್ಧಿಜೀವಿಗಳ ಗಮನ ರಕ್ತಪಿಶಾಚಿಗಳ ಕಡೆಗೆ ಹರಿಯಿತು. ಕೆಲವು ಲೇಖಕರು ರಕ್ತಪಿಶಾಚಿಗಳಿಗೆ ಸಂಬಂಧಿಸಿದ ನೈಜ ಪ್ರಕರಣಗಳನ್ನು ಸಂಗ್ರಹಿಸಿ ಅವುಗಳಿಗೆ ಕಥೆಯ ರೂಪ ನೀಡಿದರು. ಅಂಥವರಲ್ಲಿ ಜೆಕೊಸ್ಲಾವಾಕಿಯಾದ ವಕೀಲ ಚಾರ್ಲ್ಸ್ ಫರ್ಡಿನಾಂಡ್ ಡೆ ಫೆರೆಟ್ಜ್‌ನೂ ಒಬ್ಬ. ಆತ ೧೭೦೬ರಲ್ಲಿ 'ಮಾಜಿಯಾ ಪೊಸ್ತುಮಾ' ಎಂಬ ಕೃತಿಯೊಂದನ್ನು ರಚಿಸಿದ. ವಾಂಪೈರ್‌ಗಳ ಪರಿಕಲ್ಪನೆಯ ಸುತ್ತ ಆವರಿಸಿದ ಅಲೌಕಿಕ ಅಂಶಗಳನ್ನು ಕುರಿತು ಆತ ಅಧ್ಯಯನ ನಡೆಸಿದ. ವಾಂಪೈರ್‌ಗಳ ಹಾವಳಿಯನ್ನು ತೊಡೆದುಹಾಕಲು ಕಾನೂನುಬದ್ಧವಾಗಿ ಯಾವೆಲ್ಲ ಕ್ರಮಗಳನ್ನು ಕೈಗೊಳ್ಳಬಹುದು ಎಂದು ಆತ ಈ ಕೃತಿಯಲ್ಲಿ ವಿಶದಪಡಿಸಿದ್ದಾನೆ.

### ಕುರಿಗಾಹಿಯ ಪ್ರಕರಣ

ಫೆರೆಟ್ಜ್ ತನ್ನ ಕೃತಿಯಲ್ಲಿ ಜೆಕೊಸ್ಲಾವಾಕಿಯಾದಲ್ಲಿ ದೀರ್ಘಕಾಲ ರಕ್ತದಾಹದಿಂದ ಚೀರುತ್ತಾ ಅನೇಕ ಅಮಾಯಕರ ಸಾವಿಗೆ ಕಾರಣನಾಗಿದ್ದ ಕುರಿಗಾಹಿಯೊಬ್ಬನ ಬಗ್ಗೆ ವಿವರಿಸಿದ್ದಾನೆ. ಬೊಹೇಮಿಯದ ಕದಂ ಪಟ್ಟಣದ ಸಮೀಪ ಬ್ಲೋ ಗ್ರಾಮದಲ್ಲಿ ನೆಲೆಸಿದ್ದ ಈ ಕುರಿಗಾಹಿ. ಆತ ಸತ್ತ ಬಳಿಕ ತನ್ನ ಕುಟುಂಬದ ಆಪ್ತರಿಗೆ ಕಾಣಸಿಕೊಂಡನಂತೆ. ಕುರಿಗಾಹಿಯ ಪ್ರೇತವನ್ನು ಪ್ರತ್ಯಕ್ಷ ಕಂಡವರೆಲ್ಲರೂ ಎಂಟು ದಿನಗಳಲ್ಲಿ ನಿಗೂಢವಾಗಿ ತೀರಿಕೊಂಡರು. ಈ ನಿಗೂಢ ಸಾವುಗಳಿಂದ ತತ್ತರಿಸಿದ ಗ್ರಾಮಸ್ಥರು ಒಂದು ರಾತ್ರಿ ಕುರಿಗಾಹಿಯ ಗೋರಿಯನ್ನು ಅಗೆದು ಪರಿಶೀಲಿಸುತ್ತಾರೆ. ಆಗ ಅವರಿಗೆ ಶವದ ಹಲ್ಲುಗಳೆಡೆಯಿಂದ, ಬಾಯಿಯ ಎರಡೂ ಕೊನೆಗಳಿಂದ ಹೊಸ ರಕ್ತ ಜಿನುಗುತ್ತಿರುವುದು ಗೋಚರಿಸುತ್ತದೆ. ಗ್ರಾಮಸ್ಥರು ಕುರಿಗಾಹಿಯ ಶವದ ಎದೆಗೆ ಚೂಪು ಮೊನೆಯ ಮರದ ದಂಡವನ್ನು ಆಳಕ್ಕೆ ಇರಿದು ನೆಟ್ಟರು. ಅವರ ಹುಚ್ಚು ಸಾಹಸಕ್ಕೆ ಕುರಿಗಾಹಿಯ ಶವ ಗಹಗಹಿಸಿ ನಕ್ಕಿತಂತೆ! ಈ ಮರದ ದಂಡ ಬಿಡಾಡಿ ನಾಯಿಗಳಿಂದ ತನಗೆ ರಕ್ಷಣೆ ಒದಗಿಸಲಿದೆ ಎಂದು ಹೇಳಿತಂತೆ.

ಮರುದಿನ ರಾತ್ರಿ ಕುರಿಗಾಹಿಯ ರಕ್ತಪಿಶಾಚಿ ಗೋರಿಯಿಂದ ಹೊರಬಂದು ಇನ್ನಷ್ಟು ಮಂದಿಗೆ ಕಾಣಸಿಕೊಂಡು ಅವರ ಸಾವಿಗೆ ಕಾರಣವಾಯಿತು. ಇಂಥ ವಿಲಕ್ಷಣ

ವಿದ್ಯಮಾನಗಳಿಂದ ಬೇಸತ್ತ ಗ್ರಾಮದ ಜನತೆ ಕುರಿಗಾಹಿಯ ಶವವನ್ನು ಸುಟ್ಟು ಬಿಡಲು ನಿರ್ಧರಿಸಿದರು. ಕುರಿಗಾಹಿಯ ಹೆಣ ವನ್ನು ಗೋರಿಯಿಂದ ಹೊರತೆಗೆದು ಅದನ್ನು ಸುಡಲೆಂದು ಎತ್ತಿನಗಾಡಿಯಲ್ಲಿ ಹಾಕಿಕೊಂಡು ಪಟ್ಟ ಣದ ಹೊರ ವಲಯಕ್ಕೆ ಹೊರಟಾಗ ಹೆಣ ಜೀವಂತ ವ್ಯಕ್ತಿಯಂತೆ ಕೈಕಾಲುಗಳನ್ನು ಬಡಿದು ಆರ್ಭಟಿಸಿತಂತೆ. ಕುರಿಗಾಹಿಯ ಶವದ ಎದೆಗೆ ಇನ್ನೊಂದು ಚೂಪಾದ ಮರದ ದಂಡವನ್ನು ನೆಟ್ಟಾಗ ಅದು ನಾಲ್ಕು ದಿಕ್ಕುಗಳೂ ನಡುಗುವಂತೆ ಆರ್ಭಟ ಸಿತಂತೆ. ಬಾಯಿ, ಮೂಗು, ಕಿವಿಗಳಿಂದ ರಕ್ತ ಪ್ರವಾಹವೇ ಹೊರಹರಿಯಿತಂತೆ. ಕುರಿಗಾಹಿಯ ಶವವನ್ನು ಸುಟ್ಟು ಬೂದಿಯನ್ನು ನದಿಯಲ್ಲಿ ಎಸೆದ ಬಳಿಕ ಗ್ರಾಮಸ್ಥರು ಶಾಂತಿಯಿಂದ ಬಾಳಲು ಸಾಧ್ಯ ವಾಯಿತಂತೆ.

ರಕ್ತಪಿಶಾಚಿಗಳ ಪರಿಕಲ್ಪನೆಗೆ ಸಂಬಂಧಿಸಿದಂತೆ ೧೮ನೇ ಶತಮಾನದ ಕುಖ್ಯಾತ ಪ್ರಕರಣವೆಂದರೆ ಅರ್ನಾಲ್ಡ್ ಪೌಲೆ ಎಂಬಾತನದು. ಇಂದಿನ ಯುಗೋಸ್ಲಾವಿಯಾದ ಒಂದು ಪಟ್ಟಣದಲ್ಲಿ ಆತ ನೆಲೆಸಿದ್ದ. ಆತ ವಾಸಿಸುತ್ತಿದ್ದ ಪ್ರದೇಶ ಆಗ ಹ್ಯಾಪ್ಸ್‌ಬರ್ಗ್ ರಾಜ ಮನೆತನದ ಆಳ್ವಿಕೆಗೆ ಒಳಪ ಟ್ಟದ್ದಿತು. ಆರ್ನಾಲ್ಡ್ ಪೌಲೆ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ. ಈ ಸ್ಫುರದ್ರೂಪಿ ಯುವಕ ೧೭೨೭ರ ವಸಂತಕಾಲದಲ್ಲಿ ಸೇನೆಯನ್ನು ತ್ಯಜಿಸಿ ಸ್ವಗ್ರಾಮ ವಾದ ಬೆಲ್‌ಗ್ರೇಡ್ ಸಮೀಪದ ಮೆಡುಗ್ನಾದಲ್ಲಿ ಎರಡು ಎಕರೆ ಜಮೀನು ಖರೀದಿಸಿ ಅಲ್ಲಿ ನೆಲೆಸಿದ. ನೆಮ್ಮದಿಯಿಂದ ಬಾಳ್ವೆ ಸಾಗಿಸುತ್ತಿದ್ದಾಗ ಗ್ರಾಮದ ಶ್ರೀಮಂತ ರೈತನೊಬ್ಬನ ಏಕೈಕ ಪುತ್ರಿ ೨೫ರ ಚೆಲುವೆ ನೀನಾಳನ್ನು ಪ್ರೀತಿಸಿ ವಿವಾಹವಾದ. ಆಸುಪಾಸಿನ ಮನೆಗಳ ಮಂದಿಯೊಂದಿಗೆ ಪೌಲೆ ಸೌಹಾರ್ದ ಯುತ ಸಂಬಂಧವಿರಿಸಿಕೊಂಡಿದ್ದರೂ ಅವನ ವ್ಯಕ್ತಿ ತ್ವದಲ್ಲಿ ಯಾವುದೋ ವಿಲಕ್ಷಣ ಪ್ರವೃತ್ತಿ ವ್ಯಕ್ತವಾಗುತ್ತಿದೆ ಎಂದು ಅವರಿಗೆ ಅನಿಸುತ್ತಿತ್ತು. ರಾತ್ರಿ ಸರಿಯಾಗಿ ನಿದ್ದೆ ಬಾರದೆ ತಾಸುಗಟ್ಟಳೆ ಗ್ರಾಮದಲ್ಲಿ ಆತ ಅಡ್ಡಾಡುತ್ತಿರುವುದನ್ನು ಗಮನಿಸಿ ನೀನಾ



ಬಾಲಿ ದ್ವೀಪದ 'ನೆತ್ತರು ದೆವ್ವ'ವಾದ 'ರಂಗ್ಡಾ'ದ ಸಂಕೇತವೆನಿಸಿದ ಮುಖವಾಡದ ಪ್ರತಿಕೃತಿ.

ಭಯಭೀತಳಾದಳು. ಪತಿಯ ಆತಂಕಕ್ಕೆ ಕಾರಣವೇನು ಎಂದು ಆಕೆ ಪ್ರಶ್ನಿಸಿದಾಗ, ಗ್ರೀಸ್‌ನಲ್ಲಿ ಹೋರಾಟದಲ್ಲಿ ತೊಡಗಿದ್ದಾಗ ತಾನು ಕೈಗೊಂಡ ಭಯಾನಕ ಸಾಹಸದ ಘಟನೆಯೊಂದನ್ನು ಆತ ಪತ್ನಿಗೆ ನಿರೂಪಿಸಿದ:

"ಗ್ರೀಸ್‌ನಲ್ಲಿ ನನ್ನ ಸೇನೆ ಹೋರಾಟ ಕಾರ್ಯಾಚರಣೆಯಲ್ಲಿ ನಿರತವಾಗಿದ್ದಾಗ ಒಂದು ರಾತ್ರಿ ರುದ್ರಭೂಮಿಯ ಸಮೀಪ ರಕ್ತಪಿಶಾಚಿಯೊಂದನ್ನು ಭೇಟಿಯಾದೆ. ಅದು ನನ್ನ ರಕ್ತ ಕುಡಿಯಲು ಹವಣಿಸಿ ಕತ್ತಿಗೆ ಬಾಯಿ ಹಾಕಬೇಕೆನ್ನುವಷ್ಟರಲ್ಲಿ ಅದರ ಹಿಡಿತದಿಂದ ಬಿಡಿಸಿಕೊಂಡು ಪಾರಾದೆ. ಈ ಘಟನೆಯಿಂದ ತೀವ್ರವಾಗಿ ಮಾನಸಿಕ ಆಘಾತಕ್ಕೊಳಗಾಗಿ ಅಕಾಲಮೃತ್ಯು ಹೊಂಚುಹಾಕುತ್ತಿದೆ ಎಂದು ಭಾವಿಸಿ ಸೇನೆಯಿಂದ ನಿವೃತ್ತಿ ಹೊಂದಿ ಊರಿಗೆ ಹಿಂತಿರುಗಿದೆ."

ಕೆಲವು ದಿನಗಳವರೆಗೆ ಪೌಲೆ ನಿಶ್ಚಿಂತೆಯಿಂದ ಇದ್ದ. ವ್ಯವಸಾಯದ ಫಸಲು ಕೊಯ್ಯುವ ಸಂದರ್ಭದಲ್ಲಿ ಟ್ರಾಕ್ಟರ್‌ನಿಂದ ಅಕಸ್ಮಾತ್ ಕೆಳಗುರುಳಿ ಬಿದ್ದು ತೀವ್ರವಾಗಿ ಗಾಯಗೊಂಡು ತೀರಿಕೊಂಡ. ಪೌಲೆ ತೀರಿಕೊಂಡ ಒಂದು ತಿಂಗಳ ತರುವಾಯ ಆತ ರಕ್ತಪಿಶಾಚಿಯಾಗಿ ರಾತ್ರಿ ಗ್ರಾಮದಲ್ಲೆಲ್ಲಾ ಅಡ್ಡಾಡುತ್ತಿದ್ದಾನೆಂಬ ವದಂತಿ ಹರಡಿತು. ಪೌಲೆ ರಕ್ತಪಿಶಾಚಿಯಾಗಿ ಹಲವರ ರಕ್ತ ಹೀರಿ ಅವರ ಸಾವಿಗೆ ಕಾರಣನಾದ. ಸುಮಾರು ಎರಡೂವರೆ ತಿಂಗಳವರೆಗೆ ಪೌಲೆಯ ಉಪಟಳ, ಹಿಂಸೆ ಮುಂದುವರಿಯಿತು. ಕೊನೆಗೊಮ್ಮೆ ಗ್ರಾಮಸ್ಥರು ಪೌಲೆಯ ಗೋರಿಯನ್ನು ಅಗೆದು ಅವನ ಶವವನ್ನು ಪರಿಶೀಲಿಸಲು ನಿರ್ಧರಿಸಿದರು.

ಪೌಲೆಯ ಪ್ರಕರಣ ಬೆಲ್‌ಗ್ರೇಡ್‌ನಲ್ಲಿ ಮಿಲಿಟರಿ ಅಧಿಕಾರಿ ವಲಯದಲ್ಲಿ ಸಾಕಷ್ಟು ಕುತೂಹಲ ಕೆರಳಿಸಿತು. ಅವನ ಗೋರಿಯ ಪರಿಶೀಲನೆಗೆ ನೆರೆದ ತಂಡದಲ್ಲಿ ಬೆಲ್ಗ್ರೇಡ್‌ನಿಂದ ಕಳುಹಿಸಲಾಗಿದ್ದ ಇಬ್ಬರು ಮಿಲಿಟರಿ ಅಧಿಕಾರಿಗಳೂ ಇದ್ದರು. ಅವರೊಂದಿಗೆ ಇದ್ದ ಇತರರೆಂದರೆ ಸೇನೆಯ ಇಬ್ಬರು ಸರ್ಜನ್‌ಗಳು ಮತ್ತು ಸಾಧನ ಸಾಮಗ್ರಿಗಳನ್ನು ಒಯ್ದ ಓರ್ವ ವೃದ್ಧ. ಗೋರಿಯೊಳಗಿದ್ದ ಪೌಲೆಯ ಶವಪೆಟ್ಟಿಗೆಯನ್ನು ತೆರೆದಾಗ ಶವವು ಒಂದು ಪಕ್ಕಕ್ಕೆ ವಾಲಿರುವುದು ಅವರ ಗಮನಸೆಳೆಯಿತು. ದವಡೆಗಳು 'ಆ' ಎಂದು ತೆರೆದುಕೊಂಡಿದ್ದವು. ತುಟಿಗಳಲ್ಲಿ ಕೆಂಪು ರಕ್ತ ಮೆತ್ತಿಕೊಂಡಿತ್ತು. ಬಾಯಿಯ ಒಂದು ಮೂಲೆಯಿಂದ ರಕ್ತದ ಸಣ್ಣಧಾರೆ ಹೊರಗೆ ಹರಿಯುತ್ತಿತ್ತು. ಮುದುಕ ಆಳು ಶವವನ್ನು ಬಿಗಿಯಾಗಿ ಹಿಡಿದು ನೇರವಾಗಿ ಮಲಗಿಸಲು ಪ್ರಯತ್ನಿಸಿದ. ಆಗ ಶವದ ಹೊರಚರ್ಮ ಸುಲಿದುಕೊಂಡು ಮುದುಕನ ಕೈಗೇ ಅಂಟಿಕೊಂಡಿತು. ಹಳೆಯ ಚರ್ಮದ ಪದರಿನ ತಳದಲ್ಲಿ ಹೊಸಚರ್ಮ, ಹೊಸ ಉಗುರುಗಳು ಬೆಳೆಯಲಾರಂಭಿಸಿದ್ದುವು! ಗೋರಿಯ ಸಮೀಪ ನೆರೆದವರೆಲ್ಲ ಭೀತಿಯಿಂದ ತತ್ತರಿಸತೊಡಗಿದರು. ಆದರೂ ಕೊಂಚ ಹೊತ್ತಿನಲ್ಲಿ ಅವರೆಲ್ಲ ಧೈರ್ಯ ತಂದುಕೊಂಡು ಶವದ ಮೇಲೆ ಬೆಳ್ಳುಳ್ಳಿಗಳನ್ನು ಹರಡಿದರು (ರಕ್ತಪಿಶಾಚಿಗಳಿಗೆ ಬೆಳ್ಳುಳ್ಳಿಯ ವಾಸನೆ ಆಗಿಬರುವುದಿಲ್ಲವಂತೆ). ಮಿಲಿಟರಿ ಅಧಿಕಾರಿಗಳು ಶವದ ಹೃದಯಭಾಗಕ್ಕೆ ಹರಿತ ಮೊನೆಯ ಮರದ ದಂಡದಿಂದ ಇರಿದರು. ಆ ಕ್ಷಣದಲ್ಲಿ ಭಯಾನಕವಾದ ಚೀತ್ಕಾರ ಶವದ ಗಂಟಲಿನಿಂದ ಹೊರಹೊಮ್ಮಿತು. ಬಾಯಿಯಿಂದ ರಕ್ತಧಾರೆ ಉಕ್ಕಿತು. ಪೌಲೆ ಹತ್ಯೆಗೈದನೆಂದು ಹೇಳಲಾಗುತ್ತಿದ್ದ ನಾಲ್ವರು ದುರ್ದೈವಿಗಳ ಶವಗಳನ್ನೂ ಗೋರಿಯಿಂದ ಹೊರತೆಗೆದು ಪರಿಶೀಲಿಸಲಾಯಿತು. ಅವರ ಎದೆಯಲ್ಲೂ ಚೂಪು ಮೊನೆಯ ಮರದ ದಂಡವನ್ನು ನೆಟ್ಟು ಅವರು ರಕ್ತಪಿಶಾಚಿಗಳಾಗಿ ಪರಿವರ್ತನೆ ಹೊಂದದಂತೆ ಮುನ್ನೆಚ್ಚರಿಕೆ ವಹಿಸಲಾಯಿತು.

ಅನಂತರ ಎಲ್ಲ ಶವಗಳನ್ನೂ ಸುಟ್ಟು ಹಾಕುವುದು ಅನಿವಾರ್ಯವೆನಿಸಿತು.

ವಾಂಪೈರ್‌ಗಳ ಪರಿಕಲ್ಪನೆಗೆ ಸಂಬಂಧಿಸಿದಂತೆ ಆಳವಾಗಿ ಅಧ್ಯಯನ ನಡೆಸಿದ ಇನ್ನೋರ್ವ ಆಂಗ್ಲ ವಿದ್ವಾಂಸ ಮೊಂಟೇಗ್ ಸಮ್ಮರ್ಸ್. ವಾಂಪೈರ್‌ಗಳ ಕುರಿತು ಅಧ್ಯಯನ ಗೈಯುವ ಉದ್ದೇಶದಿಂದಲೇ ಆತ ಇಂಗ್ಲೆಂಡ್‌ನ ಚರ್ಚ್ ತ್ಯಜಿಸಿ ರೋಮನ್ ಕೆಥೊಲಿಕ್ ಪಂಥ ಅನುಸರಿಸಿದ. ಸಮ್ಮರ್ಸ್ 'ದಿ ವಾಂಪೈರ್: ಹಿಸ್ ಕಿತ್ ಅಂಡ್ ಕಿನ್', 'ವಾಂಪೈರ್ ಇನ್ ಯುರೋಪ್' ಹಾಗೂ 'ಹಿಸ್ಟರಿ ಆಫ್ ವಿಚ್‌ಕ್ರಾಫ್ಟ್ ಅಂಡ್ ಡೆಮೊನೋಲಜಿ' ಎಂಬ ಮೂರು ಸಂಶೋಧನಾ ಗ್ರಂಥಗಳನ್ನು ಬರೆದ.

ಮೊಂಟೇಗ್ ಸಮ್ಮರ್ಸ್ ಇಂಗ್ಲೆಂಡ್‌ನ ಗ್ರಂಥಾಲಯಗಳಿಗೆ ಭೇಟಿ ನೀಡಿ ಜ್ಞಾನಾರ್ಜನೆ ಮಾಡುತ್ತಾ ಪುಸ್ತಕಗಳನ್ನು ಬರೆಯುತ್ತಾ ಜೀವನ ಕಳೆದ. ಆತ ತನ್ನ ಕೃತಿಗಳಲ್ಲಿ ನಿರೂಪಿಸಿದ ಬಹಳಷ್ಟು ದೃಷ್ಟಾಂತಗಳು 'ಜೀವಂತ ರಕ್ತಪಿಶಾಚಿ'ಗಳಿಗೆ ಸಂಬಂಧಿಸಿದುವಾಗಿವೆ. ಇವುಗಳಲ್ಲಿ ಮಾನವರಕ್ತ ಹಾಗೂ ಮಾಂಸದ ಬಗ್ಗೆ ಹಿಂಗಲಾರದ ಹಸಿವು ಬೆಳೆಸಿಕೊಂಡಿದ್ದ ಇಬ್ಬರು ವ್ಯಕ್ತಿಗಳ ಬಗ್ಗೆ ಸಮ್ಮರ್ಸ್ ಉಲ್ಲೇಖಿಸಿದ್ದಾನೆ. ರಕ್ತದಾಹದಿಂದ ಸದಾ ತಹತಹಿಸುತ್ತಿದ್ದ ೧೪ರ ಹರೆಯದ ಫ್ರೆಂಚ್ ಹುಡುಗಿಯೊಬ್ಬಳು ತನ್ನ ಶರೀರದ ವಿವಿಧ ಭಾಗಗಳಿಗೆ ತಾನೇ ಗಾಯಮಾಡಿಕೊಂಡು ಅದರಿಂದ ಸೋರುತ್ತಿದ್ದ ರಕ್ತ ಹೀರುತ್ತಿದ್ದಳಂತೆ!

## ರಕ್ತ ಪಿಶಾಚಿಗಳ ಕ್ಲಬ್!

**ಪಾ**ಶ್ಚಾತ್ಯ ದೇಶಗಳಲ್ಲಿ ವಾಂಪೈರ್‌ಗಳ ಪರಿಕಲ್ಪನೆ ಎಷ್ಟೊಂದು ಜನಪ್ರಿಯವಾಗಿದೆಯೆಂದರೆ ಅವುಗಳ ಹೆಸರಿನಲ್ಲಿ ಕ್ಲಬ್‌ಗಳು, ಪತ್ರಿಕೆಗಳು ಆರಂಭವಾಗಿವೆ. ಅವುಗಳಿಗೆ ಸಿನಿಮಾದ ಕಥಾವಸ್ತುವಾಗಿಯೂ ಕಿರುತೆರೆಯಲ್ಲಿಯೂ ಆದ್ಯತೆ ದೊರಕಿದೆ. ನ್ಯೂಯಾರ್ಕ್ ನಗರದಲ್ಲಿ ಕೌಂಟ್ ಡ್ರಾಕ್ಯುಲಾ ಫ್ಯಾನ್ ಕ್ಲಬ್ ಸ್ಥಾಪನೆಯಾಗಿದೆ. ಅದರ ಮುಖ ಪತ್ರದಲ್ಲಿ ವಾಂಪೈರ್‌ಗೆ ಸಂಬಂಧಿಸಿದ ರೋಚಕ ಕಥೆಗಳು, ಹಾಸ್ಯ ಚಟಾಕಿಗಳು ಪ್ರಕಟವಾಗಿರುತ್ತವೆ. ಸ್ಯಾನ್ ಫ್ರಾನ್ಸಿಸ್ಕೋದ ಪ್ರಕಾಶಕ ಜಾನ್ ವೆಲ್ಲೂಲೆನಿ 'ಜರ್ನಲ್ ಆಫ್ ವಾಂಪೈರೋಲಜಿ' ಎಂಬ ಪತ್ರಿಕೆ ಪ್ರಕಟಿಸುತ್ತಿದ್ದಾನೆ. ಈ ಪತ್ರಿಕೆ ಆಫ್ರಿಕಾದಲ್ಲಿ ವಾಂಪೈರ್‌ಗಳ ಪರಿಕಲ್ಪನೆಗೆ ಸಂಬಂಧಿಸಿದಂತೆ ಗಂಭೀರ ಅಧ್ಯಯನ ನಡೆಸಿದೆ.

ಲಾಸ್ ಏಂಜೆಲಿಸ್‌ನಲ್ಲಿರುವ ಕೌಂಟ್ ಡ್ರಾಕ್ಯುಲಾ ಸೊಸೈಟಿ ಭಯಾನಕ ಚಿತ್ರಗಳ ಅಧ್ಯಯನ ಹಾಗೂ ಅವುಗಳ ಪ್ರದರ್ಶನಕ್ಕೆ ಹೆಚ್ಚಿನ ಮಹತ್ವ ನೀಡಿದೆ.

ವಾರ್ಷಿಕ ಪ್ರಶಸ್ತಿಗಳ ಕಾರ್ಯಕ್ರಮವನ್ನೂ ಈ ಸೊಸೈಟಿ ಏರ್ಪಡಿಸುತ್ತದೆ. ರಿಕಾರ್ಡೋ ಎಂಬ ಆಂಗ್ಲ ಇತಿಹಾಸಕಾರ ಬರೆದ ವಾಂಪೈರ್ ಅನ್ ಅರ್ಥ್‌ಡ್ ಗ್ರಂಥ ವಿವರಣ ಶಾಸ್ತ್ರದಲ್ಲಿ (Bibliography) ಮಹತ್ವಪೂರ್ಣ ಕೃತಿ ಎನಿಸಿದೆ. ನ್ಯೂಯಾರ್ಕ್ ನಗರದಲ್ಲಿ ಸ್ವಯಂಘೋಷಿತ ವಾಂಪೈರ್ ತಜ್ಞ ಸ್ಟೀಫನ್ ಕಾಫ್ಲಾನ್ ವಾಂಪೈರ್ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಿದ್ದಾನೆ. ಇಂದು ಉತ್ತರ ಅಮೆರಿಕಾದಲ್ಲಿ ೧೫೦ರಿಂದ ೨೦೦ ರಷ್ಟು, ಜಗತ್ತಿನಾದ್ಯಂತ ೫೦೦ ರಷ್ಟು ನೈಜ ವಾಂಪೈರ್‌ಗಳಿವೆ ಎಂದು ಆತ ಹೇಳುತ್ತಾನೆ. ವಾಂಪೈರ್‌ಗಳ ಇತಿಹಾಸಕ್ಕೆ ಸಂಬಂಧಿಸಿದಂತೆ ಸುಸಜ್ಜಿತ ಗ್ರಂಥಾಲಯ ಈ ಸಂಶೋಧನಾ ಕೇಂದ್ರದಲ್ಲಿದೆ. ಸ್ಟೀಫನ್ ಕಾಫ್ಲಾನ್ ವಾಂಪೈರೋಲಜಿಗೆ ಸಂಬಂಧಿಸಿದಂತೆ ಸುಮಾರು ೧೪೦೦ ರೇಡಿಯೋ, ಟಿ.ವಿ. ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ.

- ಅ.ನಾ

## ರಕ್ತದಾಹಿ ಕೌಂಟೆಸ್

ಸತ್ತಬಳಿಕ ರಕ್ತಪಿಶಾಚಿಗಳಾಗಿ ಪರಿವರ್ತನೆ ಹೊಂದುವವರ ಬಗ್ಗೆ ಈಗಾಗಲೇ ಹಲವು ರೋಚಕ ಪ್ರಕರಣಗಳು ಈ ಬರಹದಲ್ಲಿ ನಿರೂಪಿಸಲ್ಪಟ್ಟಿವೆಯಷ್ಟೆ. ಈಗ, ಜೀವಂತವಿದ್ದಾಗಲೇ ಆಯುಷ್ಯವಿಡೀ 'ರಕ್ತಪಿಶಾಚಿ'ಯಂತೆ ವರ್ತಿಸಿದ ಕೆಲವು ಭೀಭತ್ಸ ವ್ಯಕ್ತಿಗಳ ಬಗ್ಗೆ ಗಮನಹರಿಸೋಣ. ಇಂಥ ಪಾತಕಿಗಳ ಶ್ರೇಣಿಯಲ್ಲಿ ಹಂಗೆರಿಯ 'ಬ್ಲಡ್ ಕೌಂಟೆಸ್'.ಎಂದೇ ಹೆಸರಾದ ಎಲಿಜಬೆತ್ ಬಾತೊರಿ ಮೊದಲನೆಯವಳಾಗಿ ನಿಲ್ಲುತ್ತಾಳೆ. ಎಲಿಜಬೆತ್ ಬಾತೊರಿಯ ಜೀವನದ ಕಥೆ ಹಾಲಿವುಡ್‌ನ 'ಹಾರರ್ ಸಿನಿಮಾ'ದಂತೆ ರೋಚಕವಾಗಿದೆ.

ವಾಯುವ್ಯ ಹಂಗೇರಿಯ ಕಾರ್ಪೇಥಿಯನ್ ಬೆಟ್ಟ ಪ್ರದೇಶದ ತಪ್ಪಲಲ್ಲಿರುವ ಟ್ರಾನ್ಸಿಲ್ವೇನಿಯಾದಲ್ಲಿ ಕೋಟೆ ಅರಮನೆಯಲ್ಲಿ ಎಲಿಜಬೆತ್ ಬಾತೊರಿ ಹುಟ್ಟಿದಳು (೧೫೬೦). ಅವಳ ವಂಶ ಹಲವು ತಲೆಮಾರುಗಳಿಂದ ಕುಖ್ಯಾತವೆನಿಸಿತ್ತು. ವಿಕೃತಕಾಮಿಗಳು, ಅತ್ಯಾಚಾರಿಗಳು, ಧಾರ್ಮಿಕ ಪಾಷಂಡಿಗಳು, ಕೊಲೆಗಡುಕರು ಈ ವಂಶದಲ್ಲಿ ಜನಿಸಿದ್ದರು. ಬಾಲ್ಯದಲ್ಲಿಯೇ ಎಲಿಜಬೆತ್‌ಳ ತಂದೆ ತೀರಿಕೊಂಡರು.

ಹನ್ನೊಂದನೆಯ ವಯಸ್ಸಿನಲ್ಲಿದ್ದಾಗ ಎಲಿಜಬೆತ್‌ಳ ವಿವಾಹ ಟ್ರಾನ್ಸಿಲ್ವೇನಿಯದ ಪ್ರತಿಷ್ಠಿತ ಪ್ರಾಟೆಸ್ಟೆಂಟ್ ಕುಟುಂಬದ ಯುವಕ ಫೆರೆನೆಜ್ ನಾಡ್ಸ್‌ಡೀಯೊಂದಿಗೆ ನಿಶ್ಚಯವಾಯಿತು. ನಾಡ್ಸ್‌ಡೀ ಕುಟುಂಬದಲ್ಲಿ ಅವಳ ದಾಂಪತ್ಯ ಜೀವನ ಆರಂಭವಾಗುವ ಮೊದಲೇ ಕೌಂಟೆಸ್ ಆಗಿ ಆಕೆ ತರಬೇತಿಯನ್ನು ಪಡೆದಳು. ದೈನಂದಿನ ಗೃಹಕೃತ್ಯಗಳಿಂದ ಬಲು ಶೀಘ್ರದಲ್ಲಿಯೇ ಬೇಸರ ಹುಟ್ಟಿ ಎಲಿಜಬೆತ್ ತನ್ನ ಎಸ್ಟೇಟ್‌ನಲ್ಲಿ ದುಡಿಯುತ್ತಿದ್ದ ರೈತ ಯುವಕರೊಂದಿಗೆ ಲೈಂಗಿಕ ಚೆಲ್ಲಾಟವಾಡತೊಡಗಿದಳು. ಹೀಗಾಗಿ ತನ್ನ ಹದಿಮೂರನೆಯ ವಯಸ್ಸಿನಲ್ಲಿಯೇ ಆಕೆ ಗರ್ಭಿಣಿಯಾದಳು. ವಿವಾಹಕ್ಕೆ ಮುನ್ನವೇ ಗರ್ಭಿಣಿಯಾಗಿ ತಮ್ಮ ಕುಟುಂಬದ ಮಾನ ಮರ್ಯಾದೆಯನ್ನು ಮಗಳು ಹರಾಜು ಹಾಕಿದಳಲ್ಲಾ ಎಂದು ತಾಯಿಗೆ ಅವಳ ಬಗ್ಗೆ ಅಸಾಧ್ಯ ಸಿಟ್ಟು ಉರಿದೆದ್ದಿತು. ಆದರೂ ಆಕೆ ತಾಳ್ಮೆ ತಂದುಕೊಂಡು, ಅವಮಾನವನ್ನು ನುಂಗಿಕೊಂಡಳು. ಮಗಳ ಅನೀತಿಯುತ ಕೃತ್ಯ ಬಹಿರಂಗವಾಗಬಾರದೆಂದು ಬಾತೊರಿಯಲ್ಲಿದ್ದ ಹಳೆಯ ಕೋಟೆ ಅರಮನೆಯೊಂದರಲ್ಲಿ ಆಕೆ ಏಕಾಂತವಾಸದಲ್ಲಿರುವಂತೆ ವ್ಯವಸ್ಥೆ ಮಾಡಿದಳು. ಹುಟ್ಟಿದ ಮಗುವನ್ನು ರಹಸ್ಯವಾಗಿ ದೇಶದ ಹೊರಗೆ ಸಾಗಿಸಿದಳು. ಎಲಿಜಬೆತ್ ತನ್ನ ೧೫ನೇ ಹುಟ್ಟುಹಬ್ಬ ಆಚರಿಸಿದ ಬಳಿಕ ಫೆರೆನೆಜ್ ನಾಡ್ಸ್‌ಡೀಯನ್ನು ವಿವಾಹವಾದಳು.

ಟ್ರಾನ್ಸಿಲ್ವೇನಿಯಾ ಬೆಟ್ಟ ಪ್ರದೇಶದಲ್ಲಿರುವ ಹಲವು ಹಳೆಯ ಕೋಟೆ ಅರಮನೆಗಳಲ್ಲಿ ಯಾವುದಾದರೊಂದರಲ್ಲಿ ನೆಲೆಸುವ ಅವಕಾಶ ನವದಂಪತಿಗೆ ಇದ್ದರೂ ಎಲಿಜಬೆತ್ ದಟ್ಟಕಾಡಿನ ನಡುವೆ ಇದ್ದ ಹಳೆಯ ಒಂದು ಹಾಳು ಅರಮನೆಯನ್ನು ಆರಿಸಿಕೊಂಡಳು. ಈ ಅರಮನೆಯ ಆಸುಪಾಸಿನಲ್ಲಿದ್ದ ದಟ್ಟ ಕಾಡುಗಳಿಂದ ರಾತ್ರಿಯೆಲ್ಲ ಸತತವಾಗಿ ತೋಳಗಳು ಊಳಿಡುವ ಧ್ವನಿ ಕೇಳಿಸುತ್ತಿತ್ತು. ವಿವಾಹವಾದ ಕೆಲವೇ ದಿನಗಳಲ್ಲಿ ಫೆರೆನೆಜ್ ಯುದ್ಧದಲ್ಲಿ ಭಾಗವಹಿಸಲು ಸೇನೆಯಲ್ಲಿ ಭರ್ತಿ ಹೊಂದಿದ. ಒಂಟಿಯಾಗಿ ಕಾಲ ಕಳೆಯಬೇಕಾಗಿ ಬಂದ ಕೌಂಟೆಸ್ ಎಲಿಜಬೆತ್ ಮತ್ತೆ ತನ್ನ ಹಿಂದಿನ ಚಾಳಿಯನ್ನು ಮುಂದುವರಿಸಿದಳು. ಎಸ್ಟೇಟ್‌ಗೆ ಕೂಲಿ ಕೆಲಸ ಮಾಡಲು ಬರುತ್ತಿದ್ದ ಕಟ್ಟುಮಸ್ತಾದ ದೇಹದ ಯುವಕರೊಂದಿಗೆ ಆಕೆಯ ಲೈಂಗಿಕ ಸಂಬಂಧ ಎಗ್ಗಿಲ್ಲದೆ ಮುಂದುವರಿಯಿತು. ವಿಕೃತಕಾಮ,

ಹಿಂಸಾರತಿ ಆಕೆಯ ಅತಿದೊಡ್ಡ ದೌರ್ಬಲ್ಯವಾಗಿದ್ದಿತು. ಎಸ್ಟೇಟಿನಲ್ಲಿ ದುಡಿಯುತ್ತಿದ್ದ ಹದಿಹರೆಯದ ರೈತ ಹುಡುಗಿಯರನ್ನು ನಗ್ನಗೊಳಿಸಿ ಅವರ ಬೆತ್ತಲೆ ದೇಹದ ಮೇಲೆ ಬಾರುಕೋಲಿನಿಂದ ಬಾರಿಸಿ ಅವರು ಯಾತನೆಯಿಂದ ಚೀರುತ್ತಿರುವುದನ್ನು ನೋಡಿ ಖುಷಿಪಡುವ ಪ್ರವೃತ್ತಿ ಆಕೆಗಿತ್ತು. ಗಂಡ ಫೆರೆನೆಜ್ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ ಶತ್ರುಗಳಿಗೂ ಇದೇ ರೀತಿಯ ಹಿಂಸೆ ನೀಡುವುದರಲ್ಲಿ ನಿಷ್ಣಾತನಾಗಿದ್ದುದರಿಂದ ಆತ ಪತ್ನಿಯ ಹಿಂಸಾಪ್ರವೃತ್ತಿಯನ್ನು ಖಂಡಿಸುತ್ತಿರಲಿಲ್ಲ. ಈ ಮಧ್ಯೆ ೧೫೮೫ರಿಂದ ೧೫೯೫ರ ಅವಧಿಯಲ್ಲಿ ಕೌಂಟೆಸ್ ಎಲಿಜಬೆತ್‌ಳಿಗೆ ನಾಲ್ವರು ಮಕ್ಕಳಾದರು.

೧೬೦೪ರ ಚಳಿಗಾಲದಲ್ಲಿ ಫೆರೆನೆಜ್ ತೀರಿಕೊಂಡ. ಗೃಹಿಣಿಯ ಜೀವನದ ಕಟ್ಟುಪಾಡುಗಳಿಂದ ಎಲಿಜಬೆತ್‌ಳಿಗೆ ಬಿಡುಗಡೆ ದೊರಕಿತು. ದಿನಗಳೆದಂತೆ ಹಿಂಸಾರತಿಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸಿ ಕೌಂಟೆಸ್ ವಿಚಿತ್ರ ಆನಂದ ಅನುಭವಿಸುತ್ತಿದ್ದಳು. ರೈತ ಹುಡುಗಿಯರಿಗೆ ಕಾದ ಕಬ್ಬಿಣದ ಸರಳಿನಿಂದ ಬರೆ ಇಡುವುದು, ಚೂಪಾದ ಸೂಜಿಯಿಂದ ಮರ್ಮಾಂಗವನ್ನು ಚುಚ್ಚುವುದು ಇವೇ ಮುಂತಾದ ಚಿತ್ರಹಿಂಸೆ ನೀಡಿ ವಿಲಕ್ಷಣ ಖುಷಿ ಅನುಭವಿಸುತ್ತಿದ್ದಳು. ಕೌಂಟೆಸ್ ಎಲಿಜಬೆತ್ ಸುಂದರಿಯೆ. ಆ ಯೌವ್ವನ ಹಾಗೂ ಸೌಂದರ್ಯವನ್ನು ಚಿರಂತನವಾಗಿ ಕಾಯ್ದುಕೊಂಡು ಬರಬೇಕೆಂಬ ಉದ್ದೇಶದಿಂದ ಆಕೆ ಹೊಸ ಹೊಸ ಪ್ರಯೋಗಗಳನ್ನು ಕೈಗೊಳ್ಳತೊಡಗಿದಳು. ಒಂದು ಬಾರಿ ಮನೆಗೆಲಸದ ಹುಡುಗಿಯೊಬ್ಬಳನ್ನು ನಿರ್ದಯವಾಗಿ ಥಳಿಸುತ್ತಿದ್ದಾಗ ಅವಳ ಶರೀರದಿಂದ ಸಿಡಿದ ರಕ್ತ ಕೌಂಟೆಸ್‌ಳ ಮುಖಕ್ಕೆ ಚಿಮ್ಮಿತು. ಎಲಿಜಬೆತ್ ಬಾತೊರಿ ರಕ್ತಲೇಪಿತ ಮುಖವನ್ನು ಕೈಯಿಂದ ಒರೆಸಿದಾಗ ತನ್ನ ಮೈಚರ್ಮ ಹೆಚ್ಚು ಹೊಳೆಯುತ್ತಿದೆಯೇನೋ, ಮೃದುವಾಗಿದೆಯೇನೋ ಎಂದು ಅವಳಿಗನಿಸಿತು. ಚಿರಂತನ ಯೌವನವನ್ನು ಕಾಯ್ದುಕೊಳ್ಳುವ ರಹಸ್ಯದ ಖಜಾನೆಯ ಬೀಗಮುದ್ರೆಯನ್ನು ತಾನು ಒಡೆದೆ ಎಂಬುದು ಅವಳಿಗೆ ಖಚಿತವಾಯಿತು. ಮಾನವ ರಕ್ತದಿಂದ ನಿತ್ಯವೂ ಸ್ನಾನ ಮಾಡಿದರೆ ತಾನು ಯೌವ್ವನವನ್ನು ಕಾಯ್ದುಕೊಳ್ಳಬಲ್ಲೆನೆಂದೇ ಆಕೆ ಭಾವಿಸಿಕೊಂಡುಬಿಟ್ಟಳು.

### ಮೃತ್ಯುಪಂಜರ

ಕೌಂಟೆಸ್ ಎಲಿಜಬೆತ್ ಬಾತೊರಿ ವಿಯೆನ್ನಾದಲ್ಲಿದ್ದ ತನ್ನ ನಿವಾಸದಲ್ಲಿ ಒಂದು ಕೊಠಡಿಯಲ್ಲಿ ಶಂಖಾಕೃತಿಯ ಎತ್ತರದ ಪಂಜರವೊಂದನ್ನು ಇರಿಸಿದ್ದಳು. ಪಂಜರದ ಒಳಭಾಗಕ್ಕೆ ಚಾಚಿಕೊಂಡಂತೆ ಚೂಪಾದ ಕಬ್ಬಿಣದ ಮೊನೆಗಳನ್ನು ಅಳವಡಿಸಿದ್ದರು. ಈ ಪಂಜರದೊಳಗೆ ಎಳೆವಯಸ್ಸಿನ ಹುಡುಗಿ



ಬ್ಲಡ್ ಕೌಂಟೆಸ್ - 'ಎಲಿಜಬೆತ್ ಬಾತೊರಿ' ೧೭ನೇ ಶತಮಾನದ ಭಾವಚಿತ್ರ.

ಯನ್ನೊ ಇಲ್ಲವೆ ಆಕರ್ಷಕ ಮೈಕಟ್ಟಿನ ಯುವತಿಯನ್ನೊ ಕೂಡಿಹಾಕುತ್ತಿದ್ದರು. ಪಂಜರದ ಹೊರಗಿನಿಂದ ಸರಳುಗಳ ನಡುವಿನಿಂದ ಯುವತಿಯ ಬತ್ತಲೆ ಮೈಗೆ ಕಾದ ಕಬ್ಬಿಣದಿಂದ ಯದ್ವಾತದ್ವಾ ಚುಚ್ಚುವಾಗ ಯುವತಿ ಯಾತ್ನನೆಯಿಂದ ಆಚೀಚೆ ವಾಲುತ್ತಿದ್ದುದರಿಂದ ಅವಳ ಶರೀರದ ಹಲವು ಕಡೆಗೆ ಕಬ್ಬಿಣದ ಚೂಪು ಮೊನೆ ಚುಚ್ಚಿ ತೀವ್ರ ಗಾಯಗಳಾಗಿ ರಕ್ತ ಸೋರುತ್ತಿತ್ತು. ಧಾರಾಕಾರವಾಗಿ ಸುರಿದ ರಕ್ತ ಪಂಜರದ ತಳದಿಂದ ಹೊರಕ್ಕೆ ಹರಿಯಲು ಸೂಕ್ತ ವ್ಯವಸ್ಥೆಯೂ ಅಲ್ಲಿತ್ತು. ಈ ರಕ್ತವನ್ನು ಬೊಗಸೆಯಲ್ಲಿ ಸಂಗ್ರಹಿಸಿ ಕೌಂಟೆಸ್ ಅದನ್ನು ಕುಡಿಯುತ್ತಿದ್ದಳು.

ಈ ಪೈಶಾಚಿಕ ಹಿಂಸಾಕಾಂಡದಲ್ಲಿ ಎಲಿಜಬೆತ್ ಬಾತೂರಿಗೆ ಅವಳ ಕುಟುಂಬದ ಸಮೀಪದ ಸಂಬಂಧಿ ಓರ್ವ ಮುದುಕಿ, ಓರ್ವ ದಾದಿ ಹಾಗೂ ಒಬ್ಬ ಜೀತದಾಳು ನೆರವಾಗುತ್ತಿದ್ದರು. ಎಲಿಜಬೆತ್ ಬಾತೂರಿಯ ಕ್ರೂರ ಚಿತ್ರಹಿಂಸೆಯಿಂದ ರಕ್ತವೆಲ್ಲ ಸೋರಿ ಹೋಗಿ ತೀರಿಕೊಂಡ ನತದೃಷ್ಟರ ಶವಗಳನ್ನು ವಿಲೇವಾರಿ ಮಾಡುವುದೇ ದೊಡ್ಡ ಸಮಸ್ಯೆಯಾಗಿತ್ತು. ಅರಮನೆಯ ಸುತ್ತ ಕಾಡುಗಳಲ್ಲಿ ಹೆಣಗಳನ್ನು ಎಲ್ಲೆಂದರಲ್ಲಿ ಎಸೆದುಬಿಡುತ್ತಿದ್ದರು. ದಿನಗಳೆದಂತೆ ಕಾಡಿನಲ್ಲಿ ಎಸೆಯಲಾದ ಹೆಣಗಳ ಸಂಖ್ಯೆ ಹೆಚ್ಚಿತು. ಅರಮನೆಯೊಳಗೆ ಯಾವುದೋ ಭಯಾನಕ ಕ್ರಿಯಾವಿಧಿ ಜರುಗುತ್ತಿದೆ, ಅದರ ಫಲವೇ ಈ ಹೆಣಗಳು ಎಂದು ಜನ ಭಾವಿಸಿದರು. ಇನ್ನು ಕೆಲವರು 'ಇದು ಖಂಡಿತವಾಗಿಯೂ ವಾಂಪೈರ್‌ನ ನೀಚ ಕೆಲಸವೇ ಆಗಿರಬೇಕು' ಎಂದುಕೊಂಡರು. ಅವರೆಲ್ಲರ ಅನುಮಾನ ಎಲಿಜಬೆತ್ ಬಾತೂರಿ ಮತ್ತು ಅವರ ಸಂಗಡಿಗರ ಮೇಲೆ ಕೇಂದ್ರೀಕೃತವಾಗಿತ್ತು. ೧೬೧೦ ಕ್ರಿಸ್‌ಮಸ್ ಹಬ್ಬದ ಸಂದರ್ಭದಲ್ಲಿ ಬಾತೂರಿ ಕುಟುಂಬದ ಹಿರಿಯ ಸದಸ್ಯ ಕೌಂಟ್ ಜಿಯೋರ್ಜಿ ಥರಿರ್ಜೊ ಮನೆತನದ ಗೌರವವನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಎಲಿಜಬೆತ್ ಬಾತೂರಿಯನ್ನೂ ಅವಳ ಸಂಗಡಿಗರನ್ನೂ ಬಂಧಿಸಿ ತೀವ್ರ ತನಿಖೆಗೆ ಗುರಿಪಡಿಸಲಾಯಿತು.

"ಕೌಂಟೆಸ್ ಎಲಿಜಬೆತ್ ಬಾತೂರಿ ಚಿತ್ರಹಿಂಸೆ ನೀಡಿ ಕೊಂದ ಹುಡುಗಿಯರು ಹಾಗೂ ಯುವತಿಯರ ಹೆಸರುಗಳುಳ್ಳ ಒಂದು ಯಾದಿಯನ್ನು ಇಟ್ಟುಕೊಂಡಿದ್ದಳು" ಎಂದು ನ್ಯಾಯಾಲಯದಲ್ಲಿ ಪ್ರತಿವಾದಿ ವಕೀಲರು ವಾದಿಸಿದರು. ಈ ಯಾದಿಯಲ್ಲಿದ್ದ ಒಟ್ಟಾರೆ ಹೆಸರುಗಳು ೬೫೦ ಮಂದಿಯವು.

ನ್ಯಾಯಾಲಯದಲ್ಲಿ ವಿಚಾರಣೆ ಐದು ದಿನ ನಡೆಯಿತು. ಕೌಂಟೆಸ್ ತಪ್ಪೊಪ್ಪಿಕೊಂಡಳು. "ಆಯುಷ್ಯದ ಕೊನೆಯ ಕ್ಷಣದವರೆಗೂ ಆಕೆಯನ್ನು ಸೆಜ್‌ತೆ ಅರಮನೆಯೊಳಗೆ ಗೃಹಬಂಧನದಲ್ಲಿಡಬೇಕು" ಎಂದು ನ್ಯಾಯಾಧೀಶರು ತೀರ್ಪು ನೀಡಿದರು. ರಕ್ತಪಿಪಾಸಿನಿ ಕೌಂಟೆಸ್‌ಳಿಗೆ ಈ ಪೈಶಾಚಿಕ ಕೃತ್ಯದಲ್ಲಿ ನೆರವಾದ ಸಂಗಡಿಗರನ್ನು ಸಾರ್ವಜನಿಕವಾಗಿ ಚಿತ್ರಹಿಂಸೆ ನೀಡಿ ಕೊಲ್ಲಬೇಕೆಂದು ಇನ್ನೊಂದು ತೀರ್ಪು ನೀಡಿದರು. ಟ್ರಾನ್ಸಿಲ್ವೇನಿಯದ 'ಜೀವಂತ ರಕ್ತಪಿಶಾಚಿನಿ' ಸೆಜ್‌ತೆ ಅರಮನೆಯಲ್ಲಿ ಬಿಗಿ ಭದ್ರತೆಯ ಬಂಧನದಲ್ಲಿ ದಿನ ದೂಡತೊಡಗಿದಳು. ಅದೇ ಸ್ಥಿತಿಯಲ್ಲಿ ೧೬೧೪ರ ಆಗಸ್ಟ್ ೨೧ ರಂದು ಆಕೆ ತೀರಿಕೊಂಡಳು.

ಇಂಥದೇ ಇನ್ನೊಂದು ವಿಲಕ್ಷಣ ಕಥಾನಕ ೧೯ನೇ ಶತಮಾನದಲ್ಲಿ ಫ್ರಾನ್ಸಿನಲ್ಲಿ ನಡೆಯಿತು. ರಾತ್ರಿ ವೇಳೆ ಸ್ಮಶಾನವನ್ನು ಪ್ರವೇಶಿಸಿ ಶವಗಳನ್ನು ಗೋರಿಯಿಂದ ಕಿತ್ತು ತೆಗೆದು

ಬಗೆದು ತಿನ್ನುತ್ತಿದ್ದ ನಿಗೂಢ ನಿಶಾಚರನೊಬ್ಬನ ಭೀಭತ್ಸ ಕೃತ್ಯಕ್ಕೆ ಸಂಬಂಧಿಸಿದ ಕಥಾನಕವದು.

### ನಿಗೂಢ ನಿಶಾಚರ

ಫ್ರಾನ್ಸಿನ ಈ 'ರಕ್ತಪಿಶಾಚಿ' ಮೊದಲು ಕಾಣಿಸಿಕೊಂಡಿದ್ದು ೧೮೪೮ರಲ್ಲಿ. ಫ್ರಾನ್ಸಿನ ಪೆರ ಲಾಚಾಯ್ಸ್ ರುದ್ರಭೂಮಿ ಖ್ಯಾತ ಕಲಾವಿದರು, ಸಂಗೀತಗಾರರು, ಸಾಹಿತಿಗಳ ಸಮಾಧಿ ಸ್ಥಳ. ರಾತ್ರಿ ವೇಳೆ ಆಕೃತಿಯೊಂದರ ನೆರಳು ಈ ಗೋರಿಗಳ ಮಧ್ಯೆ ಅಡ್ಡಾಡುತ್ತಿರುವುದನ್ನು ಸ್ಮಶಾನದ ಕಾವಲುಗಾರರು ಗಮನಿಸಿದ್ದರು. ಸ್ಮಶಾನದ ಸುತ್ತ ನಿರ್ಮಿಸಿದ ಎತ್ತರದ

## ಮೂಢನಂಬಿಕೆ ವಿರುದ್ಧ ಹೋರಾಡಿದ ರಾಣಿ

ಅಜ್ಞಾನದ ಅಂಧಕಾರ, ಭಯ, ಮೂಢನಂಬಿಕೆಯ ಸುಳಿಯಲ್ಲಿ ಸಿಲುಕಿದ್ದ ೧೮ನೇ ಶತಮಾನದ ಯುರೋಪಿನಲ್ಲಿ ಓರ್ವ ವಿವೇಕಶಾಲಿ ಮಹಿಳೆ ಈ ಮೂಢನಂಬಿಕೆಯನ್ನು ತೊಡೆದುಹಾಕಲು ದಿಟ್ಟ ನಿರ್ಧಾರ ಕೈಗೊಂಡಳು. ಆಕೆ ಮರಿಯಾ ಥೇರೆಸಾ. ಹಂಗೆರಿ ಮತ್ತು ಬೊಹೇಮಿಯಾದ ರಾಣಿ. ೧೭೬೫ರಲ್ಲಿ ಮೊರೆವಿಯಾ ಸಂಸ್ಥಾನದಲ್ಲಿ ಜನ ವಾಂಪೈರ್‌ನ ಭೀತಿಯಿಂದ ತತ್ತರಿಸುತ್ತಿದ್ದರು.

ಚರ್ಚ್‌ನ ಧರ್ಮಗುರುಗಳ ಅನುಮತಿ ಪಡೆದು ಮೊರೆವಿಯಾದ ಜನ ಗೋರಿಗಳಿಂದ ಸಂಶಯಾಸ್ಪದ ಶವಗಳನ್ನು (ರಕ್ತಪಿಶಾಚಿಯಾಗಿ ರೂಪ ಪರಿವರ್ತನೆ ಹೊಂದಿವೆ ಎಂದು ಭಾವಿಸಲಾಗಿರುವಂಥವುಗಳನ್ನು) ಹೊರತೆಗೆದು ಅವುಗಳನ್ನು ಸುಟ್ಟುಹಾಕುತ್ತಿದ್ದರು. ಈ ವಿದ್ಯಮಾನಗಳ ಬಗ್ಗೆ ವಿವರವಾದ ತನಿಖೆ ನಡೆಸಲು ರಾಣಿ ಮರಿಯಾ ಥೆರೆಸಾ ಆಸ್ಥಾನ ವೈದ್ಯ ಹಾಗೂ ವಿಜ್ಞಾನಿ ಗೆರಾರ್ಡ್ ವಾನ್ ಸ್ವಿಟೆನ್ ಎಂಬಾತನನ್ನು ಕಳುಹಿಸುತ್ತಾಳೆ. ಒಣ ಮಣ್ಣು ಆವರಿಸಿದ ಗೋರಿಗಳಲ್ಲಿ ಬಿಗಿಯಾದ ಮುಚ್ಚಳ ಹಾಕಿದ ಶವಪೆಟ್ಟಿಗೆಗಳೊಳಗೆ ಕಿಂಚಿತ್ತಾದರೂ ಗಾಳಿ ಪ್ರವೇಶಿಸಲು ಅವಕಾಶವಿಲ್ಲದ ಕಾರಣ ಅವು ಕೊಳೆಯುವ ಪ್ರಕ್ರಿಯೆ ನಿಧಾನವಾಗುತ್ತಿದೆ ಎಂದು ಗೆರಾರ್ಡ್ ವಾನ್ ರಾಣಿಗೆ ವರದಿ ಸಲ್ಲಿಸಿದ. ಈ ಸಂದರ್ಭದಲ್ಲಿ ಆತ ಒಂದು ಪ್ರಕರಣವನ್ನು ಉಲ್ಲೇಖಿಸುತ್ತಾನೆ.

ಗೋಸಿನಾ ಪೊಲಾಕಿನ್ ಎಂಬ ಹೆಸರಿನ ಮಹಿಳೆಯ ಶವವನ್ನು ಪರಿಶೀಲಿಸಿದ ವೈದ್ಯಕೀಯ ತಜ್ಞರು, ಆಕೆಯ ಶವ ಕೊಳೆಯಲು ನಿರಾಕರಿಸಿದ ಕಾರಣ ಆಕೆ ರಕ್ತ ಪಿಶಾಚಿಯಾಗಿ ಪರಿವರ್ತನೆ ಹೊಂದಿರಬೇಕು ಎಂದು ಭಾವಿಸಿದರಂತೆ. ಎಂಥ ಘೋರ ಅಜ್ಞಾನವಿದು ಎಂದು ವಾನ್ ಸ್ವಿಟೆನ್ ತನ್ನ ವರದಿಯಲ್ಲಿ ಬರೆದಿದ್ದಾನೆ.

ಮೂಢನಂಬಿಕೆಗಳ ವಿರುದ್ಧ ಹೋರಾಡಲು ಪಣ ತೊಟ್ಟಿದ್ದ ರಾಣಿ ಮರಿಯಾ ಥೆರೆಸಾ ವ್ಯಾಂಪೈರ್‌ಗಳ ಭೀತಿಗೆ ಸಂಬಂಧಿಸಿದಂತೆ ೧೭೫೫ರಲ್ಲಿ ಒಂದು ರಾಜಶಾಸನವನ್ನು ಹೊರಡಿಸಿದಳು. ರಕ್ತ ಪಿಶಾಚಿಗಳು ಹಾಗೂ ಅಲೌಕಿಕ ದುಷ್ಟ ಶಕ್ತಿಗಳಿಗೆ ಸಂಬಂಧಿಸಿದ ಯಾವುದೇ ಪ್ರಕರಣ ಸಂಭವಿಸಿದರೂ ಅದನ್ನು ಜನ ಚರ್ಚ್‌ನ ಅಧಿಕಾರಿಗಳಿಗೆ ವರದಿ ಮಾಡಬಾರದು. ಅಂಥ ಪ್ರಕರಣಗಳನ್ನು ಮೊದಲು ಸರಕಾರದ ಗಮನಕ್ಕೆ ತರಬೇಕು. ಗೋರಿಗಳನ್ನು ಅಸ್ತವ್ಯಸ್ತಗೊಳಿಸಿ ಅಪವಿತ್ರಗೊಳಿಸಿದವರಿಗೆ ಕಠಿಣ ಶಿಕ್ಷೆ ನೀಡಲಾಗುವುದು ಎಂದು ಈ ರಾಜಶಾಸನ ಆದೇಶಿಸಿತು. ಆದರೆ ರಾಜಶಾಸನವನ್ನು ಯಾರೂ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ವಾಂಪೈರ್‌ಗಳ ಬೇಟೆ ಮುಂದುವರಿಯಿತು. ಈ ಶತಮಾನದ ಆರಂಭ ಅಂದರೆ ೧೯೧೨ ರಲ್ಲಿ ಹಂಗೆರಿಯ ರೈತರು ಸ್ಮಶಾನದಲ್ಲಿ ಹೂತಿರಿಸಿದ ಶವವೊಂದು ರಕ್ತ ಪಿಶಾಚಿಯಾಗಿ ಪರಿವರ್ತನೆ ಹೊಂದಿದೆ ಎಂಬ ಅನುಮಾನದಿಂದ ಅದನ್ನು ಅಗೆದು ಪರಿಶೀಲಿಸಿದ್ದರು.

- ಅ.ನಾ

ಪ್ರಾಕಾರವನ್ನು ಹಾರಿ ಈ ನಿಗೂಢ ವ್ಯಕ್ತಿ ಸ್ಮಶಾನದೊಳಗೆ ನುಸುಳಿ ಬರುತ್ತಿತ್ತು. ಮುಂಜಾನೆ ಬೆಳಕು ಹರಿದಾಗ ಗೋರಿಗಳು ಅಸ್ತವ್ಯಸ್ತವಾಗಿದ್ದು ಹೆಣಗಳು ಹೊರಗೆ ಎಸೆಯಲ್ಪಟ್ಟದ್ದು ಗೋಚರಿಸುತ್ತಿತ್ತು.

ಕೆಲವು ಹೆಣಗಳು ಹೊಟ್ಟೆ ಹರಿಯಲ್ಪಟ್ಟು ಕಿತ್ತ ಮಾಂಸ ಅಲ್ಲಲ್ಲಿ ಭೀಭತ್ಸವಾಗಿ ಕಾಣುತ್ತಿತ್ತು. ಕೆಲವು ದಿನಗಳ ಬಳಿಕ ಪ್ಯಾರಿಸ್ಸಿನ ಮೊಂಟೆ ಪಾರ್ನೆಸೆ ಸ್ಮಶಾನದಲ್ಲಿನ ಗೋರಿಗಳಲ್ಲಿ ಚಿರಶಾಂತಿ ಪಡೆಯುತ್ತಿದ್ದ ಹೆಣಗಳಿಗೂ ಇದೇ ಅವಸ್ಥೆಯಾಯಿತು. ಇದೆಲ್ಲ ಯಾವುದೋ 'ರಕ್ತಪಿಶಾಚಿ'ಯ ಕೈವಾಡವಿದ್ದಿರಬೇಕೆಂದು ಜನ ಭಾವಿಸಿ ಅಪರಾಧಿಯನ್ನು ಪತ್ತೆ ಹಚ್ಚಲೇಬೇಕೆಂದು ನಗರದ ಆಡಳಿತಾಧಿಕಾರಿಗಳನ್ನು ಒತ್ತಾಯಿಸಿದರು. ಒತ್ತಾಯಕ್ಕೆ ಮಣಿದು ಅಧಿಕಾರಿಗಳು ಸಮಸ್ಯೆಯ ಪರಿಹಾರಕ್ಕಾಗಿ ಮಿಲಿಟರಿಯ ನೆರವು ಕೋರಿದರು. ಸೈನಿಕರು ಒಂದು ರಾತ್ರಿ ಮೊಂಟೆ ಪಾರ್ನೆಸೆ ಸ್ಮಶಾನದಲ್ಲಿ ಅಡಗಿಕೊಂಡರು. ಅಲ್ಲಿನ ವಿದ್ಯಮಾನಗಳನ್ನು ಗಮನಿಸುವುದೇ ಅವರ ಉದ್ದೇಶ. ಮಧ್ಯರಾತ್ರಿಯ ವೇಳೆಗೆ ಅನುಮಾನಾಸ್ಪದ ರೀತಿಯಲ್ಲಿ ನೆರಳಿನಂಥ ಆಕೃತಿಯೊಂದು ಗೋರಿಕಲ್ಲುಗಳ ಮಧ್ಯೆ ಸುಳಿದಾಡುತ್ತಿರುವುದು ಅವರಿಗೆ ಗೋಚರಿಸಿತು. ತುಸು ಹೊತ್ತಿನಲ್ಲಿ ಶವ ಪೆಟ್ಟಿಗೆಯನ್ನು ಒಡೆಯುವ ಸದ್ದೂ ಕೇಳಿಬಂತು. ಸೈನಿಕರ ತಂಡದ ಮುಖ್ಯಸ್ಥ "ಸದ್ದು ಕೇಳಿ ಬಂದ ಕಡೆಗೆ" ಗುಂಡು ಹಾರಿಸಲು ಆದೇಶ ನೀಡಿದ. ಗುಂಡುಗಳು ಸಿಡಿದ ಸದ್ದು ಕೇಳುವ ಹೊತ್ತಿಗಾಗಲೇ ನೆರಳಿನಂಥ ಆ ಆಕೃತಿ ಸ್ಮಶಾನದ ಎತ್ತರದ ಪ್ರಾಕಾರವನ್ನು ಸರಸರನೆ ಏರಿ ಹಾರಿ ಕತ್ತಲಲ್ಲಿ ಕಣ್ಮರೆಯಾಯಿತು. ಬೆಳಗಾದಾಗ ಸ್ಮಶಾನದ ಪ್ರಾಕಾರದ ಸುತ್ತಮುತ್ತ ಸೈನಿಕರು ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರು. ಒಂದು ಕಡೆ ರಕ್ತದ ಹನಿಗಳು ಮತ್ತು ಹರಿದು ಹೋದ ಮಿಲಿಟರಿ ಸಮವಸ್ತ್ರ ಪತೆಯಾಯಿತು. ಆತ ತೀವ್ರವಾಗಿ ಗಾಯಗೊಂಡಿರಬೇಕು; ಅವನೊಬ್ಬ ಅಪರಿಚಿತ ಯೋಧನೇ ಇರಬೇಕೆಂದುಕೊಂಡರು ಸೈನಿಕರು. ಆತನ ಶೋಧ ಶುರುವಾಯಿತು. ಕೊನೆಗೆ ಸಾರ್ಜಂಟ್ ವಿಕ್ಟರ್ ಬರ್ಟ್ರಾಂಡ್ ಎಂಬ ಸೈನಿಕನನ್ನು ಮಿಲಿಟರಿ ಪೊಲೀಸರು ಬಂಧಿಸಿದರು. ಅವನ ಎಡ ತೋಳಿಗೆ ತೀವ್ರ ಗಾಯವಾಗಿತ್ತು. ನಿಗೂಢ ನಿಶಾಚರ ಆತನೇ ಎಂಬುದು ದೃಢಪಟ್ಟಿತು. ಪೊಲೀಸರ ಸತತ ತನಿಖೆಯ ಬಳಿಕ ಸಾರ್ಜಂಟ್ ವಿಕ್ಟರ್ ತಪ್ಪೊಪ್ಪಿಕೊಂಡ. "ಆದರೆ ನಾನೇನು ಮಾಡುತ್ತಿದ್ದೇನೆಂಬುದರ ಅರಿವೇ ನನಗಿರುತ್ತಿರಲಿಲ್ಲ"ಎಂದು ಸಾರ್ಜಂಟ್ ಬರ್ಟ್ರಾಂಡ್ ಉತ್ತರಿಸಿದ. ಒಂದು ರೀತಿಯ ಮಾನಸಿಕ ಕಾಯಿಲೆಯೆ ಅದು?

೧೮೪೯ರ ಜುಲೈ ೧೦ರಂದು ಪ್ಯಾರಿಸ್‌ನ ನ್ಯಾಯಾಲಯದಲ್ಲಿ ಸಾರ್ಜಂಟ್ ವಿಕ್ಟರ್ ಬರ್ಟ್ರಾಂಡ್‌ನ ವಿಚಾರಣೆ ಆರಂಭವಾಯಿತು. "ಸಾರ್ಜಂಟ್ ಬರ್ಟ್ರಾಂಡ್ ಚಿತ್ತ ವಿಕಾರದ ಸ್ಥಿತಿಯಲ್ಲಿ ಈ ಕಾರ್ಯವೆಸಗುತ್ತಿದ್ದ. ಜೀವಂತ ವ್ಯಕ್ತಿಗಳಿಗೆ ಆತನಿಂದ ಯಾವ ಹಾನಿಯೂ ಆಗಿಲ್ಲ. ಹೀಗಾಗಿ ಆತನಿಗೆ ಅತ್ಯಂತ ಕಠಿಣ ಶಿಕ್ಷೆ ನೀಡುವ ಅಗತ್ಯವಿಲ್ಲ" ಎಂದು ನಿರ್ಧರಿಸಿದ ನ್ಯಾಯಾಧೀಶರು ಒಂದು ವರ್ಷದ ಸಾದಾ ಕಾರಾಗೃಹವಾಸ ಶಿಕ್ಷೆ ವಿಧಿಸಿದರು. ಜೈಲಿನಲ್ಲಿದ್ದಾಗ ಬರ್ಟ್ರಾಂಡ್ ತಾನು ಎಸಗಿದ್ದ ಭೀಭತ್ಸ ಕೃತ್ಯದ ಬಗ್ಗೆ ಸವಿವರವಾದ ಟಿಪ್ಪಣಿಗಳನ್ನು ಬರೆಯುತ್ತಿದ್ದನಂತೆ.

### ಹಾನೊವರ್‌ನ ರಕ್ತಪಿಶಾಚಿ

ಜರ್ಮನಿಯ ಇತಿಹಾಸ ಪ್ರಸಿದ್ಧ 'ಹಾನೊವರ್ ವಾಂಪೈರ್' ಬಗ್ಗೆಯೂ ಮೈ ನಡುಗಿಸುವ ಭೀಭತ್ಸ ವೃತ್ತಾಂತಗಳು ದಾಖಲಿಸಲ್ಪಟ್ಟಿವೆ. ಜರ್ಮನಿಯ ಫ್ರಿಟ್ಜ್ ಹಾರ್ಮನ್ ೧೯೨೦ರ

ದಶಕದಲ್ಲಿ 'ಹಾನೋವರ್ ವಾಂಪೈರ್' ಎಂದೇ ಹೆಸರಾಗಿದ್ದ. ಜರ್ಮನಿಯ ಔದ್ಯಮಿಕ ನಗರ ಹಾನೋವರ್‌ನಲ್ಲಿ ರೈಲ್ವೇ ಗಾರ್ಡ್ ಒಬ್ಬನ ಮಗನಾಗಿ ಜನಿಸಿದವ ಹಾರ್ಮನ್. ಬಾಲ್ಯದಿಂದಲೇ ಆತ ಮಾನವ ವಿರೋಧಿ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದ. ಎಳೆಯ ಮಕ್ಕಳಿಗೆ ಹೊಡೆದು ಚಿತ್ರಹಿಂಸೆ ನೀಡುವುದೆಂದರೆ ಆತನಿಗೇನೋ ವಿಚಿತ್ರ ಖುಷಿ. ಹಾರ್ಮನ್ ಮನೋರೋಗ ಪೀಡಿತನಾಗಿ ಈ ರೀತಿ ವರ್ತಿಸುತ್ತಿರಬೇಕು ಎಂದು ಭಾವಿಸಿದ ಅವನ ತಂದೆ ಅವನನ್ನು ಹುಚ್ಚಾಸ್ಪತ್ರೆಗೆ ಸೇರಿಸಿದರು. ಕೆಲವು ದಿನ ಹುಚ್ಚಾಸ್ಪತ್ರೆಯಲ್ಲಿ ಕಳೆದ ಹಾರ್ಮನ್ ಅಲ್ಲಿಂದ ತಪ್ಪಿಸಿಕೊಂಡು ಮನೆಗೆ ಹಿಂತಿರುಗಿದ. ಮನೆಯಲ್ಲಿ ಹಾರ್ಮನ್‌ನ ಉಪಟಳ ತಡೆಯಲಾರದೆ ಅವನ ತಂದೆ ಅವನನ್ನು ಸೇನೆಗೆ ಸೇರಿಸಿದ. ಅಲ್ಲಿ ಒಂದು ವರ್ಷ ಸೇವೆ ಸಲ್ಲಿಸಿದ ಬಳಿಕ ಅನಾರೋಗ್ಯದ ಕಾರಣದಿಂದ ಬಿಡುಗಡೆಯಾಗಿ ಮತ್ತೆ ಹಾರ್ಮನ್ ತನ್ನ ಊರಿಗೆ ಹಿಂತಿರುಗಿದ. ಊರಿಗೆ ಮರಳಿದ ಬಳಿಕ ಸಣ್ಣಪುಟ್ಟ ಕಳ್ಳತನ ದರೋಡೆ ಪ್ರಕರಣಗಳಲ್ಲಿ ಶಾಮೀಲಾಗಿ ಆತ ಕೆಲ ಕಾಲ ಕಾರಾಗೃಹವಾಸ ಶಿಕ್ಷೆಯನ್ನು ಅನುಭವಿಸಬೇಕಾಯಿತು. ೧೯೧೮ರಲ್ಲಿ ಜೈಲಿನಿಂದ ಬಿಡುಗಡೆಯಾದ ಹಾರ್ಮನ್ ಹಾನೋವರ್‌ನಲ್ಲಿ ಗೌರವಾನ್ವಿತ ಸಭ್ಯ ಜೀವನ ಸಾಗಿಸುವ ಉದ್ದೇಶದಿಂದ ಸಣ್ಣ ಅಂಗಡಿಯೊಂದನ್ನು



ರೈತ ಹುಡುಗಿಯರನ್ನು ಬೆತ್ತಲೆಗೊಳಿಸಿ ಚಿತ್ರಹಿಂಸೆ ನೀಡುವುದನ್ನು ನೋಡಿ ಆನಂದಿಸುತ್ತಿರುವ ಎಲಿಜಬೆತ್ ಬಾತೊರಿ. ೧೯ನೇ ಶತಮಾನದ ಒಂದು ವರ್ಣಚಿತ್ರ.

ತೆರೆದ. ಈ ಅಂಗಡಿಯಲ್ಲಿ ಕರಿದ ತಿಂಡಿಗಳು, ಬೇಯಿಸಿದ ಮಾಂಸ ಮಾರಲ್ಪಡುತ್ತಿತ್ತು. ಪ್ರಥಮ ಜಾಗತಿಕ ಸಮರದಲ್ಲಿ ಜರ್ಮನಿ ಸೋಲು ಅನುಭವಿಸಿದ ಬಳಿಕ ಜರ್ಮನಿಯ ನಗರಗಳಲ್ಲಿ ಜೀವನಾವಶ್ಯಕ ಆಹಾರ ವಸ್ತುಗಳ ಕೊರತೆಯುಂಟಾಯಿತು. ಈ ಸಂದರ್ಭದಲ್ಲಿ ಹಾರ್ಮನ್‌ನ ಅಂಗಡಿಯಲ್ಲಿ ಒಳ್ಳೆ ವ್ಯಾಪಾರ ವಹಿವಾಟು ಜರುಗುತ್ತಿತ್ತು.

ಮಾಂಸದ ಮಾರಾಟದೊಂದಿಗೆ ಆತ ಇನ್ನೂ ಒಂದು ಉಪದಂಧೆಯನ್ನೂ ಕೈಗೊಂಡಿದ್ದ. ನಗರದ ಸಣ್ಣಪುಟ್ಟ ಕಳ್ಳ ಕಾಕರು, ಖದೀಮರು, ಸಮಾಜಘಾತುಕ ವ್ಯಕ್ತಿಗಳ ಬಗ್ಗೆ ರಹಸ್ಯವಾಗಿ ಪೊಲೀಸರಿಗೆ ಮಾಹಿತಿ ನೀಡುವುದು. ಹೀಗಾಗಿ ಪೊಲೀಸರೊಂದಿಗೆ ಉತ್ತಮ ಸ್ನೇಹ ಸಂಬಂಧ ಅವನಿಗಿದ್ದಿತು.

ಅಂದಿನ ದಿನಗಳಲ್ಲಿ ಹಾನೋವರ್‌ನ ಮುಖ್ಯ ರೈಲ್ವೇ ಸ್ಟೇಶನ್ ಗ್ರಾಮೀಣ ಪ್ರದೇಶಗಳಿಂದ ನೌಕರಿ ಹುಡುಕುತ್ತ ನಗರಕ್ಕೆ ಬಂದ ಮುಗ್ಧ ಹುಡುಗರು, ಯುವಕರಿಂದ ತುಂಬಿರುತ್ತಿತ್ತು. ಯುದ್ಧದ ನಂತರದ ಅಭಾವ ಪರಿಸ್ಥಿತಿ ಅವರನ್ನು ಈ ಸ್ಥಿತಿಗೆ ತಳ್ಳಿತ್ತು.

ಹಾರ್ಮನ್ ರಾತ್ರಿ ವೇಳೆ ರೈಲ್ವೇ ಸ್ಟೇಶನ್‌ಗೆ ಬಂದು ಅಲ್ಲಿ ನಿರೀಕ್ಷಣಾ ಕೊಠಡಿಗಳಲ್ಲಿ ರೈಲಿಗಾಗಿ ಕಾಯುತ್ತಾ ತೂಕಡಿಸುತ್ತಾ ಕುಳಿತಿರುವ ಅಥವಾ ನಿದ್ರಿಸುತ್ತಿರುವ ಅನೇಕ ಪ್ರಯಾಣಿಕರಲ್ಲಿ ಯುವಕರನ್ನು ಆರಿಸಿ, ಅವರ ಟಿಕೆಟ್ ಪರೀಕ್ಷಿಸುವ ಸೋಗು ಹಾಕುತ್ತಿದ್ದ. ಅವರ ಹುಟ್ಟೂರು, ಅವರ ಹೆಸರು, ಅವರ ಪ್ರಯಾಣದ ಗುರಿ ಇವೇ ಮುಂತಾದ ಕೆಣಕುವ ಪ್ರಶ್ನೆಗಳನ್ನು ಕೇಳುತ್ತಿದ್ದ. ಅನಂತರ ಇದ್ದಕ್ಕಿದ್ದಂತೆಯೇ ತುಂಬಾ ಉದಾರ ಮನಸ್ಸಿನಿಂದ ಆ ಹತಾಶ ಹುಡುಗರಿಗೆ ಊಟದ ವ್ಯವಸ್ಥೆ ಕಲ್ಪಿಸಿ, ರಾತ್ರಿ ಉಳಿದುಕೊಳ್ಳಲು ತನ್ನ ಅಂಗಡಿಯ ಒಂದು ಪಾರ್ಶ್ವದಲ್ಲಿ ಸ್ಥಳಾವಕಾಶ ಒದಗಿಸುವ ಭರವಸೆ ನೀಡಿ ತನ್ನೊಂದಿಗೆ ಕರೆದೊಯ್ಯುತ್ತಿದ್ದ. ಹಾರ್ಮನ್ ತಮಗೆ ನೀಡಿದ ಆತಿಥ್ಯಕ್ಕೆ ತಾವು ಎಂಥ ಬೆಲೆ ತೆರಬೇಕಾದೀತೆಂಬುದು ಆ ಬಡಪಾಯಿಗಳಿಗೆ ಅರಿವಿರುತ್ತಿರಲಿಲ್ಲ. ಅದು ಗೊತ್ತಿರುತ್ತಿದ್ದರೆ ಖಂಡಿತವಾಗಿಯೂ ಅವರು ಹಾರ್ಮನ್‌ನ ಸಂಗಡ ಹೋಗುತ್ತಿರಲಿಲ್ಲ. ತನ್ನ ಅಂಗಡಿಯ ಹಿಂಭಾಗದಲ್ಲಿ ಒಂದು ಕೊಠಡಿಗೆ ಈ ಹುಡುಗರನ್ನು ಕರೆದೊಯ್ದು, ಅವರ ಕತ್ತಿಗೆ ಬಾಯಿ ಹಾಕಿ ಕಚ್ಚಿ ರಕ್ತ ಹೀರುತ್ತಿದ್ದ.

ಹಾರ್ಮನ್‌ನ ಈ ಪೈಶಾಚಿಕ ರಕ್ತಪಿಪಾಸುತನಕ್ಕೆ ಬಲಿಯಾದವರಲ್ಲಿ ತನ್ನ ಮನೆ ಬಿಟ್ಟು ಓಡಿ ಬಂದ ೧೭ರ ಹರೆಯದ ಫ್ರಿಡೆಲ್ ರೋತೆ ಹೆಸರು ಪ್ರಮುಖ. ಇವನ ಹತ್ಯಾ ಪ್ರಕರಣದಿಂದಲೇ ಹಾರ್ಮನ್‌ನ ಪೈಶಾಚಿಕತೆ ಬಯಲಿಗೆ ಬಂದದ್ದು. ಹಾರ್ಮನ್‌ನ ಬಲೆಗೆ ಬೀಳುವ ಮೊದಲು ಫ್ರಿಡೆಲ್ ತನ್ನ ತಾಯಿಗೆ ಬರೆದ ಒಂದು ಪತ್ರದಲ್ಲಿ ತಾನು ಹಾನೊವರ್‌ಗೆ ಹೋಗುತ್ತಿರುವುದಾಗಿ ತಿಳಿಸಿದ್ದ. ಮಗನ ಪತ್ರ ತಲುಪಿದ ಕೂಡಲೇ ಅವನ ತಾಯಿ ಮಗನನ್ನು ಹುಡುಕಿಕೊಂಡು ಹಾನೋವರ್‌ಗೆ ಬಂದಿಳಿದಳು. ಪೊಲೀಸರನ್ನು ಸಂಪರ್ಕಿಸಿ ತನ್ನ ಮಗ ಯಾರೋ ಒಬ್ಬ ಪತ್ತೇದಾರನ ಮನೆಯಲ್ಲಿ ಉಳಿದುಕೊಂಡಿದ್ದಾನೆಂದು ಪೊಲೀಸರಿಗೆ ತಿಳಿಸಿದಳು. ಆ ಪತ್ತೇದಾರ ಯಾರೆಂಬುದು ಪೊಲೀಸರಿಗೆ ಗೊತ್ತಿತ್ತು. ಅವರು ಹಾರ್ಮನ್‌ನ ನಿವಾಸವನ್ನು ಮುತ್ತಿ ಝಡತಿ ಮಾಡಿದಾಗ ಫ್ರಿಡೆಲ್ ರೋತೆಯ ತಲೆ ಕತ್ತರಿಸಲ್ಪಟ್ಟ ಶವವೊಂದು ದೊರಕಿತು. ಹಾರ್ಮನ್‌ನ ಮನೆಯನ್ನು ಪೂರ್ಣ ಶೋಧಿಸಿದಾಗ ಫ್ರಿಡೆಲ್‌ನ ತಲೆ ಅಡುಗೆ ಕೋಣೆಯ ಒಲೆಯ ಹಿಂಭಾಗದಲ್ಲಿ ಹಳೆಯ ಪತ್ರಿಕೆಯೊಂದರಲ್ಲಿ ಸುತ್ತಿ ಇರಿಸಿದ್ದು ಪೊಲೀಸರಿಗೆ ಗೋಚರಿಸಿತು. ಪಾತಕಿಯನ್ನು

ಪೊಲೀಸರು ಬಂಧಿಸಿದರು.

ಅದುವರೆಗೆ ಫ್ರಿಟ್ಜ್ ಹಾರ್ಮನ್ ಸುಮಾರು ೨೭ ಯುವಕರನ್ನು ಕೊಂದು ಅವರ ಬಿಸಿ ನೆತ್ತರು ಕುಡಿದಿದ್ದನೆಂಬುದು ಪೊಲೀಸರ ಗಮನಕ್ಕೆ ಬಂತು. ತಾನು ಕೊಂದ ಯುವಕರ ದೇಹಗಳನ್ನು ಕತ್ತರಿಸಿ ಮನೆಯ ಹಿಂಭಾಗದಲ್ಲಿ ಸ್ವಲ್ಪ ದೂರದಲ್ಲಿ ಹರಿಯುತ್ತಿದ್ದ ನದಿಯಲ್ಲಿ ಆತ ತೇಲಿಬಿಡುತ್ತಿದ್ದನಂತೆ. ಈ ನದಿಯ ಒಂದೆಡೆ ೧೯೨೪ರ ಬೇಸಿಗೆಯಲ್ಲಿ ಮಾನವ ಮೂಳೆಗಳು, ತಲೆ ಬುರುಡೆಗಳು ಪತ್ತೆಯಾಗಿ ಭಾರೀ ಕೋಲಾಹಲವೆದ್ದಿತು. ಫ್ರಿಟ್ಜ್ ಹಾರ್ಮನ್ ತಾನು ಕೊಂದ ಯುವಕರ ಶರೀರದ ಭಾಗಗಳನ್ನು ಚೆನ್ನಾಗಿ ಅರೆದು ಹಿಟ್ಟು ಮಾಡಿ ಬೇಯಿಸಿ ತಿನ್ನುತ್ತಿದ್ದನಷ್ಟೇ ಅಲ್ಲ, ಗಿರಾಕಿಗಳಿಗೆ "ಬೇಯಿಸಿದ ಪ್ರಾಣಿಯ ಮಾಂಸ"ವೆಂದು ನಂಬಿಗೆ ಹುಟ್ಟಿಸಿ ಮಾರುತ್ತಿದ್ದನಂತೆ!

೧೯೨೪ರಲ್ಲಿ ಫ್ರಿಟ್ಜ್ ಹಾರ್ಮನ್‌ನ ವಿಚಾರಣೆ ಹಾನೊವರ್ ನ್ಯಾಯಾಲಯದಲ್ಲಿ ಆರಂಭವಾಯಿತು. ಯಾವುದೋ ಸಮಾಧಿ ಸ್ಥಿತಿಯಲ್ಲಿದ್ದಾಗ ತನಗೆ ಅರಿವಿಲ್ಲದೇ ಈ ಪಾತಕವನ್ನು ಎಸಗುತ್ತಿದ್ದುದಾಗಿ ನ್ಯಾಯಾಧೀಶರ ಮುಂದೆ ಹೇಳಿ "ನಾನು ನಿರಪರಾಧಿ" ಎಂದು ಗೋಗರೆದ. ಆದರೆ, "ಯುವಕರ ಕತ್ತುಗಳನ್ನು ಬಿಗಿಯಾಗಿ ಹಿಡಿದು ಕಚ್ಚಿ ರಕ್ತ ಕುಡಿಯಬೇಕಾದರೆ, ವಿಶೇಷ ಪ್ರಯತ್ನ, ಏಕಾಗ್ರತೆ ಅತ್ಯವಶ್ಯ. ಸಮಾಧಿ ಸ್ಥಿತಿಯಲ್ಲಿ ಅದು ಸಾಧ್ಯವೇ ಇಲ್ಲ" ಎಂದು ಹೇಳಿದ ನ್ಯಾಯಾಧೀಶರು ಹಾರ್ಮನ್‌ಗೆ ಮರಣದಂಡನೆ ಶಿಕ್ಷೆ ವಿಧಿಸಿದರು.



'ನೆತ್ತರು ದೆವ್ವ'ದ ಹಾವಳಿಯಿಂದ ಶವವನ್ನು ರಕ್ಷಿಸಲು ಶವಸಂಸ್ಕಾರ ತಂಡದವರ ಪ್ರಯತ್ನ. ೧೯ನೇ ಶತಮಾನದ ಭಿತ್ತಿಚಿತ್ರ.

೧೯೨೫ರ ಏಪ್ರಿಲ್ ೧೫ರಂದು ಹರಿತವಾದ ಖಡ್ಗದಿಂದ ಫ್ರಿಟ್ಜ್ ಹಾರ್ಮನ್‌ನ ಕತ್ತು ಕತ್ತರಿಸಿ ಮರಣದಂಡನೆ ಶಿಕ್ಷೆಯನ್ನು ಜಾರಿಗೊಳಿಸಲಾಯಿತು. ಇಪ್ಪತ್ತನೇ ಶತಮಾನದ ಯುರೋಪ್‌ನಲ್ಲಿ ಇದು ಅಪರೂಪವೆನಿಸಿದ್ದ ಮರಣದಂಡನೆಯ ವಿಧಾನವಾಗಿತ್ತು.

## ವಾಂಪೈರ್ ಸಾಹಿತ್ಯ

ಹದಿನೆಂಟು-ಹತ್ತೊಂಬತ್ತನೇ ಶತಮಾನದ ಅವಧಿಯಲ್ಲಿ ರಕ್ತಪಿಶಾಚಿಗಳ ರೋಚಕ ಕಥಾನಕಗಳನ್ನು ಒಳಗೊಂಡ ಸಾಹಿತ್ಯ ಕೃತಿಗಳ ಪ್ರಕಟಣೆ ಯುರೋಪಿನಲ್ಲಿ ಆರಂಭವಾಯಿತು. ಕ್ರಮೇಣ ಹಾಲಿವುಡ್ ಚಿತ್ರ ಬ್ರಹ್ಮರು ರಕ್ತಪಿಶಾಚಿಗಳ ಭೀಭತ್ಸ ಚಲನಚಿತ್ರಗಳ ನಿರ್ಮಾಣದಲ್ಲಿ ಆಸಕ್ತಿ ವಹಿಸಿದ್ದರು. ವಾಂಪೈರ್‌ಗಳ ಕುರಿತು ಪ್ರಕಟವಾದ ಕೃತಿಗಳಲ್ಲಿ ಉಲ್ಲೇಖಾರ್ಹವಾದ ಮೂರು ಪ್ರಮುಖ ಕೃತಿಗಳೆಂದರೆ ಡಾ. ಜಾನ್ ಪೋಲಿಡೋರಿ ಅವರ "ದಿ ವಾಂಪೈರ್", ಎಡ್ವರ್ಡ್ ಲಾಯ್ಡ್ ಅವರ "ವರ್ನೆ ದಿ ವಾಂಪೈರ್" ಅಥವಾ "ದಿ ಫೀಸ್ಟ್ ಆಫ್ ಬ್ಲಡ್" ಹಾಗೂ ಬ್ರಾಮ್ ಸ್ಟೋಕರ್‌ನ ಜಗದ್ವಿಖ್ಯಾತ ಭಯಾನಕ ಕಾದಂಬರಿ "ದಿ ಕೌಂಟ್ ಡ್ರಾಕ್ಯುಲಾ ಆಫ್ ಟ್ರಾನ್ಸಿಲ್ವೇನಿಯಾ."

ಡಾ. ಜಾನ್ ಪೋಲಿಡೋರಿ ಇಂಗ್ಲೆಂಡಿನ ಸುಪ್ರಸಿದ್ಧ ಕವಿ ಲಾರ್ಡ್ ಬೈರನ್‌ನ ಖಾಸಗಿ ವೈದ್ಯರಾಗಿದ್ದರು. ೧೮೧೬ರ ಬೇಸಿಗೆಯ ರಜಾ ದಿನಗಳಲ್ಲಿ ಜಾನ್ ಪೋಲಿಡೋರಿ, ಕವಿ ಬೈರನ್ ಹಾಗೂ ಇಂಗ್ಲೆಂಡಿನ ಇನ್ನೋರ್ವ ಸುಪ್ರಸಿದ್ಧ ರೊಮ್ಯಾಂಟಿಕ್ ಕವಿ ಶೆಲ್ಲಿ ಮತ್ತು ಅವನ ಪತ್ನಿ ಮೇರಿ ಸ್ವಿಟ್ಜರ್‌ಲ್ಯಾಂಡಿನ ವಿಶ್ರಾಂತಿ ಧಾಮದಲ್ಲಿ ಕಳೆಯುತ್ತಿದ್ದರು.

ಆ ಸಂದರ್ಭದಲ್ಲಿ ಬದುಕಿನ ಏಕತಾನತೆಯ ಬೇಸರವನ್ನು ನೀಗಲು ವಿಹಾರಾರ್ಥವಾಗಿ ಬಂದಿದ್ದ ಈ ತಂಡದವರಲ್ಲಿ ಪ್ರತಿಯೊಬ್ಬನೂ ಒಂದೊಂದು ಭಯಾನಕ ಕತೆ ಹೇಳಬೇಕೆಂದು ಕವಿ ಬೈರನ್ ಸಲಹೆ ಮಾಡಿದ. ಈ ಸಲಹೆಯ ಮೇರೆಗೆ ಮೇರಿ ಶೆಲ್ಲಿಯ ಸುಪ್ರಸಿದ್ಧ ಕೃತಿ "ಫ್ರಾಂಕೆನ್‌ಸ್ಟೈನ್" ಬೆಳಕಿಗೆ ಬಂದಿತು. ಬೈರನ್ ವಾಂಪೈರ್ ಕತೆಯೊಂದರ ಚೌಕಟ್ಟು ರೂಪಿಸಿದ್ದ. ಆದರೆ ಕತೆಯನ್ನು ಅವನಿಂದ ಪೂರ್ಣಗೊಳಿಸಲಾಗಲಿಲ್ಲ. ಹೀಗಾಗಿ ಜಾನ್ ಪೋಲಿಡೋರಿ ಆ ಕತೆಯನ್ನು ಪೂರ್ಣಗೊಳಿಸಿದ. ಯುರೋಪಿನಾದ್ಯಂತ ಬಹಳಷ್ಟು ಜನ ಆ ಕತೆಯನ್ನು ಓದಿ ಮೆಚ್ಚಿಕೊಂಡಿದ್ದರು.

ಜಾನ್ ಪೊಲಿಡೊರಿಯ ಕೃತಿ ಪ್ರಕಟವಾಗಿ ೩೦ ವರ್ಷಗಳ ತರುವಾಯ ಎಡ್ವರ್ಡ್ ಲಾಯ್ಡ್ ಎಂಬ ವಿದ್ವಾಂಸ ೮೬೮ ಪುಟಗಳಷ್ಟು ವಿಸ್ತಾರವಾದ "ವರ್ನೆ ವಾಂಪೈರ್"ನ ಕಥಾನಕವನ್ನು ಪ್ರಕಟಿಸಿದ. ೧೮೪೭ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ೨೨೨ ಅಧ್ಯಾಯಗಳಿದ್ದು ಹಲವಾರು ಲೇಖಕರು ವಾಂಪೈರ್ ಪರಿಕಲ್ಪನೆಗೆ ಸಂಬಂಧಿಸಿದಂತೆ ಬರೆದ ಲೇಖನಗಳನ್ನು ಸಂಕಲಿಸಲಾಗಿದೆ.

ವಾಂಪೈರ್ ಅಥವಾ ರಕ್ತಪಿಶಾಚಿಗಳ ರೋಚಕ ಕಥಾನಕಕ್ಕೆ ಸಂಬಂಧಿಸಿದಂತೆ ಇಡೀ ಜಗತ್ತಿನ ಗಮನ ಸೆಳೆದ ಏಕೈಕ ಕೃತಿ ಎಂದರೆ ೧೮೯೭ರಲ್ಲಿ ಪ್ರಥಮ ಬಾರಿ ಪ್ರಕಟವಾದ ಬ್ರಾಮ್ ಸ್ಟೋಕರ್‌ನ "ಕೌಂಟ್ ಡ್ರಾಕುಲಾ ಆಫ್ ಟ್ರಾನ್ಸಿಲ್ವೇನಿಯಾ" ಕಾದಂಬರಿ.

ಮೂಲತಃ ಬ್ರಾಮ್ ಸ್ಟೋಕರ್ ಐಯರ್ಲೆಂಡ್‌ನವ. ವೃತ್ತಿಯಿಂದ ಗುಮಾಸ್ತನಾಗಿದ್ದ. ಅನಂತರದ ಕಾಲದಲ್ಲಿ ಲಂಡನ್ ರಂಗಭೂಮಿಯ ನಿರ್ದೇಶಕನಾಗಿಯೂ ಕೆಲಸ ಮಾಡಿದ್ದ. ಲೇಖನ ವ್ಯವಸಾಯ ಅವನ ಅಚ್ಚುಮೆಚ್ಚಿನ ಹವ್ಯಾಸವಾಗಿತ್ತು. ಕೆಲವು ಗಾಥಿಕ್ ಕಾದಂಬರಿಗಳನ್ನೂ ಆತ ಬರೆದಿದ್ದಾಗ ಒಮ್ಮೆ ಬುಡಾಪೆಸ್ಟ್ ವಿಶ್ವವಿದ್ಯಾಲಯದ ಪ್ರೊಫೆಸರ್



ಬ್ರಾಮ್ ಸ್ಟೋಕರ್‌ನ ಸುಪ್ರಸಿದ್ಧ ಕೃತಿ 'ಕೌಂಟ್ ಡ್ರಾಕ್ಯುಲಾ'ನನ್ನು ನಿರೂಪಿಸುವ ಒಂದು ರೇಖಾ ಚಿತ್ರ.

ಆರ್ಮಿನಿಯಸ್ ವಾಂಟೆರಿ ಲಂಡನ್ ಥಿಯೇಟರ್‌ನಲ್ಲಿ ನಾಟಕವೊಂದನ್ನು ನೋಡಲು ಬಂದಿದ್ದಾಗ ಭೋಜನದ ವೇಳೆ ಲೇಖಕ ನಿರ್ದೇಶಕ ಸ್ಟೋಕರ್‌ನನ್ನು ಭೇಟಿಯಾದರು. ಮಾತುಕತೆಯ ಸಂದರ್ಭದಲ್ಲಿ ಅವರು ೧೫ನೇ ಶತಮಾನದ ಟ್ರಾನ್ಸಿಲ್ವೇನಿಯಾದ ಸರ್ವಾಧಿಕಾರಿ ವ್ಲಾದ್ ತೆಪೆಯ ಕ್ರೂರ ಆಳ್ವಿಕೆಯ, ಹಿಂಸಾಚಾರದ ಕಥೆಗಳನ್ನು ಸ್ಟೋಕರ್‌ಗೆ ಹೇಳಿದರು. ಡ್ರ್ಯಾಕುಲಾ ಕಾದಂಬರಿಯ ರೂಪುರೇಷೆಗೆ ಈ ಕಥೆಗಳು ಹಿನ್ನೆಲೆಯಾದುವು. ಅನಂತರ ಸ್ಟೋಕರ್ ವ್ಲಾದ್ ತೆಪೆಯ ರಕ್ತರಂಜಿತ ಕ್ರೂರ ಆಳ್ವಿಕೆಗೆ ಸಂಬಂಧಿಸಿದಂತೆ ಪರಿಪೂರ್ಣ ಮಾಹಿತಿಗಳನ್ನು ಬ್ರಿಟಿಶ್ ಮ್ಯೂಸಿಯಂನಲ್ಲಿ ಸಂಗ್ರಹಿಸಿದ.

ಹೀಗೆ ಸ್ಟೋಕರ್ ರಕ್ತಪಿಪಾಸು ಕೌಂಟ್ ಡ್ರಾಕ್ಯುಲಾ ಪಾತ್ರವನ್ನು ಸೃಷ್ಟಿಸಿದ. ಸ್ಟೋಕರ್‌ನ ಡ್ರಾಕ್ಯುಲಾ ಓರ್ವ ಶ್ರೀಮಂತ ಮಹನೀಯ. ಕೆಲವು ನಿಗೂಢ ಕಾರಣಗಳಿಗಾಗಿ ಆತ ಇಂಗ್ಲೆಂಡಿನಲ್ಲಿ ಆಸ್ತಿಪಾಸ್ತಿ ಖರೀದಿಸಲು ಬಯಸುತ್ತಾನೆ.

ರಕ್ತಪಿಶಾಚಿ ಕೌಂಟ್ ಡ್ರಾಕ್ಯುಲಾ ಈ ಕಾರ್ಯಭಾರ ಈಡೇರಿಸಿಕೊಳ್ಳಲು ಬ್ರಿಟನ್ನಿನಲ್ಲಿ ಜಮೀನು ಆಸ್ತಿಪಾಸ್ತಿ ಖರೀದಿ ವ್ಯವಹಾರ ನಡೆಸುವ ಜೊನಾಥನ್ ಹಾರ್ಕರ್ ಎಂಬಾತನ ಸಹಾಯ ಪಡೆಯುತ್ತಾನೆ. ಕ್ರಮೇಣ ಈ ಹಾರ್ಕರ್ ಟ್ರಾನ್ಸಿಲ್ವೇನಿಯಾದಲ್ಲಿರುವ ಕೌಂಟ್ ಡ್ರಾಕ್ಯುಲಾನ ಭವ್ಯ ಎಸ್ಟೇಟಿನಲ್ಲಿ ಅನೇಕ ನಿಗೂಢ ವಿದ್ಯಮಾನಗಳನ್ನು ಗಮನಿಸುತ್ತಾನೆ. ಕೌಂಟ್ ಡ್ರಾಕ್ಯುಲಾ ಕುಲೀನ ಕುಟುಂಬಗಳ ಯುವತಿಯರನ್ನು ಲೈಂಗಿಕವಾಗಿ ಶೋಷಿಸಿ ಅವರ ಕತ್ತನ್ನು ಕಚ್ಚಿ ರಕ್ತ ಹೀರುತ್ತಿದ್ದ. ಒಮ್ಮೆ ಹಾರ್ಕರ್‌ನ ಪ್ರಿಯತಮೆಯೂ ಡ್ರಾಕ್ಯುಲಾನ ಪೈಶಾಚಿಕತೆಗೆ ಗುರಿಯಾಗುತ್ತಾಳೆ. ಹಾರ್ಕರ್‌ನನ್ನು ಡ್ರಾಕ್ಯುಲಾ ತನ್ನ ಎಸ್ಟೇಟ್‌ನಲ್ಲಿ ಬಂಧಿಸಿಡುತ್ತಾನೆ. ಅಲ್ಲಿಂದ ಹೇಗೋ ತಪ್ಪಿಸಿಕೊಂಡ ಹಾರ್ಕರ್ ಸ್ಥಳೀಯ ಪಾದ್ರಿಯ ನೆರವಿನಿಂದ ಡ್ರಾಕ್ಯುಲಾನ ರಹಸ್ಯ ಭೇದಿಸಲೇಬೇಕೆಂದು ನಿರ್ಧರಿಸುತ್ತಾನೆ. ವಿಶ್ವವಿದ್ಯಾಲಯದ ಪ್ರೊಫೆಸರ್ ಒಬ್ಬರು ರಕ್ತಪಿಶಾಚಿಗಳಿಗೆ ಸಂಬಂಧಿಸಿದಂತೆ ವಿವರವಾದ ಮಾಹಿತಿಗಳನ್ನು ಹಾರ್ಕರ್‌ಗೆ ಒದಗಿಸುತ್ತಾರೆ. ಹಗಲಿನ ವೇಳೆ ವಾಂಪೈರ್‌ಗಳು ಗೋರಿಯಿಂದ ಮಿಸುಕಾಡುವುದಿಲ್ಲ. ಸೂರ್ಯನ ಬೆಳಕನ್ನು ಅವು ದ್ವೇಷಿಸುತ್ತವೆ. ರಾತ್ರಿ ವೇಳೆ ಗೋರಿಯಿಂದ ಎದ್ದು ರಕ್ತ ಕುಡಿಯಲು ಬಲಿಪಶುಗಳನ್ನು ಅರಸಿಕೊಂಡು ಅಡ್ಡಾಡುತ್ತವೆ. ಇಷ್ಟು ವಿವರಗಳನ್ನು ತಿಳಿದ ಬಳಿಕ ಜೊನಾಥನ್ ಹಾರ್ಕರ್ ಮತ್ತು ಸ್ಥಳೀಯ ಪಾದ್ರಿ ಡ್ರಾಕ್ಯುಲಾನ ಗೋರಿಯನ್ನು ಪತ್ತೆ ಹಚ್ಚಿ ಅವನ ಶವ ಪುನಶ್ಚೇತನಗೊಳ್ಳುವ ಮೊದಲೇ ಅದರ ಎದೆಗೆ ಹರಿತವಾದ ಚಾಕುವಿನಿಂದ ಇರಿದು ಮತ್ತೆಂದಿಗೂ ಮೇಲೇಳದಂತೆ ಮಾಡುತ್ತಾರೆ. ಅವರ ಕಣ್ಣ ಮುಂದೆಯೇ ಭಯಾನಕ ರಕ್ತಪಿಪಾಸು ರಾಕ್ಷಸ ಡ್ರಾಕ್ಯುಲಾ ಧೂಳಿನ ಕಣವಾಗಿ ಗಾಳಿಯಲ್ಲಿ ತೇಲಿ ಹೋಗುತ್ತಾನೆ.

೧೮೯೭ರಲ್ಲಿ ಮೊದಲು ಪ್ರಕಟವಾದ 'ಡ್ರಾಕ್ಯುಲಾ' ಕಾದಂಬರಿ ತೀರಾ ಈಚೆಗಿನ ವರ್ಷಗಳವರೆಗೂ ಹಲವಾರು ಆವೃತ್ತಿಗಳಲ್ಲಿ ಮರು ಮುದ್ರಣ ಕಂಡಿದೆ. ಇದನ್ನು ಆಧರಿಸಿ ಹಾಲಿವುಡ್ ಚಿತ್ರಬ್ರಹ್ಮರು ಹಲವು ಭಾಗಗಳಲ್ಲಿ ತಯಾರಿಸಿದ ಇಂಗ್ಲಿಷ್ ಚಿತ್ರವು ಜಗತ್ತಿನಾದ್ಯಂತ ಪ್ರದರ್ಶಿತವಾಗಿದೆ. ಚಿತ್ರದಲ್ಲಿ ಡ್ರಾಕ್ಯುಲಾ ಪಾತ್ರ ವಹಿಸಿದ ನಟ ಕ್ರಿಸ್ಟೋಫರ್ ಲೀಗೆ ಅಪಾರ ಜನಪ್ರಿಯತೆ ದೊರಕಿದೆ. ನ್ಯೂಯಾರ್ಕ್ ನಗರದಲ್ಲಿ 'ಕೌಂಟ್ ಡ್ರಾಕ್ಯುಲಾ ಫ್ಯಾನ್ ಕ್ಲಬ್'ಗಳು (ಅಭಿಮಾನಿ ಸಂಘಗಳು) ಲಾಸ್ ಏಂಜೆಲಿಸ್‌ನಲ್ಲಿ 'ಕೌಂಟ್ ಡ್ರಾಕ್ಯುಲಾ ಸೊಸೈಟಿ'ಗಳೂ ಸ್ಥಾಪನೆಯಾಗಿವೆ.



# ಬಾಲಕ್ಷಯ

**ಸೋಂ**ಕು ರೋಗಗಳಿಗೆ, ಅದರಲ್ಲೂ ದಡಾರ, ನಾಯಿ ಕೆಮ್ಮು ಬಹುಕಾಲದ ಅತಿಸಾರಗಳಿಗೆ ತುತ್ತಾಗಿ ಅಶಕ್ತರಾದ ಮಕ್ಕಳಲ್ಲಿ ರೋಗ ಪ್ರತಿರೋಧಕ ಶಕ್ತಿ ಕುಗ್ಗಿದಾಗ, ಕ್ಷಯದ ರೋಗಾಣುಗಳು ಹಿರಿ ಹಿರಿ ಹಿಗ್ಗಿ ಅವರ ಮೇಲೆ ದಾಳಿ ಮಾಡಿ, ಅಂಥವರ ದೇಹವನ್ನು ಆಕ್ರಮಿಸಿ, ತಮ್ಮ ಪ್ರತಾಪವನ್ನು ತೋರಿಸಲಾರಂಭಿಸುತ್ತವೆ. ಆಸ್ಪತ್ರೆಗೆ ಬರುವ ಇಂತಹ ಮಕ್ಕಳನ್ನು ದೀರ್ಘ ತನಿಖೆಗೆ ಒಳಪಡಿಸಿ, ಚಿಕಿತ್ಸೆಯನ್ನು ತೀವ್ರವಾಗಿ ಪ್ರಾರಂಭಿಸಿದರೆ ಮುಂದೆ ತಲೆದೋರಬಹುದಾದ ತೊಡಕುಗಳನ್ನು ನಿವಾರಿಸಲು ಸಾಧ್ಯ.

ಹಾಗಾದರೆ ಮಕ್ಕಳಿಗೆ ಟಿ.ಬಿ. ಬರುತ್ತದೆಯೆ? ಎಂದು ಆಶ್ಚರ್ಯದಿಂದ ಪ್ರಶ್ನೆ ಕೇಳುವವರ ಸಂಖ್ಯೆಯೇ ಹೆಚ್ಚು. ಬರುತ್ತದೆ ಎಂದರೂ ನಂಬುವವರು ಕಡಿಮೆ.

ಟಿ.ಬಿ.ಯಿಂದ ಕೊಕ್ ಕೊಕ್ ಎಂದು ಕೆಮ್ಮುವ ಕೆಂಚಪ್ಪ ಮುದ್ದಿನ ಮೊಮ್ಮಗನನ್ನು ಎತ್ತಿ ಮುದ್ದಾಡುತ್ತಾನೆ, ಆಡಿಸುತ್ತಾನೆ, ಹೊತ್ತು ತಿರುಗುತ್ತಾನೆ, ತಿನಿಸುತ್ತಾನೆ. ಕೂಸಿನ ತಂದೆ-ತಾಯಿ ಅಜ್ಜನ ಹತ್ತಿರ ಮಗುವನ್ನು ಬಿಟ್ಟು ಹೊಲಕ್ಕೆ ಹೋಗುತ್ತಾರೆ. ಆದರೆ ಕೆಂಚಪ್ಪನಿಗೆ ಟಿ.ಬಿ. ಹೇಗೆ ಹರಡುತ್ತದೆ ಎಂಬುದರ ಜ್ಞಾನ ಇಲ್ಲ. ಮುಂದೊಂದುದಿನ ಕಿರಿ ಕಿರಿ ಮಾಡುವ ಮಗುವನ್ನು ದವಾಖಾನೆಗೆ ಕರೆ ತರುತ್ತಾನೆ. ಸಮೀಪದ ಸಂಪರ್ಕದಿಂದ ಮಗುವಿಗೆ ಟಿ.ಬಿ. ಆಗಿದೆ ಎಂದು ಡಾಕ್ಟರರು ಹೇಳಿದಾಗ ಕೆಂಚಪ್ಪನಿಗೆ ನಿಂತ ನೆಲ ಕುಸಿದಂತೆ ಭಾಸವಾಗುತ್ತದೆ. ಕ್ಷಯರೋಗ ಹೇಗೆ ಹಬ್ಬುತ್ತದೆ ಎಂಬುದ್ದರ ಪ್ರಜ್ಞೆ ಇಲ್ಲದ 'ಕೆಂಚಪ್ಪ'ಗಳು ನಮ್ಮ ದೇಶದಲ್ಲಿ ಸಾಕಷ್ಟು ಇರುವುದರಿಂದಲೇ ಅದು ಇನ್ನೂ ಈ ದೇಶದಲ್ಲಿ ತಾಂಡವ ನೃತ್ಯಗೈಯ್ಯುತ್ತಿದೆ. ಅಜ್ಞಾನ, ಅನಕ್ಷರತೆ, ಮೂಢ ನಂಬಿಕೆಗಳು ಮಡುವುಗಟ್ಟಿ ನಿಂತಿರುವವರೆಗೂ ಕ್ಷಯರೋಗ ನಮ್ಮನ್ನು ಬಿಟ್ಟು ಕದಲುವುದಿಲ್ಲ. ಆದ್ದರಿಂದ ಈ ರೋಗದ ಬಗ್ಗೆ ಜನರಿಗೆ ತಿಳುವಳಿಕೆ ಮಾಡಿ ಕೊಡುವುದು, ಚಿಕಿತ್ಸೆ ನೀಡುವಷ್ಟೇ ಮಹತ್ವದ್ದು.

ಕ್ಷಯರೋಗ ತಗುಲಿದ ಎಲ್ಲ ಮಕ್ಕಳೂ ಕೆಮ್ಮುವ, ಬಡಕಲು ದೇಹದ ಜೀವಿಗಳೇ ಎಂದು ಹೇಳಲು ಬರುವುದಿಲ್ಲ. ದಷ್ಟಪುಷ್ಟ ಮಕ್ಕಳ ಕತ್ತುಗಳಲ್ಲಿ ಗಂಟುಗಳು ಇದ್ದು, ನಸನಸಿ ಜ್ವರದಿಂದಷ್ಟೆ ಬಳಲುತ್ತಿರಬಹುದು. ಮುರುವು ಚುಚ್ಚಿದರೆ ಈ ಗಂಟುಗಳು ಕರಗುತ್ತವೆ ಎಂಬ ತಪ್ಪು ಕಲ್ಪನೆ ನಮ್ಮ ಹಿರಿಯರಲ್ಲಿ ಬೇರುಬಿಟ್ಟಿದೆ. ಅದನ್ನು ಕಿತ್ತೊಗೆಯಲು ಆರೋಗ್ಯ ಇಲಾಖೆಯ ಎಲ್ಲರೂ ತಮ್ಮ ತಮ್ಮ ಪ್ರಯತ್ನ ಮಾಡಬೇಕು. ಹಾಗೆಯೆ ಬಹುಕಾಲದ ಭೇದಿಯು ಕರುಳಿನ ಕ್ಷಯದ ಚಿಹ್ನೆಯಾಗಿರಲೂಬಹುದು.

ಸುಮಾರು ೫,೦೦೦ ವರ್ಷಗಳ ಹಿಂದೆಯೇ ಕ್ಷಯ ಭಾರತದಲ್ಲಿ ನೆಲೆಸಿತ್ತು ಎಂಬುದರ ಬಗ್ಗೆ ಪುರಾವೆಗಳು ದೊರೆಯುತ್ತವೆ. ಆಧುನಿಕ ವೈದ್ಯಶಾಸ್ತ್ರದ ಪಿತಾಮಹ ಹಿಪ್ಪೊಕ್ರೆಟಿಸ್ (ಕ್ರಿ.ಪೂ. ೪೬೦)ಇದನ್ನು "ಒಣಗಿಸುವ ಕಾಯಿಲೆ" ಎಂದು ಕರೆದಿದ್ದಾನೆ. ಅಂದಿನ ಕಾಲದಲ್ಲಿ ಇದು "ಮರಣಾಂತಿಕ ಕಾಯಿಲೆಗಳ ನಾಯಕ"ಎಂದೇ ಹೆಸರಾಗಿತ್ತು. ಯುರೋಪಿನದಲ್ಲಿ ಹದಿನೆಂಟನೇ ಶತಮಾನದಲ್ಲಿ ಕ್ಷಯ ತನ್ನ ಹಾವಳಿಯ ವಿರಾಟ ರೂಪ ತೋರಿಸಿ ಜನರನ್ನು ತಲ್ಲಣಗೊಳಿಸಿತ್ತು. "ಬಿಳಿಯರ ಪ್ಲೇಗು" ಎಂಬ ಬಿರುದು ಅದಕ್ಕಿತ್ತು. ೧೮೮೨ರಲ್ಲಿ ರಾಬರ್ಟ್ ಕೋಚ್ ಕ್ಷಯಕ್ಕೆ ಕಾರಣವಾದ ರೋಗಾಣುವನ್ನು ಪತ್ತೆ ಹಚ್ಚಿ, ಮುಂದಿನ ಸಂಶೋಧನೆಗಳಿಗೆ ಹಾದಿ ಮಾಡಿಕೊಟ್ಟನು ಪ್ರಥಮ ಜಾಗತಿಕ ಯುದ್ಧದ ನಂತರ, ಫ್ರೆಂಚ್ ವಿಜ್ಞಾನಿಗಳಾದ ಕಾಲ್ಮೆಟ್ ಹಾಗೂ ಗುರಿನ್ ಬಿ.ಸಿ.ಜಿ. ಲಸಿಕೆಯನ್ನು ತಯಾರಿಸುವಲ್ಲಿ ಯಶಸ್ವಿಯಾದರು. ೧೯೨೧ರಲ್ಲಿ ಪ್ರಪ್ರಥಮವಾಗಿ ಅದನ್ನು ಪ್ರಾಯೋಗಿಕವಾಗಿ ಬಳಸಲಾಯಿತು. ಮುಂದೆ ಕ್ಷಯದ ಗುಟ್ಟನ್ನು ವಿಜ್ಞಾನಿಗಳು ರಟ್ಟು ಮಾಡುತ್ತಾ ಹೋದರು. ಹೊಸ ಹೊಸ ಪ್ರಭಾವಶಾಲಿ ಔಷಧಿಗಳು ಆವಿಷ್ಕಾರಗೊಂಡವು. ಪರಿಣಾಮವಾಗಿ ಜಾಗತಿಕ ಆರೋಗ್ಯ ಸಂಸ್ಥೆ ಕ್ಷಯದ ನಿಯಂತ್ರಣಕ್ಕೆ ಕ್ರಾಂತಿಯ ಕಹಳೆ ಊದಿತು.

ಕ್ಷಯದ ಹಾವಳಿ, ಹಾಹಾಕಾರ ನಮ್ಮ ದೇಶಕ್ಕಷ್ಟೇ ಸೀಮಿತವಾಗಿಲ್ಲ, ಪ್ರಪಂಚದ ಪ್ರತಿಯೊಂದು ದೇಶದಲ್ಲಿಯೂ ಇದೆ. "ಒಂದು ದೇಶದ ೦-೧೪ ವರ್ಷದೊಳಗಿನ ಮಕ್ಕಳಲ್ಲಿ ಶೇಕಡಾ ೧ ರಷ್ಟು ಮಕ್ಕಳು ಟ್ಯೂಬರ್‌ಕ್ಯುಲಿನ್ ಪರೀಕ್ಷೆಗೆ ನಕಾರಾತ್ಮಕವಾಗಿದ್ದಲ್ಲಿ, ಅದು ಕ್ಷಯ ನಿಯಂತ್ರಣ ಹಂತ ತಲುಪಿದೆ ಎಂದು ಘೋಷಿಸಲು ಅಡ್ಡಿಯಿಲ್ಲ" ಎಂದು ಜಾಗತಿಕ ಆರೋಗ್ಯ ಸಂಸ್ಥೆ ಹೇಳಿದೆಯಾದರೂ ಆ ಮಟ್ಟವನ್ನು ಈವರೆಗೂ ಪ್ರಪಂಚದ ಯಾವ ದೇಶವೂ ತಲುಪಿಲ್ಲ ಎನ್ನುವುದು ಒಂದು ಅಪ್ರಿಯ ಸತ್ಯವೇ ಸರಿ.

ಒಂದು ಸಮೀಕ್ಷೆಯ ಪ್ರಕಾರ ಪ್ರಪಂಚದಲ್ಲಿ ಇಂದು, ಸೋಂಕಿಸುವ ಕ್ಷಯರೋಗಿಗಳ ಸಂಖ್ಯೆ ೧೫ ರಿಂದ ೨೦ ಮಿಲಿಯನ್. ಪ್ರತಿ ವರ್ಷ ಈ ರೋಗದಿಂದ ಸಾಯುವ ಹತ್ತಿಪ್ಪತ್ತು ಲಕ್ಷ ರೋಗಿಗಳಷ್ಟೇ ಹೊಸ ರೋಗಿಗಳ ಸೇರ್ಪಡೆಯಾಗುವುದರಿಂದ ಸಂಖ್ಯಾತ್ಮಕವಾಗಿ ಯಥಾಸ್ಥಿತಿಯಲ್ಲೆ ಉಳಿದಿದೆ.



# ಕ್ಷಯ

[illegible] ಇದು ಸರಿಯಾದ ಚಿತ್ರಣವನ್ನೊದಗಿಸುವುದಿಲ್ಲ, ಏಕೆಂದರೆ ಎಷ್ಟೋ ದೇಶಗಳು ಅಪೂರ್ಣ ಮಾಹಿತಿ ಒದಗಿಸುತ್ತವೆ. ಕೆಲವು ದೇಶಗಳಲ್ಲಿಯಂತೂ ಅಂಕಿಸಂಖ್ಯೆಗಳ ದಾಖಲೆ ಸಮರ್ಪಕವಾಗಿರುವುದಿಲ್ಲ.

ಭಾರತದಲ್ಲಿ ಈ ಸೋಂಕು ೬ ವರ್ಷದೊಳಗಿನವರಿಗೆ ಪ್ರತಿಶತ ೨೫ ಇದ್ದು, ೧೨ ವರ್ಷದೊಳಗಿನವರಿಗೆ ಪ್ರತಿಶತ ೪೦ ರಷ್ಟು ಇದೆ. ಆಸ್ಪತ್ರೆಗೆ ತೋರಿಸಲು ಕರೆತರುವ ಮಕ್ಕಳ ಪ್ರತಿಶತ ೨ ರಷ್ಟು ಮಕ್ಕಳು ಕ್ಷಯರೋಗದ ಚಿಹ್ನೆ ಮತ್ತು ಲಕ್ಷಣಗಳನ್ನು ಹೊಂದಿರುತ್ತಾರೆಂದರೆ ಈ ರೋಗದ ಹರವಿನ ಅರಿವು ಯಾರಿಗಾದರೂ ಆದೀತು! ಮಕ್ಕಳಲ್ಲಿಯ ಕ್ಷಯರೋಗದ ಪ್ರಮಾಣವು ಸಮಾಜದಲ್ಲಿಯ ವಯಸ್ಕರ ಕ್ಷಯರೋಗದ ಹಾವಳಿ, ಔಷಧೋಪಚಾರಕ್ಕೆ ಇರುವ ಅನುಕೂಲಗಳನ್ನು ನೇರವಾಗಿ ಅವಲಂಬಿಸಿದೆ.

## ರೋಗಕಾರಕ

ಇದು ಮೈಕೋಬ್ಯಾಕ್ಟೀರಿಯಮ್ ಟ್ಯೂಬರ್‌ಕ್ಯುಲೋಸಿಸ್ ಎಂಬ ರೋಗಾಣುವಿನಿಂದ ಬರುತ್ತದೆ. ರೋಗಾಣುಗಳು ೨.೫ ದಿಂದ ೩.೫ ಮೈಕ್ರಾನ್ ಉದ್ದ ಹಾಗೂ ೦.೪ ಮೈಕ್ರಾನ್‌ನಷ್ಟು ದಪ್ಪವಿರುತ್ತವೆ. ಸಾಮಾನ್ಯವಾಗಿ ಬಳಸುವ ಬಣ್ಣಗಳನ್ನು ಉಪಯೋಗಿಸಿದಾಗ ಈ ರೋಗಾಣುಗಳು ಸುಲಭವಾಗಿ ಬಣ್ಣವನ್ನು ಹೀರಿಕೊಳ್ಳುವದಿಲ್ಲ. ಕ್ಷಯರೋಗದ ರೋಗಾಣು ಗ್ರಾಂ ಸಕಾರಾತ್ಮಕವಾಗಿದ್ದರೂ ಗ್ರಾಂ ವಿಧಾನದಲ್ಲಿ ಇದಕ್ಕೆ ಬಣ್ಣಕೊಡಲು ಸಾಧ್ಯವಾಗುವುದಿಲ್ಲ. ಜೀಲ್ ನೀಲ್ಸನ್ನರ ವಿಧಾನದಲ್ಲಿ (Z.N. Stain) ಬೇಸಿ ಕಾರ್ಬಾಲ್ ಫ್ಯೂಸಿಲ್ ಉಪಯೋಗಿಸಿ ಬಣ್ಣ ಕೊಟ್ಟರೆ ಈ ರೋಗಾಣು ಬಣ್ಣವನ್ನು ಹೀರಿಕೊಳ್ಳುತ್ತದೆ. ಒಮ್ಮೆ ಬಣ್ಣ ಹೀರಿಕೊಂಡ ನಂತರ ಆಮ್ಲದಲ್ಲಿ, ಮದ್ಯಸಾರದಲ್ಲಿ ಅದ್ದಿದ್ದರೂ ಈ ರೋಗಾಣುವು ತನ್ನ ಬಣ್ಣವನ್ನು ಬಿಟ್ಟುಕೊಡುವುದಿಲ್ಲ.

ಕ್ಷಯರೋಗಿಯು ಕೆಮ್ಮಿದಾಗ ಕಫದೊಂದಿಗೆ ಹಾಗೂ ಕ್ಯಾಕರಿಸಿದಾಗ ಇಲ್ಲವೆ ಗಟ್ಟಿಯಾಗಿ ಮಾತನಾಡುವಾಗ ತುಂತುರು ಹನಿಯಾಗಿ ಹಾರಡುವ ಉಗುಳಿನೊಂದಿಗೆ ರೋಗಾಣುಗಳು ಪರಿಸರದಲ್ಲಿ ಪಸರಿಸುತ್ತವೆ. ಕ್ಷಯರೋ

ಗದ ರೋಗಾಣುಗಳು ಸೂರ್ಯಕಿರಣಗಳಿಗೆ ಮೈಯೊಡ್ಡಿದಾಗ ಕೆಲವು ತಿಂಗಳಕಾಲ ಜೀವಿಸಿರಬಲ್ಲವು. ಅಂತಹ ರೋಗಾಣುಗಳು ಧೂಳಿನ ಮೂಲಕ ಮಣ್ಣು ಇಲ್ಲವೆ ಗೊಬ್ಬರದಲ್ಲಿ ಸೇರಿಕೊಂಡಾಗ ೬ ತಿಂಗಳ ಕಾಲ ಜೀವಿಸಿರಬಲ್ಲವು. ಶೈತ್ಯೀಕರಣಕ್ಕೊಳಪಡಿಸಿದಾಗ ಇವು ಸಾಯುವುದಿಲ್ಲ, ಆದರೆ ಶಾಖಕ್ಕೆ ಮೈಯೊಡ್ಡಿದಾಗ ಸಾಯುತ್ತವೆ. ಹಾಲಿನಲ್ಲಿ ಇರುವ ರೋಗಾಣುಗಳು ಹಾಲನ್ನು ೧೪೫ ಡಿಗ್ರಿಯಿಂದ ೧೫೦ ಡಿಗ್ರಿ ಉಷ್ಣತೆಯಲ್ಲಿ ಅರ್ಧ ಗಂಟೆಯಕಾಲ ಕುದಿಸಿದಾಗ ನಾಶವಾಗುತ್ತವೆ. ಉಗ್ರತೆ ಈ ರೋಗಾಣುವಿನ ವಿಶಿಷ್ಟಗುಣ.

ರೋಗ ಪ್ರಸಾರ




## ಸೋಂಕಿನ ಮೂಲ

ನೇರ ಸಂಪರ್ಕ ಹೊಂದಿರುವುದು ರೋಗ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಕ್ಷಯದ ರೋಗಾಣುಗಳು ಒಳಗೆಳೆದು ಕೊಳ್ಳುವ ಉಸಿರಿನ ಮೂಲಕ, ಸೇವನೆಯ ಮೂಲಕ ಚರ್ಮದ ಮೂಲಕ (ಚುಚ್ಚಳಿಕೆ) ದೇಹವನ್ನು ಸೇರಬಹುದು. ರೋಗಾಣು ದೇಹವನ್ನು ಪ್ರವೇಶಿಸಿದ ನಂತರ ರೋಗಉತ್ಪನ್ನವಾಗಲೇ ಬೇಕೆಂಬ ಕಡ್ಡಾಯವೇನಿಲ್ಲ, ಜೀವನಮಟ್ಟ ಮನೆಯ ವಿನ್ಯಾಸ, ಜನಸಾಂದ್ರತೆ, ಆರ್ಥಿಕ ಪರಿಸ್ಥಿತಿ, ಜನರ ಆರೋಗ್ಯ ಸ್ಥಿತಿ, ಸಾಮಾಜಿಕ ಪದ್ಧತಿಗಳು, ಆರೋಗ್ಯದ ಬಗೆಗಿನ ಅಜ್ಞಾನ, ರೋಗ ನಿರೋಧಕ ಶಕ್ತಿ, ಔಷಧಿಗಳಿಗೆ ಮಣಿಯದೇ ಬೆಳೆಯುವ ರೋಗಾಣುಗಳು,



# ಬ್ಯಾಲಕ್ಷಯ

ಅನಿಯಮಿತ ಔಷಧ ಸೇವನೆ, ರೋಗಾಣುವಿನ ತೀಕ್ಷತೆ, ದೇಹವನ್ನು ಆಕ್ರಮಿಸುವ ರೋಗಾಣುಗಳ ಸಂಖ್ಯೆ, ಅಪೌಷ್ಟಿಕತೆ, ಕಿರಿವಯಸ್ಸು, ಸೋಂಕಿನ ಪುನರಾವರ್ತನೆ ಇವೆಲ್ಲವುಗಳ ಮೇಲೆ ರೋಗದ ಪ್ರಸಾರ ಅವಲಂಬಿಸಿರುವದೆಲ್ಲದೆ ಸೋಂಕನ್ನು ರೋಗವನ್ನಾಗಿ ಪರಿವರ್ತಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ದಡಾರ ಮತ್ತು ನಾಯಿಕೆಮ್ಮುಗಳಿಂದ ಬಳಲಿದ ಮಕ್ಕಳಲ್ಲಿ ರೋಗ ಪ್ರತಿರೋಧಕ ಶಕ್ತಿ ಕುಗ್ಗುವುದರಿಂದ ಕ್ಷಯ ರೋಗಾಣುಗಳು ತೀವ್ರವಾಗಿ ದಾಳಿ ಮಾಡಿ ಜಯಶಾಲಿಗಳಾಗುತ್ತವೆ. ಪರಿಣಾಮವಾಗಿ ಮಕ್ಕಳು ರೋಗ ದಿಂದ ಬಳಲುತ್ತವೆ. ಈ ರೋಗ ಒಬ್ಬರಿಂದ ಇನ್ನೊಬ್ಬರಿಗೆ ಹಬ್ಬುವುದು ಮಾತ್ರವಲ್ಲ, ಸೋಂಕು ತಗುಲಿದ ಹಸುವಿನ ಹಾಲಿನ ಸೇವನೆಯಿಂದಲೂ ಬರಬಹುದು. ನಮ್ಮಲ್ಲಿ ನೊರೆ ಹಾಲು ಕುಡಿದರೆ ಮಕ್ಕಳು ಗಟ್ಟಿಯಾಗುತ್ತವೆ ಎನ್ನುವ ನಂಬಿಕೆ ಇದೆ. ಅಕಸ್ಮಾತ್ತಾಗಿ ಹಸು ಕ್ಷಯರೋಗದಿಂದ ನರಳುತ್ತಿದ್ದರೆ ಹಾಲಿನಲ್ಲಿ ಕ್ಷಯ ರೋಗಾಣುಗಳು ಇರುತ್ತವೆ. ಹೀಗಾಗಿ ಇದನ್ನು ಕುಡಿದ ಮಗುವಿಗೆ ರೋಗ ಬರುವುದು ಸಹಜ. ಆದ್ದರಿಂದ ಹಾಲನ್ನು ಯಾವಾ ಗಲೂ ಕುದಿಸಿ ಕುಡಿಯಬೇಕು. ಕುದಿಸುವದರಿಂದ ಕ್ಷಯ ರೋಗಾಣುಗಳು ನಾಶ ಹೊಂದುತ್ತವೆ. ಗರ್ಭಿಣಿಯರು ಕ್ಷಯ ರೋಗಿಗಳಾಗಿದ್ದಲ್ಲಿ ರೋಗಾ ಣುಗಳು ಮಾಸದ ಮೂಲಕ ಪಿಂಡಕ್ಕೂ ಮುತ್ತಿಗೆ ಹಾಕುವುದರ ಪ್ರಯುಕ್ತ ಹುಟ್ಟುವ ಮಗು ಕ್ಷಯ ರೋಗ ಪಡೆದುಕೊಂಡೇ ಬರಬಹುದು.

## ರೋಗ ವಿಕಾಸ

ಶ್ವಾಸನಾಳದ ಮೂಲಕ ಒಳಸೇರಿದ ರೋಗಾಣುವಿಗೆ ಶ್ವಾಸಕೋಶಗಳೆಂ ದರೆ ಬಲು ಪ್ರೀತಿ. ಅಲ್ಲಿ ನೆಲೆಸಿ ಉರಿತವನ್ನುಂಟುಮಾಡುತ್ತವೆ. ಆ ಕ್ಷೇತ್ರಕ್ಕೆ ಸಂಬಂಧಿಸಿದ ಶ್ವಾಸಕೋಶಗಳ ಮೂಲದಲ್ಲಿರುವ (Hilum) ದುಗ್ಧರಸ ಗ್ರಂಥಿಗಳು ಊದಿಕೊಳ್ಳುತ್ತವೆ. ಶ್ವಾಸಕೋಶದ ಯಾವ ಭಾಗಕ್ಕಾದರೂ ಸೋಂಕು ತಗಲಬಹುದಾದರೂ ಸಾಮಾನ್ಯವಾಗಿ ಬಲಶ್ವಾಸಕೋಶದ ಮೇಲೆ ಹಾಲೆ (Upper Lobe)ಗೆ ಸೋಂಕು ತಗಲುವ ಸಂಭವವೇ ಹೆಚ್ಚು. ಪ್ರಥಮ ಸೋಂಕಿನ ನೆಲೆಗೆ ಪ್ರಥಮ ಸಂಕೀರ್ಣ (Primary Complex)

ಎಂದು ಕರೆಯುತ್ತಾರೆ.

ಮಗುವಿನಲ್ಲಿ ರೋಗ ಪ್ರತಿರೋಧಕ ಶಕ್ತಿ ಹೆಚ್ಚಾಗಿದ್ದರೆ, ಸೋಂಕು ಇಲ್ಲಿಗೇ ಸೀಮಿತಗೊಂಡು ಸ್ವಲ್ಪ ಕಾಲದ ಬಳಿಕ ಆ ಜಾಗ ನಾರುಗಟ್ಟಬಹುದು ಅಥವಾ ಸುಣ್ಣಗಟ್ಟಬಹುದು. ಒಂದು ವೇಳೆ ಸೋಂಕಿನ ಪ್ರಮಾಣ ಹೆಚ್ಚಾಗಿದ್ದಲ್ಲಿ ಅಥವಾ ರೋಗ ಪ್ರತಿರೋಧಕ ಶಕ್ತಿ ಕುಗ್ಗಿದರೆ ಅಂಗಾಂಶಗಳು ನಾಶಗೊಂಡು ಶ್ವಾಸಕೋಶದ ಸೋಂಕಿನ ನೆಲೆಯು ಕುಳಿಯಾಗಿ ಮಾರ್ಪಡಬಹುದು. ಕೇಸಿನ್ನಿನಂತಹ ವಸ್ತು ದ್ರವವಾಗಿ, ಮಗ್ಗುಲಲ್ಲಿರುವ ರಕ್ತನಾಳಕ್ಕೆ ನುಗ್ಗಿದಾಗ ರಕ್ತ ಪರಿಚಲನೆಯ ಮೂಲಕ ದೇಹದ ಎಲ್ಲ ಭಾಗಗಳಿಗೂ ರೋಗಾಣುಗಳು ರವಾನೆಗೊಳ್ಳಬಹುದು. ಸರ್ವಸಾಮಾನ್ಯವಾಗಿ ಸೋಂಕಿನ ಪ್ರಥಮ ನೆಲೆ ನಾರುಕಟ್ಟುವಿಕೆಯಲ್ಲಿ ಅಂತ್ಯಗೊಳ್ಳುವುದು. ರೋಗ ಪ್ರತಿರೋಧಕ ಶಕ್ತಿ ಕಡಿಮೆ ಇದ್ದವರಲ್ಲಿ ಪ್ರಥಮ ನೆಲೆಯಲ್ಲಿಯ ರೋಗಾಣುಗಳು ಸುತ್ತಮುತ್ತಲಿನ ಶ್ವಾಸಕೋಶದ ಜೀವಕೋಶಗಳಿಗೆ ಮುತ್ತಿಗೆಹಾಕಿ ಗಾಸಿಗೊಳಿಸುತ್ತಾ ಮುನ್ನುಗ್ಗುವುದರಿಂದ ವ್ಯಾಪಕವಾಗಿ ಕ್ಷಯರೋಗದ ನ್ಯುಮೋನಿಯಾ ಉಂಟಾಗುತ್ತದೆ. ಕೆಲವು ಸನ್ನಿವೇಶಗಳಲ್ಲಿ ಈ ರೋಗಾಣುಗಳು ರಕ್ತವನ್ನು ಸೇರಿ ಸಾಸಿವೆಕಾಳು ಕ್ಷಯರೋಗವನ್ನುಂಟು ಮಾಡುತ್ತವೆ.

ಶ್ವಾಸಕೋಶಗಳೇ ಶೇಕಡಾ ೯೦ರಷ್ಟು ಸೋಂಕಿನ ಹೊರೆಯನ್ನು ಹೊತ್ತರೂ ದೇಹದ ಇತರ ಅಂಗಾಂಗಗಳಲ್ಲಿ ಕ್ಷಯರೋಗದ ಸೋಂಕು

## ಪ್ರಥಮ ಸೋಂಕಿನ ಪ್ರತಿಕ್ರಿಯೆ

ಕಡಿಮೆ ಸಂಖ್ಯೆಯ ರೋಗಾಣುಗಳನ್ನು ಒಳಗೆಳೆದುಕೊಂಡರೂ ಸಾಕು, ಶ್ವಾಸಕೋಶಕ್ಕೆ ಸೋಂಕು ತಗಲುತ್ತದೆ. ಯಾರಿಗೆ ಮುಂಚಿತವಾಗಿ ಈ ಸೋಂಕು ತಗುಲಿರುವುದಿಲ್ಲವೋ ಅಂಥವರಿಗೆ ಪ್ರಥಮವಾಗಿ ಕ್ಷಯ ರೋಗದ ಸೋಂಕು ತಗುಲಿದರೆ ಅಂಗಾಂಶಗಳ ಪ್ರತಿಕ್ರಿಯೆ ತುಂಬಾ ನಿಧಾನವಾಗಿರುತ್ತದೆ ಮತ್ತು ಆ ಭಾಗದಲ್ಲಿ ಎರಡು ಮೂರು ವಾರಗಳೊಳಗೆ ಭಕ್ಷಕ ಬೃಹತ್ ಕಣಗಳು (Macrophages) ಒಟ್ಟಿಗೆ ಸೇರಿ ಬೂದುಬಣ್ಣದ ಸಣ್ಣ ಗಂಟುಗಳಾಗುತ್ತವೆ. ಶ್ವಾಸಕೋಶಾವರಣದ ಒಳಪದರಿನ ಅಡಿಯಲ್ಲಿರುವ ಕಿರು ಕುಳಿಗಳಿಗೆ ಸಂಬಂಧಿಸಿದಂತೆ ಈ ಸಣ್ಣ ಗಂಟುಗಳಿರುತ್ತವೆ. ನಂತರ ಮಾದರಿಯ ಕ್ಷಯಗಂತಿ (Tubercle) ಉತ್ಪತ್ತಿಯಾಗುತ್ತದೆ.

ಈ ಗಂತಿಯನ್ನು ಸೂಕ್ಷ್ಮದರ್ಶಕದಿಂದ ಪರೀಕ್ಷಿಸಿದಾಗ ಕೇಂದ್ರಭಾಗ ನಾಶವಾಗಿಹೋಗಿರುತ್ತದೆ. ಆ ಭಾಗದಲ್ಲಿ ಅನೇಕ ಜೀವಕಣಗಳನ್ನು ಹೊಂದಿರುವ ಬೃಹದ್ದೇಹಿಯಾದ ಕಣಗಳು ಕಂಡುಬರುತ್ತವೆ. ಸಂಪೂರ್ಣವಾಗಿ ಬೆಳೆದ ಗಂತಿಗಳು ರಕ್ತನಾಳರಹಿತವಾಗಿರುವುದರಿಂದ ಈ ಗಂತಿಯ ಮಧ್ಯದಲ್ಲಿರುವ ಜೀವಕೋಶಗಳು ಅತಿಬೇಗ ಗತಿಸುತ್ತವೆ. ಆ ಸತ್ತಕೋಶಗಳ ಸ್ಥಳವನ್ನು ಗಿಣ್ಣದಂತಹ ವಸ್ತುವಾಗಲಿ ಸತ್ತ ಅಂಗಾಂಶಗಳಾಗಲಿ ಅಕ್ರಮಿಸಿಕೊಂಡಿರುತ್ತವೆ.



# ಬಾಲಕ್ಷಯ

ಕಂಡುಬರುತ್ತದೆ. ಯಕೃತ್ತು, ಪ್ಲೀಹ, ಹಾಲ್ರಸಗ್ರಂಥಿಗಳು, ಮೂತ್ರ ಪಿಂಡಗಳು, ಮಿದುಳು ಪೊರೆಗಳಲ್ಲಿಯೂ ಈ ಸೋಂಕು ಕಂಡುಬರುತ್ತದೆ. ಸಾಸಿವೆಕಾಳು ಕ್ಷಯರೋಗದಲ್ಲಿ ಕಂಡುಬರುವ ಮಾದರಿಯ ವ್ರಣವೆಂದರೆ ಸಾಸಿವೆಕಾಳಿನ ಗಾತ್ರದ ಕ್ಷಯಗಂತಿಗಳು. ಅವು ಒಂದಕ್ಕೊಂದು ಕೂಡಿಕೊಳ್ಳಬಹುದು. ಶ್ವಾಸಕೋಶಗಳನ್ನು ತೆಳುವಾದ ಪೊರೆ ಆವರಿಸಿರುತ್ತದೆ. ಇದರಿಂದಾಗಿಯೇ ಶ್ವಾಸಕೋಶ ಸಲೀಸಾಗಿ ಉಬ್ಬಬಹುದು, ಕುಗ್ಗಬಹುದು. ಅಕಸ್ಮಾತ್ ಸೋಂಕು ಪ್ಲೂರೆಗೂ ಪಸರಿಸಿದಲ್ಲಿ ಪ್ಲೂರಸಿ ಕಾಯಿಲೆ (ಶ್ವಾಸ ಕೋಶದ ಪೊರೆಯುರಿತ) ಉಂಟಾಗುತ್ತದೆ. ಇದು ಒಣ ಪ್ಲೂರಸಿ ಆಗಬಹುದು, ದ್ರವ ತುಂಬಿಕೊಂಡ ಹಸಿ ಪ್ಲೂರಸಿಯೂ ಆಗಬಹುದು.

### "ಕ್ಷಯರೋಗದ ಕ್ಯಾಲೆಂಡರ್"

ಸೋಂಕು ತಗುಲಿದ ನಂತರ ಕ್ಷಯದ ವಿವಿಧ ಮುಖಗಳ ಪರಿಚಯವಾಗಲು ನಿರ್ದಿಷ್ಟ ಕಾಲಾವಧಿ ಅತ್ಯವಶ್ಯವೆಂಬುದನ್ನು ಅಧ್ಯಯನಗಳಿಂದ ಮನಗಂಡು ವಾಲ್‌ಗ್ರೆನ್ ಕ್ಷಯರೋಗದ ಕ್ಯಾಲೆಂಡರ್ ತಯಾರಿಸಿದರು. ಪ್ರತಿ ರೋಗಿಯೂ ಕ್ಯಾಲೆಂಡರಿನಲ್ಲಿಯ ಎಲ್ಲ ಹಂತಗಳಲ್ಲೂ ಹಾಯ್ದು ಹೋಗಬೇಕೆಂಬ ಕಡ್ಡಾಯವೇನೂ ಇಲ್ಲ ಎಂಬುದನ್ನು ಮರೆಯಕೂಡದು.

### ಕ್ಷಯರೋಗದ ಕ್ಯಾಲೆಂಡರ್

| ಹಂತ | ಕ್ಷಯರೋಗದ ಮುಖಗಳು | ಪರಿಪಕ್ವ ಕಾಲಾವಧಿ ಮಿತಿ | ಸಾಮಾನ್ಯ ಕಾಲಾವಧಿ |
|---|---|---|---|
| ೧. | ಪ್ರಥಮ ಸಂಕೀರ್ಣ | ೪ ರಿಂದ ೭ ವಾರಗಳು | ೬ ವಾರಗಳು |
| ೨. | ಸಾಸುವೆಕಾಳು ಕ್ಷಯರೋಗ, ಕ್ಷಯ ಮಿದುಳ ಪೊರೆಯುರಿತ | ೧ ರಿಂದ ೮ ತಿಂಗಳು | ೩ ತಿಂಗಳು |
| ೩. | ಶ್ವಾಸಕೋಶದ ಪೊರೆಯುರಿತ | ೧ ರಿಂದ ೧೨ ತಿಂಗಳು | ೩-೭ ತಿಂಗಳು |
| ೪. | ಮೂಳೆ ಮತ್ತು ಕೀಲುಗಳ ಕ್ಷಯ | ೧ ರಿಂದ ೬ ವರ್ಷ | ೧-೨ ವರ್ಷ |
| ೫. | ಫುಪ್ಪಸ ಕ್ಷಯ | ೧ ರಿಂದ ೬ ವರ್ಷ | ೧-೨ ವರ್ಷ |

### ರೋಗದ ಲಕ್ಷಣಗಳು:

ಪ್ರಾರಂಭಿಕ ಹಂತದಲ್ಲಿ ಯಾವುದೇ ಲಕ್ಷಣಗಳು ಕಾಣದೇ ಇರುವುದರಿಂದ ರೋಗವನ್ನು ಪತ್ತೆ ಹಚ್ಚುವುದು ತುಂಬಾ ಕಷ್ಟ. ಹಸಿವು ಆಗದೆ ಇರುವುದರಿಂದ ಮಗು ಊಟ, ಉಪಹಾರಗಳತ್ತ ಆಸಕ್ತಿ ತೋರದೇ ಇರಬಹುದು. ಆಗಾಗ್ಗೆ ಸ್ವಲ್ಪ ಜ್ವರ ಕಾಣಿಸಿಕೊಂಡು ಸುಸ್ತಾದಂತೆ ಕಾಣಬಹುದು. ಜ್ವರ ಕಡಿಮೆಯಾದ ಮೇಲೆ ಮಗು ಯಥಾಪ್ರಕಾರ ಲವಲವಿಕೆಯಿಂದಿರುವುದರಿಂದ ತಂದೆ-ತಾಯಿಗಳ ಗಮನ ಸೆಳೆಯದೆ ಹೋಗಬಹುದು. ಬರಬರುತ್ತಾ ಲವಲವಿಕೆ ಕಡಿಮೆಯಾಗಿ, ಒಂಟಿತನಕ್ಕೆ ಗಂಟುಬಿದ್ದು ಮಂಕಾಗಿ ಮೂಲೆಯಲ್ಲಿ ಕೂಡಬಹುದು.

"ಅದು ಬೇಕು, ಇದು ಬೇಕು" ಎಂದೆಲ್ಲಾ ಹಟಹಿಡಿದಾಗ, ಅದನ್ನಾದರೂ ತಿನ್ನಲಿ ಎಂದು ತಾಯಿ ತಯಾರು ಮಾಡಿದರೆ ಒಂದೆರಡು ತುತ್ತು ತಿಂದು ಸಾಕು ಎಂದುಬಿಡುತ್ತದೆ ಮಗು. ಒತ್ತಾಯ ಮಾಡಿ ತಿನ್ನಿಸಿದರೆ ಉಗಳಲು ಪ್ರಾರಂಭಿಸುತ್ತದೆ ಹೊರತು ಅದನ್ನೇನೂ ನುಂಗುವುದಿಲ್ಲ. ನಾಲಿಗೆ ಕಹಿಯಾಗಿರುವುದರಿಂದ ಆಹಾರವು ರುಚಿಸುವುದಿಲ್ಲ. ಆಹಾರವಿಲ್ಲದೆ ಅಶಕ್ತವಾದ ಮಗು ಸೊರಗುತ್ತದೆ. ತೂಕ ಕಳೆದುಕೊಳ್ಳುತ್ತದೆ. ಸಿಡುಕಿನ ಸ್ವಭಾವ ಬೆಳೆದು ಹಟಮಾರಿಯಾಗುತ್ತದೆ.

ಶ್ವಾಸಕೋಶಗಳಲ್ಲಿ ಸೋಂಕು ಭದ್ರವಾಗಿ ತಳವೂರಿದಾಗ ಮಗುವಿಗೆ ದಿನಂಪ್ರತಿ ಸಂಜೆ ಜ್ವರ ಬರಲು ಪ್ರಾರಂಭವಾಗುತ್ತದೆ. 'ಜ್ವರ ರಾತ್ರಿಯಿಡಿ ಇದ್ದು ಬೆಳಗಿನ ಜಾವ ಬೆವರು ಬಂದು ಕಡಿಮೆಯಾಗಿ ಮುಂಜಾನೆ ಸ್ವಲ್ಪ ಲವಲವಿಕೆ ಹೊಂದಿದಂತೆ ಕಾಣಬಹುದು ಮತ್ತೆ ಸಾಯಂಕಾಲ ಜ್ವರ ಬರುವುದು. ಹಸಿವು ಸಂಪೂರ್ಣವಾಗಿ ಮಾಯವಾಗುತ್ತದೆ. ಒತ್ತಾಯದಿಂದ

### ಕೆನೆಥ್ ಜೋನ್ಸ್ ಮಾರ್ಗಸೂಚಿ

ಆರೋಗ್ಯಾಧಿಕಾರಿಗಳಿಗೆ ತಿಳಿಸಲೇಬೇಕಾದ ಕಾಯಿಲೆಗಳ ಗುಂಪಿಗೆ ಕ್ಷಯ ರೋಗ ಸೇರಿದ್ದರೂ ಎಷ್ಟೋ ರೋಗಿಗಳು ಹಾಗೆ ಮಾಡುವುದೇ ಇಲ್ಲ. ಬಾಲಕ್ಷಯ ದೊಡ್ಡವರಲ್ಲಿ ಕಾಣುವ ಕ್ಷಯಕ್ಕಿಂತಲೂ ಭಿನ್ನವಾಗಿರುವುದರಿಂದ ಇದನ್ನು ಗುರುತಿಸದೇ ಹೋಗಬಹುದು. ದೊಡ್ಡವರಲ್ಲಿ ಕಾಣುವ ಕ್ಷಯ ರೋಗದ ವಿಶಿಷ್ಟ ಲಕ್ಷಣಗಳು ಮಕ್ಕಳಲ್ಲಿ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಕೆನೆಥ್ ಜೋನ್ಸ್ ಬಾಲಕ್ಷಯದ ಆಳವಾದ ಅಧ್ಯಯನ ಮಾಡಿ, ಕೆಲವೊಂದು ಲಕ್ಷಣ, ಚಿಹ್ನೆ ಮತ್ತು ಫಲಿತಾಂಶಗಳಿಗೆ ಪ್ರಾಮುಖ್ಯ ನೀಡಿದರು. ಅವುಗಳಿಗೆ ಕೆಲವೊಂದು ಅಂಕಗಳನ್ನು ನಿಗದಿಪಡಿಸಿದರು. ಅವುಗಳ ಒಟ್ಟು ಅಂಕಗಳಿಂದ ಬಾಲಕ್ಷಯ ಇದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಲು ಮಾರ್ಗಸೂಚಿಯೊಂದನ್ನು ತಯಾರಿಸಿದರು. ಅದಕ್ಕೆ ಕೆನೆಥ್ ಜೋನ್ಸ್ ಮಾರ್ಗಸೂಚಿ ಎಂಬ ಹೆಸರು.



# ಬಾಲಕ್ಷಯ

ತಿನ್ನಿಸಿದರೆ ವಾಕರಿಸುವುದು. ಮೊದಲು ಆಗೊಮ್ಮೆ ಈಗೊಮ್ಮೆ ಕೆಮ್ಮುತ್ತಿದ್ದ ಮಗು, ರೋಗ ಉಲ್ಬಣಗೊಂಡಾಗ ಒಂದೇ ಸಮನೆ ಕೆಮ್ಮುತ್ತದೆ. ಕಫ ಬಂದಮೇಲೆ ನಿಟ್ಟುಸಿರು ಬಿಡಬಹುದು. ದೊಡ್ಡ ಮಕ್ಕಳಲ್ಲಿ ಕಫದೊಂದಿಗೆ ಒಮ್ಮೊಮ್ಮೆ ರಕ್ತವೂ ಬೀಳಬಹುದು. ಅಕಸ್ಮಾತ್ ಸೋಂಕು ಶ್ವಾಸಕೋಶದ ಪೊರೆಯುರಿತ ಉಂಟುಮಾಡಿದ್ದರೆ ಮಗುವು ಉಸಿರು ತೆಗೆದುಕೊಂಡಾಗ ನೋಯುವುದೆಂದು ಕೈಯಿಂದ ಎದೆಯನ್ನು ಒತ್ತಿಕೊಳ್ಳಬಹುದು. ಪೊರೆಯಲ್ಲಿ ಕೀವು ತುಂಬಿದಾಗ ವಿಪರೀತ ಚಳಿಬಂದು ಜ್ವರ ಬರುವುದು.

ರೋಗಿಯನ್ನು ಪರೀಕ್ಷಿಸಿದಾಗ ಶ್ವಾಸಕೋಶದ ಮೇಲುಹಾಲೆಯಲ್ಲಿ ಕರಕರ ಶಬ್ದ ಕೇಳಿಬರಬಹುದು. ಕೆಮ್ಮಿಸುವುದರಿಂದ ಈ ಶಬ್ದಗಳು ಇನ್ನೂ ಸ್ಪಷ್ಟವಾಗಿ ಕೇಳುವವು. ಮಕ್ಕಳು ನೋವಾಗುವುದೆಂದು ತೋರಿಸುವ ಜಾಗೆಯಲ್ಲಿ ಸ್ಟೆತೋಸ್ಕೋಪ್ ಇಟ್ಟಾಗ ತಲೆಗೂದಲು ತಿಕ್ಕಿದಾಗ ಉಂಟಾಗುವಥ ಶಬ್ದ ಕೇಳಬಹುದು. ಅಕಸ್ಮಾತ್ ಕೀವು ತುಂಬಿದ್ದರೆ ಉಸಿರಾಟದ ಶಬ್ದಗಳು ಕೇಳಿಸುವುದೇ ಇಲ್ಲ.

ಕ್ಷಯರೋಗದ ಬಗ್ಗೆ ಅಲ್ಪಸ್ವಲ್ಪ ಮಾಹಿತಿಯನ್ನು ರೇಡಿಯೋ ಹಾಗೂ ಪತ್ರಿಕೆಗಳ ಜಾಹಿರಾತಿನಿಂದ ಪಡೆದ ತಂದೆ ತಾಯಿಗಳು ಮಗು ಕೆಮ್ಮಿದಾಗ ಗಾಬರಿಪಡುವುದುಂಟು. ಕೆಮ್ಮು ಜ್ವರ ಬಂದಿದೆ ಎಂದಾಕ್ಷಣ ಕ್ಷಯರೋಗ ಬಂದಿದೆಯೆಂದು ಸಂಶಯ ತಾಳುವುದು ತರವಲ್ಲ. ಕೆಮ್ಮುವ ಎಲ್ಲ ಮಕ್ಕಳೂ ಕ್ಷಯರೋಗಿಗಳಲ್ಲ ಎಂಬುದನ್ನು ಪಾಲಕರು ನೆನಪಿಡಬೇಕು. ಹಾಗೆಂದು ಅಂತಹ ಮಕ್ಕಳತ್ತ ಅಲಕ್ಷ್ಯಸಲ್ಲದು. ಕ್ಷಯರೋಗವನ್ನು ನಿರ್ಧರಿಸಲು ಕೆಲವೊಂದು ನಿಶ್ಚಿತ ಪರೀಕ್ಷೆಗಳು ಅತ್ಯವಶ್ಯ.

### ಕ್ಷಯರೋಗದ ವಿವಿಧ ಮುಖಗಳು:

ಸಾಮಾನ್ಯವಾಗಿ ಎರಡು ಬಗೆಯ ಕ್ಷಯರೋಗಗಳು ಮಕ್ಕಳಲ್ಲಿ ಕಂಡುಬರುತ್ತವೆ:

೧. ಸ್ಥಾನಿಕ ಕ್ಷಯರೋಗ: ಕ್ಷಯದ ರೋಗಾಣುಗಳು ದೇಹದ ಯಾವ ಅಂಗಾಂಗಕ್ಕಾದರೂ ಮುತ್ತಿಗೆ ಹಾಕಿ ಮೆತ್ತಗೆ ಮಾಡಬಹುದು. ಸಾಮಾನ್ಯವಾಗಿ ಶ್ವಾಸಕೋಶಗಳು ಈ ತೊಂದರೆಗೊಳಗಾಗುತ್ತವೆ. ಮೂತ್ರಪಿಂಡ, ಕರುಳು,

ಆಂತ್ರಪಟಲ (Mesentery) ಉದರ ಪರಿವೇಷ್ಟನ ಪಟಲಗಳು, ಹಾಲ್ರಸ ಗ್ರಂಥಿಗಳು, ಮಿದುಳಿನ ಪೊರೆ, ಮೂಳೆ, ಕೀಲುಗಳು, ಕ್ಷಯರೋಗದ ರೋಗಾಣುಗಳ ಬಾಹುಬಂಧನದಲ್ಲಿ ತಲ್ಲಣಿಸಬಹುದು. ಚರ್ಮ, ಎಡ್ರಿನಲ್ ಗ್ರಂಥಿಗಳು ಈ ತೊಂದರೆಗೊಳಗಾಗಬಹುದು.

೨. ಕ್ಷಿಪ್ರ ಸಾಸುವೆ ಕಾಳು ಕ್ಷಯರೋಗ: ಶ್ವಾಸಕೋಶಕ್ಕೆ ರೋಗಾಣುಗಳು ಮುತ್ತಿಗೆ ಹಾಕಿದಾಗ ಸ್ಥಾನಿಕವಾಗಿ ರೋಗ ಬೆಳವಣಿಗೆ ಹೊಂದಿ ಗಿಣ್ಣದಂತಹ ವಸ್ತುವನ್ನು ಹೊಂದಿರುತ್ತದೆ. ಆ ಭಾಗದ ಸುತ್ತಮುತ್ತ ಇರುವ ರಕ್ತನಾಳಗಳಿಗೆ ರೋಗಾಣುಗಳಿಂದ ಕೂಡಿದ ಗಿಣ್ಣದಂತಹ ವಸ್ತುವು ಸೇರಿಕೊಂಡರೆ ರಕ್ತನಾಳಗಳ ಮೂಲಕ ದೇಹದ ಎಲ್ಲಾ ಭಾಗಗಳಿಗೆ ಹರಡುತ್ತದೆ. ರಕ್ತನಾಳಗಳ ಕೊನೆಯಲ್ಲಿರುವ ಲೋಮನಾಳಗಳಲ್ಲಿ ಸಿಕ್ಕು ಮುಂದೆ ಹೋಗದಂತಾದಾಗ ಆ ಭಾಗದ ಅಂಗಾಂಶ ನಶಿಸಿಹೋಗುತ್ತದೆ. ರಕ್ತ ಸಂಚಾರದಿಂದ ದೇಹದ ಎಲ್ಲ ಭಾಗಗಳಿಗೆ ಪಸರಿಸಿ ಎಲ್ಲಾ ಭಾಗಗಳಲ್ಲಿಯೂ ಕ್ಷಯ ರೋಗವನ್ನುಂಟು ಮಾಡುತ್ತದೆ. ಶ್ವಾಸಕೋಶದಲ್ಲೂ ರೋಗವು ಒಂದು ಭಾಗಕ್ಕೆ ಸೀಮಿತಗೊಳ್ಳದೆ ಶ್ವಾಸಕೋಶದ ಎಲ್ಲ ಭಾಗಗಳಿಗೂ ಹಬ್ಬಿ "ಸ್ನೋ-ಸ್ಟಾರ್ಮ್" ಆಕಾರ ಕ್ಷ ಕಿರಣದಲ್ಲಿ ಕಾಣುತ್ತದೆ. ಹಾಲ್ರಸ ಗ್ರಂಥಿಗಳು ರೋಗಾಣುಗಳ ಸಾಂದ್ರತೆ ಹೆಚ್ಚಾದಾಗ ಒಡೆಯುತ್ತವೆ. ಆಗ ಬಿಡುಗಡೆಯಾಗುವ ರೋಗಾಣುಗಳಿಂದ ಕೂಡಿದ ಗಿಣ್ಣದಂತಹ ವಸ್ತುವು ರಕ್ತನಾಳಗಳಿಗೆ ಸೇರಿಕೊಂಡು ಈ ರೀತಿಯ ಕ್ಷಯರೋಗವನ್ನುಂಟು ಮಾಡಬಹುದು.

### ರೋಗ ನಿದಾನ

ರೋಗಿಯು ವಿವರವಾದ ಪರೀಕ್ಷೆ, ರೋಗದ ಇತಿಹಾಸ, ಎದೆಯ ಕ್ಷ-ಕಿರಣಪಟಗಳ ಪರೀಕ್ಷೆ ಮತ್ತು ರಕ್ತ ಪರೀಕ್ಷೆ ಎಲ್ಲವನ್ನೂ ಕ್ರೋಢೀಕರಿಸಿದಾಗ ರೋಗನಿದಾನಕ್ಕೆ ಅನುಕೂಲವಾಗುತ್ತದೆ. ಕ್ಷಯರೋಗದ ರೋಗಾಣುಗಳನ್ನು ರೋಗಿಯ ಕಫ, ಹಾಲ್ರಸ ಗ್ರಂಥಿಗಳು ವಿಸರ್ಜಿಸಿರುವ ಸ್ರಾವಗಳನ್ನು ಚರ್ಮದ ಕಣಗಳಿಂದ ಬೇರ್ಪಡಿಸಿದಲ್ಲಿ ರೋಗವನ್ನು ಖಚಿತವಾಗಿ ನಿರ್ಣಯಿಸಲು ಅನುಕೂಲವಾಗುತ್ತದೆ. ಮಕ್ಕಳು ಸಾಮಾನ್ಯವಾಗಿ ಕೆಮ್ಮಿದಾಗ ದೊಡ್ಡವರ ಹಾಗೆ ಕಫವನ್ನು ಉಗುಳದೆ ನುಂಗುತ್ತವೆ. ಆದ್ದರಿಂದ ಕೆಮ್ಮಿದಾಗ ಕಫ ಬಾರದಿದ್ದರೆ ಹೊಟ್ಟೆ ತೊಳಿಸುವಿಕೆಯಿಂದ ಸಿಗುವ ತೊಳೆತವನ್ನು ಕ್ಷಯ ರೋಗಾಣುಗಳಿಗಾಗಿ ಪರೀಕ್ಷಿಸಬೇಕು.

ಮಕ್ಕಳ ರಕ್ತಪರೀಕ್ಷೆ ಮಾಡಿದಾಗ ಬಿಳಿಯ ರಕ್ತಕಣಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ಕಂಡುಬರುತ್ತದೆ. ಕೆಂಪು ರಕ್ತಕಣಗಳು ನೆಲೆಸುವ ವೇಗ (ESR) ಜಾಸ್ತಿಯಾಗಿರುತ್ತದೆ. ರೋಗ ನಿದಾನಕ್ಕೆ ಸಹಾಯಕವಾಗುವ ಇನ್ನೊಂದು ಮುಖ್ಯ ಸಾಧನವೆಂದರೆ ಮಾಂಟೋಕ್ಸ್ ಪರೀಕ್ಷೆ. ರೋಗಿಯ ಎಡ ಮುಂದೋಳನ್ನು ಸ್ವಚ್ಛಗೊಳಿಸಿ ೦.೧ ಮಿ.ಲಿ. ಟ್ಯೂಬರ್ ಕ್ಯೂಲಿನ್ನನ್ನು (ಪಿಪಿಡಿ) ಚರ್ಮದ ಅಡಿಯಲ್ಲಿ ಚುಚ್ಚಲಾಗುತ್ತದೆ. ಮಗುವಿನ ದೇಹದಲ್ಲಿ



# ಕ್ಷಯ

ಕ್ಷಯರೋಗವಿದ್ದರೆ ಈ ಚುಚ್ಚುಮದ್ದಿಗೆ ಅದು ಚುರುಕು ಪ್ರತಿಕ್ರಿಯೆ ತೋರಿಸುತ್ತದೆ. ಪರಿಣಾಮವಾಗಿ ಸ್ಥಾನಿಕ ಕಾಯಿಗಟ್ಟುವಿಕೆ ಉಂಟಾಗುತ್ತದೆ. ೭೨ ತಾಸುಗಳ ನಂತರ ಉಂಟಾದ ಕಾಯಿಗಟ್ಟುವಿಕೆಯ ಪ್ರಮಾಣಕ್ಕೆ ಪರೀಕ್ಷಿಸಬೇಕು. ಕಾಯಿಗಟ್ಟುವಿಕೆಯ ಪ್ರಮಾಣಕ್ಕೆ ತಕ್ಕ ಗ್ರೇಡನ್ನು ನಿರ್ಧರಿಸಲಾಗುವುದು.

ಸಾಮಾನ್ಯವಾಗಿ ಕಾಯಿಗಟ್ಟುವಿಕೆಯ ಪ್ರಮಾಣ ೧೦ ಮಿ.ಮಿ. ಅಥವಾ ಹೆಚ್ಚಿಗೆ ಇದ್ದರೆ ಮಗು ಕ್ಷಯರೋಗದಿಂದ ಬಳಲುತ್ತಿದೆ ಎಂದು ನಿರ್ಧರಿಸಲಾಗುತ್ತದೆ. ಮಿದುಳಿನ ಪೊರೆಗೆ ಪಸರಿಸಿದ ಕ್ಷಯದಲ್ಲಿ ಬೆನ್ನು ಹುರಿಯ ದ್ರವದ ವಿಶ್ಲೇಷಣೆ ಅಥವಾ ದ್ರವವನ್ನು ಕ್ಷಯರೋಗಾಣುವಿಗಾಗಿ ಪರೀಕ್ಷಿಸುವುದು ರೋಗ ನಿದಾನದಲ್ಲಿ ಸಹಾಯಕವಾಗುತ್ತದೆ.

**ಚಿಕಿತ್ಸೆ**

ಕ್ಷಯ ಬಂದರೆ ಸಾವು ಕಟ್ಟಿಟ್ಟ ಬುತ್ತಿ ಎನ್ನುವ ಕಾಲವೊಂದಿತ್ತು. ಆದರೆ ಇಂದು ಆ ಪರಿಸ್ಥಿತಿಯಿಲ್ಲ. ಕ್ಷಯರೋಗ ಚಿಕಿತ್ಸೆಗಾಗಿ ಸಾಕಷ್ಟು ಶಕ್ತಿಶಾಲಿ ಔಷಧಗಳಿವೆ. ಅವು ಜನಸಾಮಾನ್ಯರಿಗೆ ಎಟಕುವ ದರದಲ್ಲಿಯೂ ಲಭ್ಯವಾಗಿವೆ. ಅಲ್ಲದೆ ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಯೋಜನೆಯ ಅಡಿಯಲ್ಲಿ ಸಾಕಷ್ಟು ಔಷಧಗಳ ಸರಬರಾಜನ್ನು ಸರಕಾರವು ಆಸ್ಪತ್ರೆಗಳ ಮೂಲಕ ಮಾಡುತ್ತಿದೆ. ಚಿಕಿತ್ಸೆಯನ್ನು ಆಸ್ಪತ್ರೆಯ ಆವರಣದಲ್ಲಿಯೇ ಪಡೆಯಬೇಕೆಂಬ ನಿರ್ಬಂಧವೂ ಇಲ್ಲ. ಬೇಕೆಂದರೆ ಮನೆಯಲ್ಲಿಯೇ ಪಡೆಯಬಹುದು. ಮನೆಯ ಬಾಗಿಲಿಗೆ ಆರೋಗ್ಯ ಇಲಾಖೆಯ ಕಾರ್ಯಕರ್ತ ಔಷಧ ತಂದು ನೀಡುತ್ತಾನೆ. ಇಷ್ಟಾದರೂ ಈ ಕ್ಷಯದ ಹಾವಳಿ ಕಡಿಮೆಯಾಗಿಲ್ಲ. ಇಂದು ಜನಜಾಗೃತಿಯ ಅವಶ್ಯಕತೆ ಬಹಳ ಇದೆ. ಲಭ್ಯವಿರುವ ಸೌಲಭ್ಯಗಳ ಸದುಪಯೋಗವನ್ನು ಸಂಪೂರ್ಣ ತೆಗೆದುಕೊಳ್ಳುವ ಮನೋಭಾವ ಜನರಲ್ಲಿ ಬೆಳೆದು ಬರಬೇಕಾಗಿದೆ. ತೊಂದರೆಯಿದ್ದಾಗ ಚಿಕಿತ್ಸೆ ತಪ್ಪದೆ ಪಡೆದು ಅದನ್ನು ನಿಗದಿಪಡಿಸಿದ ನಿರ್ದಿಷ್ಟ ಕಾಲಾವಧಿಯವರೆಗೆ ಮುಂದುವರೆಸಿಕೊಂಡು ಹೋಗದೇ ಜ್ವರ-ಕೆಮ್ಮು ಕಡಿಮೆಯಾಗಿ ಹಸಿವು ಪ್ರಾರಂಭವಾದಾಗ ಸಂಪೂರ್ಣ ಗುಣವಾಗಿದೆ ಎಂದು ತಿಳಿಯುವದು ತಪ್ಪು. ಇದರಿಂದ ಹಗ್ಗವು ಹರಿಯದು,

ಕೋಲು ಮುರಿಯದ ಸ್ಥಿತಿ ಉಂಟಾಗುತ್ತದೆ. ಹೀಗೆ ಅರ್ಧಂಬರ್ಧ ಚಿಕಿತ್ಸೆ ಪಡೆದವರಲ್ಲಿ ರೋಗ ಮತ್ತೆ ಮರುಕಳಿಸುತ್ತದೆ. ಅಲ್ಲದೆ ರೋಗಾಣುಗಳು ಔಷಧಗಳಿಗೆ ಪ್ರತಿರೋಧಕ ಶಕ್ತಿ ಬೆಳೆಸಿಕೊಳ್ಳಲು ಅವಕಾಶ ಮಾಡಿಕೊಟ್ಟಂ ತಾಗುತ್ತದೆ. ಇದರಿಂದಾಗಿ ರೋಗಿಗಷ್ಟೇ ಅಲ್ಲ, ಸಮಾಜಕ್ಕೂ ತುಂಬಲಾರದ ನಷ್ಟವಾಗುತ್ತದೆ ಎಂಬುದನ್ನು ಎಲ್ಲರೂ ತಿಳಿಯಬೇಕಾದದ್ದು ಅತ್ಯವಶ್ಯ.

ದೀರ್ಘಕಾಲಿಕ ಚಿಕಿತ್ಸೆಯಿಂದಾಗಿ ಚಿಕಿತ್ಸೆಯನ್ನು ಸಂಪೂರ್ಣ ಕಾಲಾವಧಿ ಯವರೆಗೆ ತೆಗೆದುಕೊಳ್ಳದವರ ಸಂಖ್ಯೆ ಹೆಚ್ಚಾಗುತ್ತಿರುವುದನ್ನು ಪರಿಗಣಿಸಿದ ಸಂಶೋಧಕರು ಈಗ ಅಲ್ಪ ಕಾಲಾವಧಿಯ ಚಿಕಿತ್ಸೆಯನ್ನು ಶಕ್ತಿಶಾಲಿ ಪರಿಣಾಮಕಾರಿ ಔಷಧಗಳ ಬಳಕೆಯಿಂದಾಗಿ ಆಚರಣೆಯಲ್ಲಿ ತಂದಿದ್ದಾರೆ. ಚಿಕಿತ್ಸೆ (ಯಾವುದೇ ಇರಲಿ, ಕ್ರಮಬದ್ಧವಾಗಿ ಸೂಚಿಸಿದ ಪ್ರಮಾಣದಲ್ಲಿ ನಿಗದಿ ಪಡಿಸಿದ ವೇಳೆಯ) ವರೆಗೆ ತಪ್ಪದೆ ಪಡೆಯುವುದು ಅನಿವಾರ್ಯ ಎಂಬುದನ್ನು ಮರೆಯಬಾರದು.

ಚಿಕಿತ್ಸೆಗಾಗಿ ಸ್ಟ್ರೆಪ್ಟೋಮೈಸಿನ್, ಐಸೋನಿಕೋಟಿನಿಕ್ ಆಸಿಡ್ ಹೈಡ್ರಸೈಡ್, ರಿಫಾಂಪೈಸಿನ್, ಇಂಥಂಬುಟಾಲ್, ಪೈರಿಜಿನಾಮೈಡ್ ಔಷಧಿಗಳನ್ನು ಮಗುವಿನ ತೂಕಕ್ಕೆ ತಕ್ಕಂತೆ ಕೊಡಲಾಗುವುದು.

ಕ್ಷಯರೋಗದವರನ್ನು ಮನೆಯಲ್ಲಿ ಆರೈಕೆ ಮಾಡುವಾಗ ಆರೋಗ್ಯಕರ ವಾತಾವರಣವನ್ನು ಕಲ್ಪಿಸಬೇಕು. ಮಗುವನ್ನು ಸಾಕಷ್ಟು ಗಾಳಿ-ಬೆಳಕುಗಳಿರುವ ಕೊಠಡಿಯಲ್ಲಿರಿಸುವುದು ಒಳ್ಳೆಯದು. ಔಷಧೋಪಚಾರದ ಜೊತೆಗೆ ಪೌಷ್ಟಿಕ ಆಹಾರವನ್ನು ಕೊಡುವುದು ಹೆಚ್ಚು ಉಪಯುಕ್ತ.

**ಪ್ರತಿಬಂಧಕೋಪಾಯಗಳು**

೧. ರೋಗಿಗಳನ್ನು ಪ್ರತ್ಯೇಕಿಸಬೇಕು. ಕಂಡ ಕಂಡಲ್ಲಿ ಕ್ಯಾಕರಿಸಿ ಉಗುಳು ವದನ್ನು ನಿಷೇಧಿಸಬೇಕು. ರೋಗಿಗಳಿಗೆ ಒಂದು ಪ್ರತ್ಯೇಕ ಪಾತ್ರೆಯಲ್ಲಿ ಕಫವನ್ನು ಉಗುಳಲು ಹೇಳಬೇಕು. ನಂತರ ಕ್ರಿಮಿನಾಶಕಗಳನ್ನು ಬಳಸಿ ಕಫವನ್ನು ನಾಶಗೊಳಿಸಬೇಕು.

೨. ರೋಗಿಗಳಿಗೆ ಸಂಪೂರ್ಣ ಚಿಕಿತ್ಸೆಯನ್ನು ಸಕಾಲಕ್ಕೆ ನೀಡಬೇಕು.

೩. ರೋಗಿಯೊಡನೆ ಸಂಪರ್ಕವನ್ನು ತೊರೆಯುವುದೇ ರೋಗ ತಡೆಗ ಟ್ಟುವ ಮುಖ್ಯ ವಿಧಾನ. ದೇಹವನ್ನು ಸದೃಢವಾಗಿ ಇಟ್ಟುಕೊಂಡು ನಿಃಶಕ್ತಿಯನ್ನು ತಡೆಗಟ್ಟುವುದರಿಂದ ಹಾಗೂ ದೇಹವನ್ನು ನಶಿಸುವಂತಹ ದೀರ್ಘಕಾಲಿಕ ಕಾಯಿಲೆಗಳನ್ನು ತಡೆಗಟ್ಟುವುದರಿಂದ ದೇಹದಲ್ಲಿ ಪ್ರತಿರೋಧಕ ಶಕ್ತಿ ಹೆಚ್ಚಾಗುತ್ತದೆ. ಮಕ್ಕಳಿಗೆ ಆರೋಗ್ಯದ ರಕ್ಷಣೆ ಅತಿ • ಮುಖ್ಯ. ಅವು ಕ್ಷಯ ರೋಗಿಗಳ ಸಂಪರ್ಕ ಬಾರದಂತೆ ನೋಡಿಕೊಳ್ಳಬೇಕು. ಒಳ್ಳೆಯ ಆಹಾರ ವಿಹಾರವಿದ್ದಲ್ಲಿ ರೋಗವು ಮಗುವಿನ ಸನಿಹದಲ್ಲಿ ಬರಲು ಹಿಂದೇಟು ಹಾಕುತ್ತದೆ. ಮಗುವಿನ ರೋಗ ಪ್ರತಿರೋಧಕ ಶಕ್ತಿಯನ್ನು ಕುಗ್ಗಿಸುವ ಸೋಂಕು ರೋಗಗಳಾದ ನಾಯಿಕೆಮ್ಮು, ದಡಾರ, ಮಂಗನ ಬಾವುಗಳು



# ಬಾಲಕ್ಷಯ

ಬಾರದಂತೆ ಮುಂಜಾಗ್ರತಾ ಕ್ರಮ ತೆಗೆದುಕೊಳ್ಳುವುದು ಒಳ್ಳೆಯದು. ಅಪೌಷ್ಟಿಕತೆ, ಅತಿಸಾರದ ತಿರುಗಣಿ ಮಡುವಿನಲ್ಲಿ ಮಗು ಸಿಕ್ಕಿಬೀಳದಂತೆ ನೋಡಿಕೊಳ್ಳಬೇಕು. ಇವೆಲ್ಲವುಗಳಿಂದ ಮಗುವಿನಲ್ಲಿಯ ರೋಗ ಪ್ರತಿರೋಧಕ ಶಕ್ತಿ ಕುಗ್ಗುತ್ತದೆ.

೪. ಬಿ.ಸಿ.ಜಿ. ಚುಚ್ಚುಮದ್ದು ಕೊಡಿಸಬೇಕು.

ಎಲ್ಲ ನವಜಾತ ಶಿಶುಗಳಿಗೂ ಹುಟ್ಟಿದ ತಕ್ಷಣ, ಸಾಧ್ಯವಾಗದಿದ್ದರೆ ತಿಂಗಳ ಒಳಗೆ ಬಿಸಿಜಿ ಕೊಡಿಸಬೇಕು. ಯಾವುದೇ ಪರಿಸ್ಥಿತಿಯಲ್ಲಿ ಮಗು ಮೊದಲನೆಯ ಹುಟ್ಟುಹಬ್ಬ ಆಚರಿಸುವ ಮುನ್ನ ಮೊದಲ ಬಿಸಿಜಿ ಚುಚ್ಚುಮದ್ದನ್ನು ಕೊಡಿಸುವುದು ತಂದೆ-ತಾಯಿಗಳ ಆದ್ಯ ಕರ್ತವ್ಯ ಎಂಬುದನ್ನು ಮರೆಯಬಾರದು.

೦.೧ ಮಿ.ಲೀ. ಬಿಸಿಜಿ ಲಸಿಕೆಯನ್ನು ಎಡಗೈ ಮುಂಡಿಯಮೇಲೆ ಚರ್ಮದಲ್ಲಿ ಕೊಡಲಾಗುವುದು. ಇದರಿಂದ ದೊರೆಯುವ ರಕ್ಷಣೆ ತಾತ್ಕಾಲಿಕ. ನಾಲ್ಕೈದು ವರ್ಷಗಳು ಮಾತ್ರ. ಆದ್ದರಿಂದ ಮಗುವಿಗೆ ಐದು ವರ್ಷಗಳಾದ ನಂತರ, ಹಾಗೂ ಹತ್ತು ವರ್ಷಗಳಾದಾಗ ಮತ್ತೆ ಲಸಿಕೆಯನ್ನು ಕೊಡಿಸಬೇಕು. ಇಂದು ಬಿಸಿಜಿ ಲಸಿಕೆಯಿಂದ ಸಿಗಬಹುದಾದ ರಕ್ಷಣೆಯ ಬಗ್ಗೆ ಸಂಶಯವಿದೆ. ಸಾಕಷ್ಟು ಭಿನ್ನಾಭಿಪ್ರಾಯಗಳೂ ಇವೆ. ಆದರೆ ಇದಕ್ಕೆ ಪರ್ಯಾಯವಾದ ಪ್ರಬಲ ರಕ್ಷಣಾ ಚುಚ್ಚುಮದ್ದನ್ನು ಕಂಡು ಹಿಡಿಯುವವರೆಗೆ ಈಗಿರುವುದನ್ನು ಬಳಸಿಕೊಂಡು ಸಂತೃಪ್ತರಾಗಬೇಕಾಗಿದೆ.

೫. ಆರೋಗ್ಯ ಶಿಕ್ಷಣ: ಕೆಮ್ಮುವ ಕ್ರಮ, ಕಫ ನಾಶಗೊಳಿಸುವಿಕೆ ನಿಯಮಿತವಾದ ಔಷಧಿಯ ಸೇವನೆ, ಹುಟ್ಟಿದ ಎಲ್ಲಾ ಮಕ್ಕಳಿಗೂ ಬಿಸಿಜಿ ಲಸಿಕೆ ಹಾಕಿಸುವ ಮನೋಭಾವ ಜನರಲ್ಲಿ ಬೆಳೆಯುವಂತೆ ಮಾಡುವುದು, ನೊರೆಹಾಲು ಕುಡಿಸಿದರೆ ಮಕ್ಕಳು ಗಟ್ಟಿಯಾಗುತ್ತಾರೆಂಬ ನಂಬಿಕೆಯನ್ನು ತೊರೆದು ಹಾಲನ್ನು ಕುದಿಸಿ ಕುಡಿಯಲು ಹೇಳುವುದು, ರೋಗದ ನೆಲೆ, ರೋಗಕಾರಕ ಅಣುಗಳು, ರೋಗದ ವಿಕಾಸ, ಕಾಯಿಲೆಯ ಪ್ರಾರಂಭದ ಹಂತದಲ್ಲಿ ಕಂಡುಬರುವ ಲಕ್ಷಣಗಳ ಬಗ್ಗೆ ಸಾರ್ವಜನಿಕರಿಗೆ ಸಾಕಷ್ಟು ತಿಳುವಳಿಕೆ ಮಾಡಿಕೊಡುವುದು.

೬. ಯಾರ ಮನೆಯಲ್ಲಿ ಕ್ಷಯರೋಗಿಗಳಿರುತ್ತಾರೆಯೋ ಅಂತಹ ಮನೆಯಲ್ಲಿರುವ ಮಕ್ಕಳಿಗೆ ರೋಗಿಗಳ ನಿಕಟ ಸಂಪರ್ಕ ಬರುವುದರಿಂದ ಮಕ್ಕಳಿಗೆ ತೂಕಕ್ಕೆ ತಕ್ಕಂತೆ ಐ.ಎನ್.ಎಚ್. ಗುಳಿಗೆಗಳನ್ನು ಒಂದು ವರ್ಷಕಾಲ ಕೊಡಬೇಕು. ಇಂತಹ ಮಕ್ಕಳಲ್ಲಿ ಕಂಡುಬರಬಹುದಾದ ಅತ್ಯಂತ ಸೌಮ್ಯ ಸ್ವರೂಪದ ಸೋಂಕನ್ನು ಇದು ಗುಣಪಡಿಸಲು ಸಹಾಯಕವಾಗುತ್ತದೆ.

೭. ಜನತೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವುದು, ಗಾಳಿ-ಬೆಳಕು ಚೆನ್ನಾಗಿ ಬರುವಂತೆ ಮನೆಗಳನ್ನು ಕಟ್ಟಿಸಿಕೊಂಡು ವಾಸಿಸಬೇಕು. ಪೋಷಣೆ ಚೆನ್ನಾಗಿರಬೇಕು. ಆರೋಗ್ಯಕರ ಅಭ್ಯಾಸಗಳನ್ನು ರೂಢಿಸಿಕೊಳ್ಳಬೇಕು.

೮. ಎರಡುವಾರಗಳಿಗಿಂತ ಹೆಚ್ಚು ಅವಧಿಯ ಜ್ವರ, ಕೆಮ್ಮು, ಕಾರಣವರಿಯದ ನಿಃಶಕ್ತಿ, ಶರೀರದ ತೂಕ ಕಡಿಮೆಯಾಗುವುದು, ಭಾರವಾದ ಭಾವನೆ ಬಂದಲ್ಲಿ ಹಾಗೂ ದೇಹಾಲಸ್ಯಗಳು ಮೈದೋರಿದಲ್ಲಿ ಕೂಡಲೇ ವೈದ್ಯರಲ್ಲಿಗೆ ಹೋಗಿ ವಿವರವಾದ ಪರೀಕ್ಷೆ ಮಾಡಿಸಿಕೊಂಡು ಕ್ಷಯರೋಗ ಬಂದಿಲ್ಲವೆನ್ನುವುದನ್ನು ಖಚಿತಪಡಿಸಿಕೊಳ್ಳಬೇಕು.



ಈ ಕೆಳಗಿನ ಸಂದರ್ಭಗಳಲ್ಲಿ ಪ್ರತಿಯೊಂದಕ್ಕೆ ಮೂರು ಅಂಕಗಳನ್ನು ನೀಡಬೇಕು:

೧. ರೋಗಿಗಳಲ್ಲಿ ಕ್ಷಯರೋಗದ ರೋಗಾಣುಗಳು ಇದ್ದುದು ಖಚಿತವಾದರೆ,

೨. ರೋಗಿಗಳಲ್ಲಿ ಕ್ಷಯರೋಗದ ಗ್ರ್ಯಾನುಲೋಮಾ (Granuloma) ಇದ್ದರೆ,

೩. ಮಾಂಟೆಕ್ಸ್ ಪರೀಕ್ಷೆ ಸಕಾರಾತ್ಮಕವಾಗಿದ್ದು ಸ್ಥಾನಿಕ ಕಾಯಿಗಟ್ಟುವಿಕೆ ೧೦ ಮಿ.ಮಿ. ಗಳಿಗಿಂತ ಹೆಚ್ಚಾಗಿದ್ದರೆ.

ಈ ಕೆಳಗಿನ ಸಂದರ್ಭಗಳಲ್ಲಿ ಪ್ರತಿಯೊಂದಕ್ಕೆ ಎರಡು ಅಂಕಗಳನ್ನು ಕೊಡಬೇಕು:

೧. ಎದೆಯ ಕ್ಷ-ಕಿರಣ ಚಿತ್ರ ಕ್ಷಯರೋಗ ಸೂಚಕವಾಗಿದ್ದಲ್ಲಿ,

೨. ಭೌತಿಕ ಪರೀಕ್ಷೆ ಕ್ಷಯರೋಗದತ್ತ ಬೊಟ್ಟುಮಾಡಿತೋರಿಸುತ್ತಿದ್ದಲ್ಲಿ

೩. ಸಕಾರಾತ್ಮಕ ಮಾಂಟೆಕ್ಸ್ ಪರೀಕ್ಷೆಯಲ್ಲಿರುವ ಸ್ಥಾನಿಕ ಕಾಯಿಗಟ್ಟುವಿಕೆ ೫ ರಿಂದ ೧೦ ಮಿ.ಮಿ. ಇದ್ದಲ್ಲಿ,

೪. ನಕಾರಾತ್ಮಕ ಮಾಂಟೆಕ್ಸ್ ಪರೀಕ್ಷೆ ಸಕಾರಾತ್ಮಕವಾಗಿ ಮಾರ್ಪಾಡು ಹೊಂದಿದಲ್ಲಿ,

೫. ಕಫದಲ್ಲಿ ರೋಗಾಣುಗಳಿರುವ ರೋಗಿಯೊಡನೆ ಮಗುವು ಸಂಪರ್ಕ

ಪಡೆದಿದ್ದಲ್ಲಿ,

೬. ತೀವ್ರ ಸ್ವರೂಪದ ಅಪೌಷ್ಟಿಕತೆಗೆ ತುತ್ತಾಗಿದ್ದಲ್ಲಿ,

೭. ಮಗು ದಡಾರ, ನಾಯಿಕೆಮ್ಮುಗಳಿಂದ ನರಳಿದ ಮೂರು ತಿಂಗಳೊಳಗೆ ಬಾಲಕ್ಷಯದ ಲಕ್ಷಣಗಳು ಕಂಡುಬಂದಲ್ಲಿ,

ಈ ಕೆಳಗಿನ ಸಂದರ್ಭಗಳಲ್ಲಿ ಪ್ರತಿಯೊಂದಕ್ಕೆ ಒಂದು ಅಂಕವನ್ನು ನೀಡಬೇಕು:

೧. ಅನಿಶ್ಚಿತ ಎದೆಯ ಕ್ಷ-ಕಿರಣ ಚಿತ್ರ,

೨. ಹೊಂದಿಕೊಳ್ಳಬಹುದಾದ ಭೌತಿಕ ಪರೀಕ್ಷೆ,

೩. ರೋಗಾಣುರಹಿತ ಕಫದ ಕ್ಷಯರೋಗಿಯ ಜೊತೆ ಮಗು ನಿಕಟ ಸಂಪರ್ಕ ಹೊಂದಿದ್ದರೆ,

೪. ಅನಿಶ್ಚಿತ ಗ್ರ್ಯಾನುಲೋಮಾ,

೫. ಎರಡು ವರ್ಷದೊಳಗಿನ ಮಗು,

೬. ಸೌಮ್ಯ ಮತ್ತು ಮಧ್ಯಮ ತರಗತಿಯ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಗು.

ವಿಶೇಷ ಸೂಚನೆ: ಮಗುವಿಗೆ ಬಿಸಿಜಿ ಲಸಿಕೆಯನ್ನು ಕೊಟ್ಟಿದ್ದರೆ ಕ್ರೋಢೀಕರಿಸಿದ ಒಟ್ಟು ಅಂಕಗಳಲ್ಲಿ ಒಂದು ಅಂಕವನ್ನು ಕಡಿಮೆ ಮಾಡಬೇಕು.

ಪರೀಕ್ಷೆ ಮಾಡಿದ ಮಗುವಿನಲ್ಲಿ ಕಂಡುಬರುವ ಲಕ್ಷಣ, ಚಿಹ್ನೆ ಮತ್ತು ಪ್ರಯೋಗಶಾಲೆಯ ಫಲಿತಾಂಶಗಳಿಗೆ ನಿಗದಿಪಡಿಸಿದ ಪ್ರಕಾರ ೩, ೨, ೧ ಅಂಕಗಳನ್ನು ಕೊಟ್ಟು ಗಳಿಸಿದ ಎಲ್ಲ ಅಂಕಗಳನ್ನು ಸಂಕಲನ ಮಾಡಬೇಕು. ಮಗು ಪಡೆದ ಒಟ್ಟು ಅಂಕಗಳ ಆಧಾರದ ಮೇಲೆ ಬಾಲಕ್ಷಯದ ಇರುವಿಕೆಯ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಲು ಸಾಧ್ಯ.



Printed & Published by **S. K. KATOTE** on behalf of
Loka Shikshna Trust at Samyukta Karnataka
Press, Koppikar Road, Hubli-580020. (Phone: 364303)
No. 2, Residency Road, Bangalore-560025. (Phone: 2214366)

**Managing Editor: K. SHAMARAO**
**Registered with the Registrar of Newspaper**
**for India under No. 3633/57**




# ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆಯ ಪ್ರಕಟಣೆಗಳು

## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ಪಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

